ಕರ್ನಾಟಕ ಸರಕಾರ





ಸಂಕೀರ್ಣ

# ಏಕಾಂಕ ನಾಟಕಗಳು

ಚಂದ್ರಕಾಂತ ಕುಸನೂರ

033,2k
M3k

ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ, 89

ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ
ಮಂದಿರಕ್ಕೆ ದಾವಣಗೆರೆ ವೇ|| ಬಿ. ಎಂ. ಚನ್ನಬಸಯ್ಯನವರು
ಸಮರ್ಪಿಸಿದ್ದು.
20-1-1988 ನೇ ಬುಧವಾರ

# ಏಕಾಂಕ ನಾಟಕಗಳು

## (ಸಂಕಲನ)

1024

ಸಂಪಾದಕರು

**ಚಂದ್ರಕಾಂತ ಕುಸನೂರ**

SRI JAGADGURU VISHWARADHYA
JNANA SIMHASAN JNANAMANDIR
**LIBRARY**
Jangamawadi Math, Varanasi
Acc. No. ........................................ 1024

1024



**ವಿಶ್ವ ಕನ್ನಡ ಸಮ್ಮೇಳನ**
**14-3 ಎ, ನೃಪತುಂಗ ರಸ್ತೆ,**
**ಬೆಂಗಳೂರು-560 002**

Vishwa Kannada Sahitya Male

EKAANKA NATAKAGALU by Chandrakantha Kusanura

Published by K. Jayacharya, K.A.S., Additional Director, Directorate, of Kannada & Culture (Vishwa Kannada Sammelana), 14/3 A, Nrupathunga Road, Bangalore-560 002.

033,2x
M3K

1024

ಹಕ್ಕುಗಳು : ಆಯಾ ಲೇಖಕರದು

1983. 5,000 Copies

SRI JAGADGURU VISHWARADHYA
JNANA SIMHASAN JNANAMANDIR
LIBRARY
Jangamwadi Math, VARANASI.
Acc. No. 1024
618 1024

ಬೆಲೆ : ಮೂರು ರೂಪಾಯಿಗಳು

ಅಶ್ವಥ್ ಪ್ರಿಂಟರ್ಸ್
೪೪೬೩, ೪೪ನೇ ಅಡ್ಡರಸ್ತೆ, ಒಂದನೇ ಮುಖ್ಯರಸ್ತೆ,
೮ನೇ ಹಂತ, ಜಯನಗರ, ಬೆಂಗಳೂರು-೫೬೦೦೮೨

ಆರ್. ಗುಂಡೂರಾವ್
ಮುಖ್ಯಮಂತ್ರಿ



ವಿಧಾನಸೌಧ
ಬೆಂಗಳೂರು

ದಿನಾಂಕ: ೧೮-೯-೮೨

## ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ

ಸವಿ ನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ: ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರದ ಸಾಹಿತ್ಯ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು, ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯಮಾಲೆಯ ಈ ಕೃತಿರತ್ನಗಳನ್ನು ಸಹೃದಯ ವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆ ಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆ ಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನ ಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್

ಮುಖ್ಯಮಂತ್ರಿ

# ಮುನ್ನುಡಿ

ಹಿಂದಿನ ಕೆಲವು ವರ್ಷಗಳಿಂದ ಕನ್ನಡ ರಂಗಭೂಮಿಯು ತುಂಬ ಲವಲವಿಕೆಯಿಂದ ಬೆಳೆಯತೊಡಗಿದೆ. ನಾಡಿನ ಅನೇಕ ಕಡೆಗಳಲ್ಲಿ ಹವ್ಯಾಸಿ ತಂಡಗಳು ಹುಟ್ಟಿಕೊಂಡಿವೆ. ಬೆಂಗಳೂರಿನಲ್ಲಂತೂ ರಂಗ ಚಟುವಟಿಕೆಗಳು ತುಂಬ ಗಮನಾರ್ಹವಾಗಿವೆ. ಬಿಡಿ ಪ್ರಯೋಗಗಳು ಹಾಗೂ ಸ್ಪರ್ಧೆಗಳು ಮೇಲಿಂದ ಮೇಲೆ ನಡೆಯುತ್ತಿವೆ. ನಾಟಕ ಪ್ರಯೋಗಗಳ ಜೊತೆಗೆ ನಾಟಕ ಸಾಹಿತ್ಯವೂ ಬೆಳೆಯುತ್ತಿದೆ. ಆದರೆ ರಂಗಕರ್ಮಿಗಳ ಬೇಡಿಕೆಯಂತೆ ನಾಟಕಗಳು ಸಿಗುತ್ತಿಲ್ಲ. ಪ್ರಯೋಗಗಳ ವೇಗಕ್ಕೆ ಹೊಂದಿಕೊಳ್ಳುವುದು ನಾಟಕಕಾರರಿಗೆ ಸಾಧ್ಯವಾಗುತ್ತಿಲ್ಲ. ರಂಗ ಪ್ರಯೋಗ ಮತ್ತು ರಂಗ ಸಾಹಿತ್ಯದ ನಿರ್ಮಿತಿ ಇವೆರಡೂ ಬೇರೆ ಬೇರೆ ಮಾಧ್ಯಮಗಳಾಗಿದ್ದು, ಎರಡಕ್ಕೂ ತಮ್ಮದೇ ಆದ ಪರಿಮಿತಿಗಳಿವೆ, ಈ ಪರಿಮಿತಿಗಳಿಂದಲೇ ನಾಟಕ ಸಾಹಿತ್ಯದ ಕೊರತೆ ಎದ್ದು ಕಾಣಿಸುವಂತಹದ್ದಾಗಿದೆ. ಇದರಿಂದಾಗಿ ಬೇರೆ ಭಾಷೆಯಿಂದ ಅನುವಾದಗೊಂಡ ನಾಟಕಗಳು ರಂಗಭೂಮಿಯ ಮೇಲೆ ಬರತೊಡಗಿದ್ದು ಆಶ್ಚರ್ಯವೇನಲ್ಲ. ಇತ್ತೀಚೆಗೆ, ಕಥೆ ಮತ್ತು ಕಾದಂಬರಿಗಳನ್ನು ನಾಟಕಕ್ಕೆ ರೂಪಾಂತರಿಸಿ ಪ್ರಯೋಗಿಸುವ ಕೆಲಸ ನಡೆಯುತ್ತಿದೆ. ಇದೊಂದು ಬಹಳ ಸಂತೋಷಕರ ಸಂಗತಿಯೆಂದು ಹೇಳಬಹುದಾಗಿದೆ. ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಲ್ಲಿ ಅಡಗಿದ್ದ ನಾಟ್ಯಾಂಶವನ್ನು ಅಥವಾ ನಾಟ್ಯ ಗುಣವನ್ನು ಗುರುತಿಸಿ, ಅವುಗಳನ್ನು ದೃಶ್ಯ ಮಾಧ್ಯಮಕ್ಕೆ ಅಳವಡಿಸಿಕೊಂಡು ರಂಗಭೂಮಿಯ ಮೇಲೆ ತರುವುದು ಅತ್ಯಂತ ಸ್ತುತ್ಯವಾದಂಥ ಕೆಲಸವೇ ಸರಿ. ಇಂತಹ ಕೆಲವು ಕೃತಿಗಳು ರಂಗಭೂಮಿಯ ಮೇಲೆ ಒಂದು ಸಾರ್ಥಕತೆಯನ್ನು ಪಡೆದುಕೊಂಡಿವೆ.

ರಂಗ ಕೃತಿ ನಿರ್ದೇಶಕನ ಸಂಪೂರ್ಣ ಸ್ವತಂತ್ರ ಕೃತಿಯಾಗಿರುವುದರಿಂದ ಅದರ ಸೋಲು ಗೆಲುವಿನ ಜವಾಬ್ದಾರಿಯನ್ನು ನಿರ್ದೇಶಕನೇ ವಹಿಸಿಕೊಳ್ಳಬೇಕಾಗುತ್ತದೆ. ಹೀಗಿರುವಾಗಲೂ ನಿರ್ದೇಶಕನ ಕೃತಿಕಾರನ ಮೂಲ ಆಶಯಕ್ಕೆ ಧಕ್ಕೆ ಬಾರದಂತೆ ನೋಡಿಕೊಳ್ಳುವುದು ಅನಿವಾರ್ಯ. ನಿರ್ದೇಶಕನ ರಂಗ ಕೃತಿಯಿಂದ ಮೂಲ ಕೃತಿಯ ಸೌಂದರ್ಯ, ಅರ್ಥವಂತಿಕೆ, ಹೆಚ್ಚಾಗಬೇಕೇ ಹೊರತು ಕೃತಿಯ ಆಶಯಕ್ಕೆ ಚ್ಯುತಿ ಬರಬಾರದು.

ಮೇಲಿನ ಮಾತುಗಳು ಸಾಮಾನ್ಯವಾಗಿ ಇಂದಿನ ಕನ್ನಡದ ಪೂರ್ಣಾವಧಿಯ ನಾಟಕಗಳಿಗೆ ಅನ್ವಯಿಸುತ್ತವೆ. ಇಂದಿನವರೆಗೆ ಪೂರ್ಣಾವಧಿಯ ನಾಟಕ ಮತ್ತು ಅವುಗಳ ಪ್ರಯೋಗಗಳ ಬಗ್ಗೆ ಎಷ್ಟೊಂದು ವಿಚಾರ ವಿನಿಮಯ, ಚರ್ಚೆ ಮಾಡಲಾಗಿದೆ. ಅದರ ಅರ್ಧದಷ್ಟು ಸಹ ಏಕಾಂಕ ನಾಟಕಗಳ ಬಗ್ಗೆ ಮಾಡಲಾಗಿಲ್ಲ. ಏಕಾಂಕ ನಾಟಕಗಳ ಆವಿರ್ಭಾವದ ಇತಿಹಾಸ ಸಾಕಾದಷ್ಟು ಹಳೆಯದಾಗಿದ್ದರೂ ವಿಮರ್ಶಕರ, ರಂಗ ಕರ್ಮಿಗಳ ದೃಷ್ಟಿ ಇವುಗಳ ಕಡೆಗೆ ಅಷ್ಟೊಂದು ಹರಿದಿಲ್ಲವೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಏಕಾಂಕ ನಾಟಕಗಳು ಶಾಲೆ, ಕಾಲೇಜು ಚಿಕ್ಕಪುಟ್ಟ ಸಾಂಸ್ಕೃತಿಕ ಅಥವಾ ಮನ ರಂಜನಾ ಕಾರ್ಯಕ್ರಮದ ಅಂಗಳದಿಂದ ಹೊರಬಂದಿಲ್ಲವೆಂದು ಹೇಳಬೇಕಾಗು ತ್ತದೆ. ನಾಟ್ಯ ಸಾಹಿತ್ಯದ ಇದೊಂದು ಸೀರಿಯಸ್ ಹಾಗೂ ಮಹತ್ವಪೂರ್ಣ ಅಂಗವೆಂದು ಯಾರು ಯಾಕೆ ಭಾವಿಸಿಲ್ಲವೆಂದು ಪ್ರಶ್ನೆ ಉದ್ಭವಿಸುವುದು ಸಹಜವಾಗಿದೆ. ಬಹುಶಃ ಗಾತ್ರದಲ್ಲಿ ಚಿಕ್ಕದಾಗಿರುವುದರಿಂದಲೇ ಉಪೇಕ್ಷಿಸ ಲ್ಪಟ್ಟಿವೆಯೆಂದು ಹೇಳಬಹುದಾಗಿದೆ.

ಬೇಂದ್ರೆ, ಕೈಲಾಸಂ, ಶ್ರೀರಂಗ, ಪರ್ವತವಾಣಿ ಮುಂತಾದ ಹಿರಿಯ ಲೇಖಕ ರಿಂದ ಹಿಡಿದು ಅನೇಕ ಹೊಸ ಪೀಳಿಗೆಯ ಲೇಖಕರ ತನಕ ಈ ಪ್ರಕಾರದಲ್ಲಿ ಗಮನಾರ್ಹವಾದಂತಹ ಕೆಲಸ ಮಾಡಿದ್ದರೂ ಪ್ರಯೋಗದ ದೃಷ್ಟಿಯಿಂದ ಮಾತ್ರ ಏಕಾಂಕ ನಾಟಕಗಳು ತಬ್ಬಲಿಯಾಗೇ ಉಳಿದುಕೊಂಡಿದ್ದು ವಿಷಾದ ನೀಯ ಸಂಗತಿಯಾಗಿದೆ. ಸಂಖ್ಯೆಯಲ್ಲಿ ಮತ್ತು ಗುಣ ಮಟ್ಟದಲ್ಲಿ ಅತ್ಯಂತ ಗಮನಾರ್ಹವಾದಂತಹ ಏಕಾಂಕ ನಾಟಕಗಳು, ಕನ್ನಡದಲ್ಲಿ ಬಂದಿದ್ದರೂ ರಂಗ ಕರ್ಮಿಗಳು ಅವುಗಳನ್ನು ರಂಗಭೂಮಿಯ ಮೇಲೆ ತರುವ ಗೊಡವೆಗೆ ಹೋಗ ದಿರುವ ಕಾರಣವೇನೆಂದು ತಿಳಿದುಕೊಳ್ಳುವದು ಅನಿವಾರ್ಯವಾಗಿದೆ. ಏಕಾಂಕ ನಾಟಕಗಳ ಪ್ರಯೋಗ ಚಳುವಳಿಯ ರೂಪ ತಾಳಬೇಕು, ಅವು ಜನಪ್ರಿಯ ವಾಗಬೇಕು. ಅವುಗಳಲ್ಲಿಯೂ ಪ್ರಬುದ್ಧ ವಿಚಾರ, ರಂಗಕ್ಷಮತೆಯ ಗುಣ ಲಕ್ಷಣಗಳನು ಕಾಣುತ್ತೇವೆ. ಏಕಾಂಕ ನಾಟಕಗಳ ಪ್ರಯೋಗದಿಂದ ರಂಗ ಭೂಮಿಗೆ ಇನ್ನಷ್ಟು ಚೈತನ್ಯ ಬರುವುದರಲ್ಲಿ ಯಾವ ಸಂದೇಹವೂ ಇಲ್ಲ.

ಲಂಕೇಶ್, ಚಂದ್ರಶೇಖರ ಪಾಟೀಲ, ಕಂಬಾರ, ಟಿ. ಎಸ್. ಸೀತಾರಾಮು, ನ. ರತ್ನ ಹೀಗೆ ಅನೇಕ ಹೊಸ ಲೇಖಕರು ಬರೆದ ಏಕಾಂಕಗಳು ಅತ್ಯಂತ ಶ್ರೇಷ್ಠ ದರ್ಜೆಯ ಕೃತಿಗಳಾಗಿವೆ, ಶೆರೆಗಳು, ಕ್ರಾಂತಿ ಬಂತು ಕ್ರಾಂತಿ, ಅಪ್ಪ,

ಟೆಂಗರ ಬುಡ್ಡಣ್ಣ, ನಾರ್ಸಿಸಿಸ್, ಖರೋಖರ್, ಬೊಂತೆ ಹಾಗೂ ಗೋಡೆ ಬೇಕೆ ಗೋಡೇ ಇಂತಹ ಅನೇಕ ಉತ್ತಮ ಏಕಾಂಕ ನಾಟಕಗಳು ಕನ್ನಡದಲ್ಲಿ ಬಂದಿವೆ. ಇವುಗಳಿಂದ ನಮ್ಮ ರಂಗ ಸಾಹಿತ್ಯ ಶ್ರೀಮಂತಗೊಂಡಿದೆ. ಆದರೆ ಇವುಗಳ ಪ್ರಯೋಗಗಳ ದೃಷ್ಟಿಯಿಂದ ನೋಡಿದರೆ ತುಂಬಾ ನಿರಾಶೆಯಾಗುತ್ತದೆ. ದೊಡ್ಡ ನಾಟಕಗಳಿಂದ ಬೀದಿ ನಾಟಕದವರೆಗೆ ಸಕ್ರಿಯವಾದ ನಮ್ಮ ಹವ್ಯಾಸಿಗಳು ಏಕಾಂಕ ನಾಟಕದ ಕಡೆಗೆ ನೋಡುತ್ತಿಲ್ಲ. ಇದಕ್ಕೆ ಕಾರಣಗಳೇನೆಂದು ತಿಳಿದುಕೊಳ್ಳುವದು ಪ್ರಸ್ತುತ ಸಂದರ್ಭದಲ್ಲಿ ಅನಿವಾರ್ಯವಾಗಿದೆ. ಈ ಸಂಕಲನದಲ್ಲಿ ಒಂಬತ್ತು ಏಕಾಂಕ ನಾಟಕಗಳಿವೆ. ವೈವಿಧ್ಯತೆಯ ದೃಷ್ಟಿಯಿಂದಲೂ ಮತ್ತು ವಿಷಯ ವಸ್ತು ಹಾಗೂ ತಂತ್ರದ ದೃಷ್ಟಿಯಿಂದಲೂ ಭಿನ್ನವಾಗಿದ್ದ ಈ ಒಂಬತ್ತು ನಾಟಕಗಳು ಕನ್ನಡದ ಖ್ಯಾತ ಲೇಖಕರಿಂದ ಬರೆಯಲ್ಪಟ್ಟಿವೆ.

ಜಾನಪದ ಕಥಾವಸ್ತು, ರಾಮಾಯಣದ ಕಥಾ ಪ್ರಸಂಗ, ಮನೋ ವೈಜ್ಞಾನಿಕ ಸನ್ನಿವೇಶ, ಅಸಂಗತತಂತ್ರ ಹೀಗೆ ಬೇರೆ ಬೇರೆ ರೀತಿಯ ಏಕಾಂಕ ನಾಟಕಗಳನ್ನು ಸಂಗ್ರಹಿಸುವ ಪ್ರಯತ್ನ ಮಾಡಲಾಗಿದೆ. ಇದು ಎಲ್ಲ ದೃಷ್ಟಿಯಿಂದಲೂ ಪರಿಪೂರ್ಣವಾದಂತಹ ಪ್ರಾತಿನಿಧಿಕ ಸಂಕಲನವೆಂದು ಹೇಳುವ ಹವ್ಯಾಸಕ್ಕೂ ನಾನು ಹೋಗುವುದಿಲ್ಲ. ಇನ್ನೂ ಅನೇಕ ಹಿರಿ ಕಿರಿಯ ಲೇಖಕರು ಅನೇಕ ಸುಂದರ ಏಕಾಂಕಗಳನ್ನು ಬರೆದಿದ್ದಾರೆ. ಅವರೆಲ್ಲರನ್ನೂ ಇಲ್ಲಿ ಸೇರಿಸುವುದು ಸಾಧ್ಯವಾಗಲಿಲ್ಲ. ಒಂದು ಸೀಮಿತ ಪರಿಮಿತಿಯಿಂದ ಈ ಸಂಕಲನವನ್ನು ಸಿದ್ಧಪಡಿಸಲಾಗಿದೆ. ಆದ್ದರಿಂದ ಕೆಲವರು ಬಿಟ್ಟು ಹೋಗಿದ್ದಾರೆ.

ಈ ಸಂಕಲನದಲ್ಲಿ ತಮ್ಮ ಕೃತಿಗಳನ್ನು ಸೇರಿಸಿಕೊಳ್ಳಲು ಅನುಮತಿ ನೀಡಿದ ಎಲ್ಲ ಲೇಖಕರಿಗೂ ಹಾಗೂ ಬೇಂದ್ರೆಯವರ ನಾಟಕ ಜಾತ್ರೆಯನ್ನು ಸೇರಿಸಿಕೊಳ್ಳಲು ಅನುಮತಿ ಕೊಟ್ಟ ಡಾ. ವಾಮನ ಬೇಂದ್ರೆ ಅವರಿಗೂ ನಾನು ಕೃತಜ್ಞನಾಗಿದ್ದೇನೆ. ಇಂತಹ ಸಂಕಲನವನ್ನು ಸಿದ್ಧಪಡಿಸಿಕೊಡಲು ಅವಕಾಶ ಮಾಡಿಕೊಟ್ಟ ವಿಶ್ವ ಕನ್ನಡ ಸಮ್ಮೇಳನದ ವಿಶೇಷ ಅಧಿಕಾರಿಗಳಾದ ಶ್ರೀ ಕೆ. ಜಯಾಚಾರ್ಯ ಅವರಿಗೂ ನಾನು ಆಭಾರಿಯಾಗಿದ್ದೇನೆ.

ಬೆಳಗಾವಿ

ಚಂದ್ರಕಾಂತ ಕುಸನೂರ

## ಪರಿವಿಡಿ

| | | |
|---|---|---|
| 1. | ಮಾನಿಷಾದ | ಗಿರೀಶ ಕಾರ್ನಾಡ |
| 2. | ಸಾಕ್ಷಿಕಲ್ಲು | ಗೋ. ರು. ಚನ್ನಬಸಪ್ಪ |
| 3. | ನಾರ್ಸಿಸಿಸ | ಚಂದ್ರಶೇಖರ ಕಂಬಾರ |
| 4. | ಬದಕು ಮನ್ನಿಸು ಪ್ರಭುವೇ | ಟಿ. ಎನ್. ಸೀತಾರಾಮ |
| 5. | ಜಾತ್ರೆ | ದ. ರಾ. ಬೇಂದ್ರೆ |
| 6. | ಗೋಡೆ ಬೇಕೇ ಗೋಡೆ | ನ. ರತ್ನ |
| 7. | ಗಿಳಿಯು ಪಂಜರದೊಳಿಲ್ಲ | ಪಿ. ಲಂಕೇಶ್ |
| 8. | ಸಾರ್ವಜನಿಕ ರಸ್ತೆ ಅಲ್ಲ | ಎಂ. ಎಸ್. ಕೆ. ಪ್ರಭು |
| 9. | ವೈಶ್ವಾನರ | ರಂ. ಶಾ. |

# ಕೃತಜ್ಞತೆಗಳು

ಈ ಸಂಕಲನದಲ್ಲಿ ತಮ್ಮ ಏಕಾಂಕ ನಾಟಕಗಳನ್ನು ಸೇರಿಸಿಕೊಳ್ಳಲು ಒಪ್ಪಿಗೆಯನ್ನು ನೀಡಿದ ಎಲ್ಲ ಲೇಖಕರಿಗೂ ನನ್ನ ಕೃತಜ್ಞತೆಗಳು.

ಚಂದ್ರಕಾಂತ ಕುಸನೂರ
ಸಂಪಾದಕ

## ಪಾತ್ರಗಳು

ಅಗಸ
ಋಷಿ
ಹೆಂಡತಿ
ವಸುಧಮ್ಮ
ಸೈನಿಕ
ಒಬ್ಬಾತ
ಇನ್ನೊಬ್ಬ
ಮತ್ತೊಬ್ಬ
ಪಹರೆ 1
ಪಹರೆ 2
ಭರತ
ನೃತ್ಯಗಾತಿ
ವ್ಯಕ್ತಿ
ಶಾಸ್ತ್ರಿ
ಗೃಹಸ್ಥ

ಧ್ವನಿ 1 ಧ್ವನಿ 2 ಗುಂಪು

[ಕಾಡಿನ ಒಂದು ಪ್ರದೇಶ. ಹಕ್ಕಿಗಳ ಚಿಲಿಪಿಲಿ. ಮರದ ಮೇಲೆ ಎರಡು ಹಕ್ಕಿಗಳು ಪ್ರೇಮಾಲಾಪದಲ್ಲಿ ಮಗ್ನವಾಗಿರುವುದು ಗೋಚರವಾಗುತ್ತದೆ. ಒಂದು ಕ್ಷಣಾನಂತರ ದೂರದಿಂದ ಬಂದ ಬಾಣವೊಂದು ಒಂದು ಹಕ್ಕಿಗೆ ತಗುಲಿ ಅದು ಕೆಳಗೆ ಬೀಳುವುದು. ಆಗ ಹಿನ್ನೆಲೆಯಿಂದ ಶ್ಲೋಕ ಕೇಳಿಬರುವುದು.]

ಮಾನಿಷಾದ ಪ್ರತಿಷ್ಠಾಂಸ್ತ್ವಂ ಅಗಮಶ್ಶಾಶ್ವತೀಸ್ಸಮಾಃ ।
ಯತ್‌ಕ್ರೌಂಚ ಮಿಥುನಾದೇಕಂ ಅವಧೀಃ ಕಾಮಮೋಹಿತಃ ॥

[ಮಬ್ಬಾಗಿದ್ದ ಬೆಳಕು ಜೋರಾದಾಗ ಎತ್ತರದಲ್ಲಿ ಒಬ್ಬ ಋಷಿ ಕುಳಿತಿರುವುದು ಸ್ಪಷ್ಟವಾಗುತ್ತದೆ. ಆ ದಾರಿಯಲ್ಲಿ ಒಬ್ಬ ಅಗಸ ಬರುತ್ತಿದ್ದಾನೆ. ಚಿಂತಾಕ್ರಾಂತನಾಗಿದ್ದ ಆತ, ಋಷಿಗಳಿರುವುದನ್ನು ಕಂಡು]

ಅಗಸ : [ತನಗೆ ತಾನೆ] ಇಲ್ಲಿ ಯಾರೋ ಮುನಿಗಳಿದ್ದಂತಿದೆ. [ಅವರ ಬಳಿ ತೆರಳಿ] ಮುನಿಗಳೆ, ಮುನಿಗಳೆ.

ಋಷಿ : [ಅವನತ್ತ ದಿಟ್ಟಿಸಿ] ಆ, ಯಾರು ?

ಅಗಸ : ನಿಮ್ಮ ಧ್ಯಾನಕ್ಕೆ ಅಡ್ಡಿ ತಂದುದಕ್ಕೆ ಕ್ಷಮಿಸಬೇಕು ಮುನಿಗಳೇ.

ಋಷಿ : ಧ್ಯಾನವೇನಿಲ್ಲ. ಏನೋ ವಿಚಾರ ಮಾಡುತ್ತಿದ್ದೆ ಅಷ್ಟೆ. ಏನುಬೇಕು ನಿನಗೆ ? ಈ ಕಾರಡವಿಯಲ್ಲಿ ಏನು ಮಾಡುತ್ತಿರುವೆ ?

ಅಗಸ : ಇಲ್ಲಿಂದ ವಾಲ್ಮೀಕಿ ಋಷಿಗಳ ಆಶ್ರಮ ಬಹಳ ದೂರವಿದೆಯೆ ಸ್ವಾಮಿ ?

ಋಷಿ : ಇಲ್ಲ, ಇಲ್ಲ. ಇಲ್ಲಿಂದ ಪೂರ್ವಕ್ಕೆ ಹೋದರೆ ಹತ್ತು ನಿಮಿಷಗಳ ದಾರಿ ಅಷ್ಟೆ. ಆದರೆ ಏನು ಬೇಕಾಗಿದೆ ನಿನಗೆ, ಅಲ್ಲಿ ?

ಅಗಸ : ಏನಿಲ್ಲ ಗುರುಗಳೇ. ಅಲ್ಲಿ ತಾಯಿ ಸೀತಾದೇವಿ ಇದ್ದಾಳೆಂದು ಯಾರೋ ಎಂದರು. ಆ ಸುದ್ದಿ ನಿಜವೇ ಸ್ವಾಮಿ ?

ಋಷಿ : ನಿಜವಿತ್ತು. ಆದರೆ ಈಗ ಅವಳು ಅಲ್ಲಿಲ್ಲ ?

ಅಗಸ : [ಆಶ್ಚರ್ಯ] ಅಲ್ಲಿಲ್ಲ ? ಎಲ್ಲಿ ಹೋಗಿದ್ದಾರವರು ?

ಋಷಿ : ನೀನಿನ್ನೂ ಕೇಳಿಲ್ಲವೇ ? ಮೂರು ದಿನಗಳ ಹಿಂದೆ ಇಲ್ಲಿ ಇದೇ ಬಯಲಲ್ಲಿ ಅವಳು ಶ್ರೀರಾಮನಿಗೆ ಭೆಟ್ಟಿಯಾದಳು.

ಅಗಸ : ಆಂ. ಭೆಟ್ಟಿಯಾದಳೆ ?

ಋಷಿ : ಅಹುದು.

ಅಗಸ : ಹಾಗಾದರೆ ಶ್ರೀರಾಮ ಮತ್ತು ಸೀತಾದೇವಿ ಒಂದಾದರೆ ? ಈ ಸುದ್ದಿ ನಿಜವೇ ? ದೇವರೆ, ದೇವರೆ, ನಿನ್ನನ್ನೆಷ್ಟು ಸ್ತುತಿಸಲಿ, ನನ್ನನ್ನು ಪಾತಕದ ವೇದನೆಯಿಂದ ಮುಕ್ತಿ ಗೊಳಿಸಿದೆ. ದೇವರೆ. ನಿನ್ನ ಋಣ ಹೇಗೆ ತೀರಿಸಲಿ? ಗುರು ಗಳೇ....ಗುರುಗಳೇ....ನಿಮ್ಮ ಕಾಲಿಗೆ ಬೀಳುತ್ತೇನೆ. ನೀವು ಬದುಕಿಸಿದಿರಿ ನನ್ನನ್ನು.

ಋಷಿ : ನಿನ್ನ ಪಾತಕ ? ಏನನ್ನುತ್ತಿರುವೆ ನೀನು ? ಯಾರು ನೀನು ?

ಅಗಸ : ಅದೊಂದು ದೊಡ್ಡ ಕತೆ ಸ್ವಾಮಿ. ಅದನ್ನು ಕೇಳದಿರು ವುದೇ ಒಳ್ಳೆಯದು. ಮೊದಲೇ ನಿಮ್ಮ ಧ್ಯಾನ ಕೆಡಿಸಿದ್ದೇನೆ. ಇನ್ನು ನನ್ನ ಗೋಳು ಹೇಳಿ ನಿಮ್ಮನ್ನು ಹುಚ್ಚುಗೊಳಿಸಲಾರೆ. ನಮಸ್ಕಾರ ಮುನಿಗಳೆ, ಬರುತ್ತೇನೆ. ನಾನು ಹೋಗ ಬೇಕು. ಬೇಗ ಹೋಗಬೇಕು. ಅಯೋಧ್ಯೆಗೆ.

ಋಷಿ : [ಕೈ ಎತ್ತಿ] ತಡೆ. ನೀನು ಯಾರು ಎಂಬುದನ್ನು ಹೇಳಬಾರದೆ? ಸೀತೆಯ ಸಂಕಟಕ್ಕೂ, ನಿನ್ನ ವ್ಯಥೆಗೂ ಇಂಥ ಸಂಬಂಧ ಉಂಟೆ ? ಈ ತರಹದ ವ್ಯಥೆಯುಳ್ಳ ಇಬ್ಬರು ಈ ಜಗತ್ತಿ

ನಲ್ಲಿ ಇರಬಹುದು ಎಂದು ಎಣಿಸಿರಲಿಲ್ಲ ನಾನು. ಯಾರು ನೀನು ?

ಅಗಸ : ನಾನು, ನಾನು ಹಿಂದೆ ಅಯೋಧ್ಯೆಯಲ್ಲಿ ಆಗಸನಾಗಿದ್ದೆ, ಗುರುಗಳೇ.

ಋಷಿ : ಓಹ್ ಅವನೇ ಏನು ನೀನು ?

ಅಗಸ : ಹೌದು ಸ್ವಾಮಿ, ಅವನೇ, ಅಯೋಧ್ಯೆಯಲ್ಲಿ ನೂರಾರು ಅಗಸರಿದ್ದರೂ, ಅಯೋಧ್ಯೆಯ ಆಗಸ ಎಂದೊಡನೆ ಎಲ್ಲರ ಕಣ್ಮುಂದೆ ಮೂಡುವ ಆ ಮರುಳ, ಅವನೇ ನಾನು....

ಋಷಿ : ನನ್ನನ್ನು ಕ್ಷಮಿಸು ತಮ್ಮ. ನಿನ್ನನ್ನು ನೋಯಿಸಲಿಕ್ಕೆ ಎನ್ನಲಿಲ್ಲ ನಾನು. ಬಾಯಿ ತಪ್ಪಿ ಆ ಮಾತು ಬಂತು ಕ್ಷಮಿಸು.

ಅಗಸ : ನೀವೇಕೆ ಕ್ಷಮೆ ಕೋರಬೇಕು ಗುರುಗಳೆ....ತಪ್ಪು ಮಾಡಿದವ ನಾನು. ಆದಕ್ಕೆ ಅಯೋಧ್ಯೆಗೆ ಸೀತಾದೇವಿಯ ಕ್ಷಮೆ ಕೇಳಲು ಹೊರಟಿದ್ದೇನೆ.

ಋಷಿ : ಇಷ್ಟೇಕೆ ಗಡಿಬಿಡಿಯುದಕ್ಕೆ....ಸ್ವಲ್ಪ ಹೊತ್ತು ವಿಶ್ರಮಿಸು. ಬಾ, ಇಲ್ಲಿ ಕುಳಿತುಕೋ. ತಮ್ಮ, ನಿನ್ನ ನೋವಿನ ಮೇಲೆ ಉಪ್ಪನ್ನು ಆರೆಯುವ ಇಚ್ಛೆ ನನಗಿಲ್ಲ. ನಿನ್ನ ಕತೆ ಏನಾಯಿತು ಎಂಬುದನ್ನು ಸ್ವಲ್ಪ ಹೇಳುತ್ತೀಯಾ ನನಗೆ ?

ಅಗಸ : ಅದನ್ನೆಲ್ಲಾ ಕೇಳಿ ಏನು ಪ್ರಯೋಜನ ನಿಮಗೆ. ಪೃಥ್ವಿಯ ಜನರೆಲ್ಲ ಆಡಿದ್ದನ್ನು ನೀವು ಕೇಳಿರಲೇ ಬೇಕು.

ಋಷಿ : ಜನ ಬೇಕಾದುದನ್ನುತ್ತಾರೆ. ನಾನು ವ್ಯರ್ಥ ಕುತೂಹಲ ದಿಂದ ಕೇಳುತ್ತಿಲ್ಲ. ನಾನು ಕೇಳುವುದಕ್ಕೂ ಒಂದು ಕಾರಣ ವಿದೆ. ನನ್ನ ಮನಸ್ಸಿನ ಶಾಂತಿಗಾಗಿ ಕೇಳುತ್ತಿದ್ದೇನೆ. ದಯಮಾಡಿ ಹೇಳು.

ಅಗಸ : ನಿಮ್ಮ ಮನಸ್ಸಿನ ಶಾಂತಿ ? ಸ್ವಾಮಿ, ನೀವು ಜ್ಞಾನಿಗಳು. ತಪೋಧನರು...

ಋಷಿ : ಓಹ್....

ಅಗಸ : ನಿಮಗೆ ನನ್ನ ಕತೆ ಕೇಳಿ ಏನು ಶಾಂತಿ ಸಿಗಬೇಕು ? ಆದರೆ ನನಗೆ ಪುಣ್ಯದ ಸುದ್ದಿ ಹೇಳಿದಿರಿ. ನಿಮಗೆ ಇಲ್ಲ ಎನ್ನಲಾಗೆ

ಋಷಿ : ಹೇಳು ಯಾರು ನೀನು ? ನಿನ್ನ ಹೆಸರು ಏನು ?

ಅಗಸ : ನನ್ನ ಹೆಸರು ಪದ್ಮನಾಭ. ಅಯೋಧ್ಯೆಯಲ್ಲಿ ಅಗಸನಾಗಿದ್ದೆ. ಯಾರಗೊಡವೆಯೂ ಇಲ್ಲದೆ ನನ್ನಷ್ಟಕ್ಕೆ ನನ್ನ ಕೆಲಸ ಮಾಡಿ, ಹೆಂಡತಿಯೊಡನೆ ಸುಖದಿಂದಿದ್ದೆ. ನಾನು, ನನ್ನ ಹೆಂಡತಿ, ನನ್ನ ಕತ್ತೆ. ಇನ್ನೇನು ಬೇಕಿತ್ತು ನನಗೆ, ಸುಖ ದಿಂದಿರಬಹುದಾಗಿತ್ತು.

ಋಷಿ : ಮುಂದೆ ಹೇಳು. ಆದದ್ದಾದರೂ ಏನು ?

ಅಗಸ : ಆದರೆ ಸುಖದಲ್ಲೂ ವಿನಾಶದ ಆಸೆ ಬಿಡುವುದಿಲ್ಲ–ಸ್ವಾಮಿ. ನನಗೆ ಶ್ರೀರಾಮನ ಹೆಸರು ತೆಗೆದರೆ ಆಗುತ್ತಿರಲಿಲ್ಲ. ಆ ಹೆಸರು ಕೇಳಿದರೆ ಮೈ ಉರಿಯುತ್ತಿತ್ತು. ಆದರೆ ನನ್ನ ಹೆಂಡತಿಗೆ ರಾಮನಲ್ಲಿ ಮಹಾ ಭಕ್ತಿ. ದಿನವೂ ರಾತ್ರಿ ಅವನ ಪೂಜೆ. ಅವನ ಹೆಸರು ನಾಲಿಗೆಯ ಮೇಲೆ; ಅವಳ ಭಕ್ತಿ ಕಂಡಾಗ ಪಿಶಾಚಿ ಹಿಡಿದಂತಾಗುತ್ತಿತ್ತು. ಒಮ್ಮೊಮ್ಮೆ ಅಸೂಯೆ ಎನಿಸುತ್ತಿತ್ತು, ನನ್ನ ಒರಟುತನ ಕ್ಷಮಿಸಬೇಕು ಗುರುಗಳೇ. ಆದರೆ ನಾನು ಅಜ್ಞಾನಿಯಾಗಿದ್ದೆ. ಆಗ–

ಋಷಿ : ಆ ವಾಕ್ಯವನ್ನು ಭೂತಕಾಲದಲ್ಲಿ ತಳ್ಳುವ ಧೈರ್ಯ ನನಗಿದ್ದರೆ ಎಷ್ಟು ಒಳ್ಳೆಯದಿತ್ತು.

ಅಗಸ : ಇಲ್ಲಿ ಕೇಳಿ ಸ್ವಾಮಿ,

ಋಷಿ : ನಡೆದುದೇನೆಂಬುದನ್ನು ಸವಿಸ್ತಾರವಾಗಿ ಬಣ್ಣಿಸು.

ಅಗಸ : ಚಿಕ್ಕದಾದರೂ ಚೊಕ್ಕದಾಗಿದ್ದ ಅಚ್ಚುಕಟ್ಟಾದ ಮನೆ ನಮ್ಮದು. ಸಂಸಾರಕ್ಕೆ ಕೊರತೆ ಇಲ್ಲದೆ ಒಂದು ಅರ್ಥದಲ್ಲಿ ಹಾಯಾಗಿದ್ದ ಕಾಲವು ಒಂದಿತ್ತು. ಜೀವನದಲ್ಲಿ ಎಲ್ಲಿಲ್ಲದ ಉತ್ಸಾಹ ನನಗಾಗ....ಸಂತೋಷ, ಸಂಭ್ರಮ, ಹಾಡು-ಕುಣಿತ....ಓಹ್ ಆ ದಿನಗಳು

[ಎಂದಾಗ ದೀಪ ಕರಗಿ ಮತ್ತೆ ಬೆಳಕಾಗುವುದು, ಅಗಸನ ಮನೆ. ಆತ ಖುಷಿಯಲ್ಲಿದ್ದಾನೆ, ಮಾತಿನ ಧಾಟಿಯೂ ಹಾಗೆ]

ಅಗಸ : ಎಲ್ಲ ಬಟ್ಟೆ ಒಗೆದು ಆಯ್ತು ನಾರೀಮಣಿ.
ಇಲ್ಲಿ ಬಂದು ಕೂರು ನನ್ನ ಚಿಂತಾಮಣಿ.

ಹೆಂಡತಿ : [ಬರುತ್ತಾ] ನನ್ನ ಯಾತಕೆ ಕರೆದೀ ಹೇಳು
ಬಿಟ್ಟು ಬಂದೆನು ಕೆಲಸ ಹಾಳು.

ಅಗಸ : [ನಗುತ್ತಾ] ನೆನಪು ಬಂದು ನಿನ್ನ ಮುಖವು ಓಡಿಬಂದೆನೆ
ಚಂದ ಮುಖವು ಕಾಣಲೆಂದು ಹಾರಿಬಂದೆನೆ

ಹೆಂಡತಿ : [ಹುಸಿಕೋಪ] ಹಾಡು ಸಾಕು, ಹೇಳಿ ನನಗೆ ಏನು ಕೆಲಸವು.
ಹರಟೆಕೊಚ್ಚಲಿಕ್ಕೆ ನಾನು ಇಲ್ಲ ಸಿದ್ಧವು.

ಅಗಸ : ಓಹೋ, ಹಾಗಾರೆ...ಹೀಗೆ ಹೇಳಲೆ ನನ್ನ ಸಿಂಗಾರಿ,

ಹೆಂಡತಿ : ಏನ ಹೇಳತಿ ನನ್ನ ಬಂಗಾರ ?

ಅಗಸ : ಹೋಗೋಣವಾ ಜಾತ್ರೇಗೆ ?

ಹೆಂಡತಿ : ಯಾರ್ಯಾರು ಹೋಗೋಣು ?

ಅಗಸ : ನಾವಿಬ್ರೇ ಹೋಗೋಣಂತ-
ಜಾತ್ರೇನ ಸುತ್ತೋಣಂತ
ಕುಣಿದು-ನಲಿದು ಹಾಡೋಣಂತ
ಹಾರಿ ಹಾರಿ ನಲಿಯೋಣಂತ

ಹೆಂಡತಿ : ಈಗ್ಲೇ ಬರ್ಬೇಕಾ ?

ಅಗಸ : ಹೌದು–ಹೌದು.

ಹೆಂಡತಿ : ನಾನೂ ಇರ್ಬೇಕಾ ?

ಅಗಸ : ಹೌದು–ಹೌದು ?

ಹೆಂಡತಿ : ನಾಳೆ ಬಂದರೆ ಹ್ಯಾಗೆ ?

ಅಗಸ : ಜಾತ್ರೆ ಇವತ್ತೇ,

ಹೆಂಡತಿ : ಜರೀ ಸೀರೆ ಇಲ್ಲದೆ ನಾನು ಜಾತ್ರೆಗೆ ಬರಲಾ ?

ಅಗಸ : ಅಲ್ಲೇ ಸೀರೆ ತಕ್ಕೊಡ್ತೀನಿ ಬಾ ನನ್ನ ಗಿಣಿ.

ಹೆಂಡತಿ : ಕೆಂಪು ಸೀರೆ ಉಡಲಾ ?

ಅಗಸ : ಬೇಡ, ಬೇಡ

ಹೆಂಡತಿ : ನೀಲಿ ಸೀರೆ ತೇಪೆ–

ಅಗಸ ; ಬೇಡ, ಬೇಡ

ಹೆಂಡತಿ : ಮದುವೆ ಸೀರೆ ಚೆನ್ನ.

ಅಗಸ : ಹೌದು. ನನ್ನ ರಾಣಿ.

ಹೆಂಡತಿ : ಒಂದು ನಿಮಿಷ ಬಂದುಬಿಟ್ಟೆ, ಪೂಜೆ ಮಾಡ್ತೀನಿ–
ನಾನು ಪೂಜೆ ಮಾಡ್ತೀನಿ.
ಈಗ ಪೂಜೆ ಮಾಡ್ತೀನಿ–

ಅಗಸ : [ಕೋಪ] ಪೂಜೆಗೀಗ ಹೊತ್ತಲ್ಲ, ಬಾ ನನ್ನ ಗಿಣಿ–

ಹೆಂಡತಿ : ರಾಮನ ಪೂಜೆ ಮಾಡ್ಲೇಬೇಕು–
ಬಿಡ್ತಿ ಅನ್ನಿ, ನೀವು ಬಿಡ್ತಿ ಅನ್ನಿ
ಈಗ–ಬಿಡ್ತಿ ಅನ್ನಿ–

ಅಗಸ : ರಾಮನಂತೆ ರಾಮ–ನಿಲ್ಸು, ನಿನ್ನ ರಾಮನಾಮ–

ಹೆಂಡತಿ : ನನ್ನ ಬೇಕಾರೆ ಅನ್ನಿ ಸ್ವಾಮಿ. ರಾಮನನ್ನು ದಂಡಿಸಬೇಡಿ.
ನೀವು ಬಂದು ಕೂತು ಈಗ ಪೂಜೆ ಮಾಡಿ.

ಅಗಸ : ಪೂಜೆ ಮಾಡಲಿಕ್ಕೆ ನಾನು ಬುದ್ಧಿಗೇಡಿಯಲ್ಲ.

ಹೆಂಡತಿ : ರಾಮರ ಜಪವು ಪುಣ್ಯದ ಕೆಲಸ–
ರಾಮರ ಜಪವು ಪುಣ್ಯದ ಕೆಲಸ
[ಭಜನೆ ಮಾಡುತ್ತ] ರಾಮ ರಾಮ ರಾಮ ರಾಮ

ಅಗಸ : [ರೇಗಿ] ಪುಣ್ಯವಂತೆ, ಪುಣ್ಯ–ನಾನು ಕಾಣೆನೇ ನಿನ್ನ ರಾಮನನ್ನ.

ಹೆಂಡತಿ : [ರೇಗಿ] ಏನು ಅಂಥ ತಪ್ಪು ಹೇಳಿ ನೀವು
ಈಗ ಹೇಳಿ ನೀವು
ಮತ್ತೆ ಹೇಳಿ ನೀವು

ಅಗಸ : ವಾಲಿಯನು ಹಿಂದಡಗಿ ಕೊಂದವ
ಶೂರ್ಪಣಖಿ ಮೂಗ ಕೊಯ್ಸಿದವ
ವಾನರ ಸೇನೆಯಿಂದ ಲಂಕೆ ಗೆದ್ದವ
ಒಂದೇ–ಎರಡೇ

ಹೆಂಡತಿ : ಬಿಡ್ತು–ಬಿಡ್ತು–

ಅಗಸ : ಅಂಥ ರಾಮನ ಪೂಜೆ ಎಂದರೆ ಬೆಂಕಿಯಾಗುತ್ತೆ. ನನ್ನ ಮೈ ಬೆಂಕಿಯಾಗುತ್ತೆ–ಓಹೋ, ಬೆಂಕಿಯಾಗುತ್ತೆ.

ಹೆಂಡತಿ : ಹೀಗೆಂದ ಮಾತ್ರಕ್ಕೆ ರಾಮನಾಮ ಮರೆಯೋಳಲ್ಲ.

ಅಗಸ : ಕೋಪ ನೆತ್ತಿಗೇರಿದ್ರೆ ಕೆಟ್ಟ ಮನುಷ್ಯ ನಾನು. ಕೆಟ್ಟ ಮನುಷ್ಯ–ಓಹೋ, ಕೆಟ್ಟ ಮನುಷ್ಯ.

ಹೆಂಡತಿ : ರಾಮ ಭಕ್ತೆ ನಾನು.
ಇಂಥಾ ಮಾತಿಗೆ ಹೆದರೋಳಲ್ಲ.

ಅಗಸ : ಹೆದರೋಳಲ್ವ–ನೀನು ಹೆದರೋಳಲ್ವ
(ಎಂದು ಅವಳನ್ನು ಬಡಿಯುವನು)
ನೋಡು, ಯಾಕೆ ಹೆದರೋಲ್ಲ ಈಗ ಯಾಕೆ ಹೆದರೋಲ್ಲ.

(ಅವಳು ಚೀರಿದಾಗ ದೀಪ ಆರುವುದು. ಮತ್ತೆ ಬೆಳಕಾದಾಗ ಅಗಸ ತಲೆಯ ಮೇಲೆ ಕೈ ಹೊತ್ತು ಕುಳಿತಿದ್ದಾನೆ)

ಅಗಸ : ಎಷ್ಟಾಗಲಿ, ನನ್ನ ಪ್ರೀತಿಯ ಹೆಂಡತಿ–ಎಂದೂ ನಾನವಳನ್ನು ಹೊಡೆದವನಲ್ಲ.

[ಬೇಸರದಿಂದ] ಓಹ್ ಮನಸ್ಸಿಗೆ ನೆಮ್ಮದಿಯೇ ಇಲ್ಲದ ಹಾಗಾಗಿದೆ. ಅವಳನ್ನು ಹಿಂಸಿಸಿದ ಕಾರಣದಿಂದ ಘಟ್ಟಕ್ಕೆ ಹೋಗಿ ನಾಲ್ಕು ದಿನಗಳಾಯಿತು. ಓಹ್, ಏಕಿಂಥ ಮಂಕು ಬಡಿಯಿತು ನನಗೆ ? ನಾನೇ ಅವಳನ್ನು ಕರೆದು ತರಲೆ– ಎಳೆದಾದರೆ ಎಳೆದು, ಒಲಿಸಿಯಾದರೆ ಒಲಿಸಿ [ನಾಲ್ಕು ಹೆಜ್ಜೆ ನಡೆದು ಮತ್ತೆ ವಾಪಸ್ಸು ಬರುತ್ತಾ] ಇಲ್ಲ, ಇಲ್ಲ ಇದು ನನ್ನ ಅಭಿಮಾನಕ್ಕೆ ಭಂಗ.

[ಬಾಗಿಲು ತಟ್ಟಿದ ಸದ್ದು, ಅಗಸ ಬೆಚ್ಚಿ]

ಅಗಸ : ಯಾರದು ?

ಹೆಂಡತಿ : ನಾನು.

ಅಗಸ : ನಾನು ಎಂದರೆ ಯಾರು ?

ಹೆಂಡತಿ : ನಾನು ಸ್ವಾಮಿ, ತಿರುಗಿ ಬಂದಿದ್ದೇನೆ.

ಅಗಸ : [ಎದ್ದು] ಓಹೋ ನನ್ನ ಧರ್ಮಪತ್ನಿ–ಏನು ಇದೇನು ಇಷ್ಟು ಬೇಗನೆ ಬಂದುಬಿಟ್ಟೆ ? ನಿಮ್ಮ ತಾಯಿ–ತಂದೆ ಮನೆಯಲ್ಲಿ ಬೆಚ್ಚಗಿರುವ ವ್ಯವಸ್ಥೆ ಮಾಡಲಿಲ್ಲವೇನು ?

ಹೆಂಡತಿ : [ಅಚಿನಿಂದಲೇ] ನಾನು ಅವರಿಗೆ ಹೇಳಿ ಬಂದಿದ್ದೇನೆ....ಅವೆಲ್ಲ ವಿವರವಾಗಿ ಹೇಳುತ್ತೇನೆ....ಮೊದಲು ಕದ ತೆಗೆಯಿರಿ.

ಅಗಸ : ಕದ ತೆರೆದೇನು ಮಾಡಲಿ. ಇಲ್ಲಿ ಇರುವವ ನಾನೊಬ್ಬನೇ– ನನಗೂ ನಿನಗೂ ಏನು ಸಂಬಂಧ ?

ಹೆಂಡತಿ : ನಾನು ತಪ್ಪು ಮಾಡಿದೆ ಸ್ವಾಮಿ, ಒಪ್ಪಿಕೊಳ್ಳುತ್ತೇನೆ. ನೀವು ಹೇಳಿದ್ದನ್ನು ಮಾಡುತ್ತೇನೆ. ಆದರೆ ಹೀಗೆ ಬೀದಿಯಲ್ಲಿ ಕೂಡಿಸ ಬೇಡಿ ನನ್ನನ್ನು. ಕದವಾದರೂ ತೆರೆಯಿರಿ.

ಅಗಸ : [ರೇಗುತ್ತ–ಕದ ತೆಗೆವ] ಕದ ತೆಗೆಯಬೇಕಂತೆ ಕದ–

[ಕದ ತೆಗೆದಕೂಡಲೆ ಹೆಂಡತಿ ಬಿರಬಿರನೆ ಒಳಗೆ ಹೋಗಲು ಯತ್ನಿಸುವಳು. ಅಗಸ ಅಡ್ಡ ನಿಂತು].

ಹಾ ಹಾ ತಡೆ. ಹೊರಟೇ ಬಿಟ್ಟೆಯಲ್ಲ ನೆಟ್ಟಗೆ ಒಳಗೆ. ಹೇಳು. ಏನು ಬೇಕು ನಿನಗೆ ?

ಹೆಂಡತಿ : ದಾರಿ ಬಿಡಿ–ನನ್ನ ತಪ್ಪಾಯ್ತು. ನೆರೆಹೊರೆಯವರೆಲ್ಲ ನೋಡುತ್ತಿದ್ದಾರೆ. ಅವರೆದುರಿಗೆ ಏನು ಇದೆಲ್ಲ ಚೇಷ್ಟೆ.

ಅಗಸ : ನೆರೆಹೊರೆಯವರೆಲ್ಲಾ ನೋಡುತ್ತಿದ್ದಾರೇನು ? ನೋಡಲಿ, ನಾನೇ ಕರೆದು ಹೇಳುತ್ತೇನೆ. ಬನ್ನಿರಿ...ಬನ್ನಿರಿ...ಬನ್ನಿರಿ. ನೋಡಿರಿ ನಮ್ಮ ಮನೆಯ ಆಟ. ಕಾಣಿರಿ ಈ ಮಾಹಾ ಪತಿವ್ರತೆಯನ್ನು.

ಹೆಂಡತಿ : ಸಾಕು, ಸಾಕು ಮಾಡಿ ಸ್ವಾಮಿ. ಎಲ್ಲರೆದುರಿಗೆ ನನ್ನ ನಾಚಿಕೆ ತೆಗೆಯ ಬೇಡಿ. ನಿಮ್ಮ ಕಾಲಿಗೆ ಬೀಳುತ್ತೇನೆ. ನನಗೊಮ್ಮೆ ಒಳಗೆ ಬಿಡಿ.

ಅಗಸ : ನಾಚಿಕೆ ಇದ್ದರಲ್ಲವೇ ತೆಗೆಯುವುದು. ನನಗೆ ಹೇಳದೆ ಮನೆಯಿಂದ ಓಡಿ ಹೋಗುವಾಗ ಬರಲಿಲ್ಲವೇನು ನಾಚಿಕೆ ?

ಹೆಂಡತಿ : ಸ್ವಲ್ಪ ಸುಮ್ಮನಿರುತ್ತೀರಾ ?

ಅಗಸ : ನನಗಿಂತ ನಿನ್ನ ದೇವರೇ ದೊಡ್ಡವನಾದ ಅಲ್ಲವೆ....ಸರಿ. ನಿನ್ನಿಷ್ಟ–ನಿನ್ನ ತಂದೆ ನಿನ್ನ ಕೈಗೆ ನೀಲಾಂಜನ ಕೊಟ್ಟು ದೀಪ ಹಚ್ಚು ಎಂದು ಹೇಳಿರಬೇಕಲ್ಲ ಮುದ್ದುಮಗಳಿಗೆ.

ಹೆಂಡತಿ : ಮತ್ತೆ ಅದೇ ಮಾತನಾಡುತ್ತಿದ್ದೀರಾ ?

ಅಗಸ : ಆದರೆ ಇಲ್ಲೇನು ರಾಮ ಸಿಗುವುದಿಲ್ಲ ನಿನಗೆ–ಇಲ್ಲಿರುವವನು ನಾನು ಮಾತ್ರ....ಕ್ಷುದ್ರ ಅಗಸ–ಆ ರಾಮನೆಲ್ಲಿದ್ದಾನೆ ಗೊತ್ತೆ....ಅಲ್ಲಿ....ಆ ಅರಮನೆಯಲ್ಲಿ....ಬೇಕಾದರೆ, ಹೋಗು ಅಲ್ಲಿ.

[ಆ ಹೊತ್ತಿಗೆ ಪಕ್ಕದ ಮನೆಯ ವಸುಧಮ್ಮನ ಪ್ರವೇಶ].

ವಸುಧಮ್ಮ : ಪದ್ಮನಾಭ–ಪದ್ಮನಾಭ

ಅಗಸ : ಏಕೆ ವಸುಧಮ್ಮ, ದೂರದಿಂದ ನೋಡಿ ಸಾಕಾಗಲಿಲ್ಲವೇನು ಆಟದ ಮೋಜು....ಇಲ್ಲಿ ಬಂದು ನಡುವೆ ಏಕೆ ಮೂಗು ಹಾಕುತ್ತಿದ್ದೀಯಾ ?

ವಸುಧಮ್ಮ : ಸಿಟ್ಟಾಗಬೇಡಪ್ಪ ?

ಅಗಸ : ಉರಿಯುವ ಬೆಂಕಿಗೆ ಉಪ್ಪು ಹಾಕಿ ಮತ್ತೆ ಸಿಟ್ಟಾಗಬೇಡಪ್ಪ ಎನ್ನುತ್ತೀಯಾ ?

ವಸುಧಮ್ಮ : ಆದರೆ ಎಲ್ಲರೆದುರಿಗೆ ಹೆಂಡತಿಯ ನಾಚಿಕೆ ತೆಗೆಯುವುದು ಒಳ್ಳೆಯದಲ್ಲಪ್ಪ.

ಅಗಸ : ಗಂಡ ಹೆಂಡತಿ ಮಧ್ಯ ಮೂರನೆಯವರು ತಲೆ ಹಾಕುವುದು ನನಗೆ ಇಷ್ಟವಿಲ್ಲ.

ವಸುಧಮ್ಮ : ಹಾಗಲ್ಲಪ್ಪ. ಅಲ್ಲಿ ನೋಡು ರಾಜನ ಸೈನಿಕರು ಬರುತ್ತಿದ್ದಾರೆ,

ಅಗಸ : ಬರಲಿ.

ವಸುಧಮ್ಮ : ಈ ಕಡೆಯೇ ಬರುತ್ತಿದ್ದಾರೆ.

ಅಗಸ : ಅವರು ಬಂದರೆ ನನಗೇನು ಭಯ.

ವಸುಧಮ್ಮ : ಎಲ್ಲಿಯಾದರೂ ರಾಜನೆಡೆಗೆ ಎಳೆಯ್ದೊದರೆ ನಾಚಿಕೆಗೇಡಲ್ಲವೆ ನಿನಗೆ,

ಅಗಸ : ನನಗೆ ನಾಚಿಕೆಗೇಡು. ಶ್ರೀರಾಮನಿಂದ ವಸುಂಧಮ್ಮ, ನಾನು ಎಂದರೆ ಯಾರೆಂದು ತಿಳಿದಿದ್ದಾನೆ ಅವನು. ನನಗೆ ಆಜ್ಞೆ ಮಾಡಿ ಒಳಗೆ ಬಿಡುವಂತೆ ಮಾಡುತ್ತಾನೇನು? ಇಲ್ಲ....ಇಲ್ಲ ಮನೆ ಬಿಟ್ಟು ದೂರ ಹೋದ ಹೆಂಡತಿಯನ್ನು ಮತ್ತೆ ಸ್ವಾಗತ ಮಾಡಿಕೊಳ್ಳುವುದಕ್ಕೆ ನಾನು ರಾಮನಲ್ಲ ಎಂದೆ.

ಹೆಂಡತಿ : ಅಯ್ಯೋ ನನ್ನನ್ನು ಬೀದಿಯಲ್ಲಿ ಬಗೆಯಿರಿ, ಕೊಲ್ಲಿರಿ, ಆದರೆ ಶ್ರೀರಾಮನನ್ನು ಮಾತ್ರ ಹೀಗೆ ಬಯ್ಯಬೇಡಿರಿ.

ಅಗಸ : ನೋಡು....ನೋಡು ಮೂಗಿಗೆ ಹೇಗೇ ಉರಿ ಬಿತ್ತು.

ವಸುಧಮ್ಮ : ಪದ್ಮನಾಭ ಏನಿದು ? ಆ ಸೈನಿಕ ಇದನ್ನು ಕೇಳಿದರೆ ?

ಅಗಸ : ಕೇಳಲಿ, ಕೇಳಲಿ ನನಗೆ ಹೆದರಿಕೆಯೇನು ? ಎಲ್ಲಿದ್ದಾನವನು? ನಾನು ಹೇಳುತ್ತೇನೆ ಅವನಿಗೆ–ಎಲಾ ಇವನ. ಓಡಿಹೋಗಿ ಬಿಟ್ಟನೇನು ಪುಣ್ಯಾತ್ಮ...ಹೋಗದೆ ಏನು ಮಾಡುತ್ತಾನೆ ಅನ್ನಿ-ಅಂಥವನು ಆಳಾಗಿರುವುದೇ ನಾಚಿಕೆ ಎನ್ನಿಸಿರಬೇಕು.

ಹೆಂಡತಿ : ದೇವರೇ, ಇಂಥ ಹೇಸಿ ಮಾತನ್ನು ಕೇಳುವುದಕ್ಕಿಂತ ನಾನೇಕೆ ಸಾಯಬಾರದು ?

ವಸುಧಮ್ಮ : ನಿನಗೆ ಒಳ್ಳೆಯದಕ್ಕೆಂದು ತಾನೇ ನಾನು ಹೇಳುವುದು.... ನನ್ನ ಮಾತು ಹೇಸಿಗೆ ಎನಿಸಿದರೆ ನಾನೇನು ಮಾಡಲಿ ?

ಅಗಸ : ಯಾರ ಸಾಂತ್ವನದ ನುಡಿಗಳೂ ನನಗೆ ಬೇಕಿಲ್ಲ.

ವಸುಧಮ್ಮ : ಕಂಡವರ ಮನೆ ಸುದ್ದಿ ನಮಗೇಕಪ್ಪ. ನಮ್ಮದೇ ನಮಗೆ ಹೊರೆಯಾಗಿರುವಾಗ ?

ಅಗಸ : ಸಾಕು ಮಾಡು. ಮತ್ತೆ ಮಾತನಾಡಬೇಡ ನಡಿ

[ದೀಪ ಆರುವುದು. ದುಃಖಸೂಚಕವಾದ ಹಿನ್ನೆಲೆ. ಮತ್ತೆ ಬೆಳಕಾದಾಗ ಅಗಸ ಕೊರಗುತ್ತಿದ್ದಾನೆ].

ಅಗಸ : ತಂದೆಯ ಮನೆಗೂ ಹೋಗದೆ ವಸುಧಮ್ಮನ ಮನೆಯಲ್ಲಿ ಇದ್ದಾಳಂತೆ-ಇರಲಿ ಎಂದುಕೊಳ್ಳೋಣ, ಎಂದರೆ ನನ ಗೇಕೋ ಹುಚ್ಚು ಹಿಡಿದಂತಾಗುತ್ತಿದೆಯಲ್ಲ-ಎಲ್ಲರೆದುರು ತಳೆದ ಅಪತಾರ ನೆನೆದಾಗ ನಾಚಿಕೆಯಿಂದ ಎದೆ ಒಡೆದು ಹೋಗುತ್ತದೆ. ಹೆಂಡತಿಯನ್ನು ಒಂದು ಕ್ಷಣ ಕಾಣಲೇ ಬೇಕೆನಿಸಂತ್ತದೆ. ಅವಳ ಕ್ಷಮೆ ಕೇಳಬೇಕೆನಿಸುತ್ತದೆ. ಏನೆಂದರೂ ಅವಳು ಸುಶೀಲೆ. ಕುವಿಚಾರಕ್ಕೆ ಎಡೆಗೊಡುವ ವಳಲ್ಲ. ಹೇಗಿದ್ದರೂ ಅವಳು ಹೋಗಿ 4–5 ದಿನವಾಗಿದೆ. ಆಗಲಿ. ಎಷ್ಟು ದಿನವಾಗುತ್ತದೋ ನೋಡಿಯೇಬಿಡುತ್ತೇನೆ,

[ಮತ್ತೆ ಬಾಗಿಲು ತಟ್ಟಿದ ಶಬ್ದ]

ಅಗಸ : ಯಾರದು ?

ಹೆಂಡತಿ : ನಾನು ಸ್ವಾಮಿ. ಬೇಗ ಕದ ತೆರೆಯಿರಿ.

ಅಗಸ : ಏಕೆ ಬಂದೆ-ಕದ ತೆರೆಯುವುದಿಲ್ಲ ಎಂದರೆ ತೆರೆಯುವುದಿಲ್ಲ.

ಹೆಂಡತಿ : ನನಗಾಗಿ ಅಲ್ಲ ಸ್ವಾಮಿ, ನಿಮಗಾಗಿ ನಿಮ್ಮ ಜೀವಕ್ಕಾಗಿ. ನಿಮ್ಮನ್ನ ಕೊಲ್ಲಲಿಕ್ಕೆ ಬರುತ್ತಿದ್ದಾರೆ.

ಅಗಸ : ನನ್ನನ್ನು ಕೊಲ್ಲಲಿಕ್ಕೆ ಬರುವವರು ಯಾರು ? ಮಾವನವರೆ

ಹೆಂಡತಿ : ವಿನೋದಕ್ಕೆ ಒಂದಿಷ್ಟೂ ಹೊತ್ತಿಲ್ಲ. ಅದೋ ಬಂದರವರು–

[ಆಚೆ ಗುಂಪಿನ ಗದ್ದಲ]

ಅಗಸ : ಏನು ಆ ಗಲಭೆ. ಸ್ವಲ್ಪ...ತಡೆ ಕದ ತೆರೆಯುತ್ತೇನೆ, ಅಂ ? ಇಷ್ಟೆಲ್ಲಾ ಜನ ಯಾರಿವರು ? ಏಕೆ ಬರುತ್ತಿದ್ದಾರೆ ?

ಹೆಂಡತಿ : ಒಳಗೆ ಬನ್ನಿ–ಬೇಗ ಕದ ಮುಚ್ಚಿಕೊಳ್ಳಿ–ಹೊರಗೆ ನಿಲ್ಲಬೇಡಿ. ನಿಮ್ಮ ಜೀವಕ್ಕೆ ಅಪಾಯ. ಮುಚ್ಚಿರಿ...ಬೇಗ...

[ಆಚಿನಿಂದ ಕೂಗು. 'ಪದ್ಮನಾಭ ಒಳಗೆ ಓಡ ಬೇಡ' ಎಂಬ ಕೂಗು]

ಅಗಸ : [ಆಚೆ ನೋಡಿ] ಯಾರವರು ನಮ್ಮ ಮನೆಯನ್ನೇಕೆ ಸುತ್ತುತ್ತಿದ್ದಾರೆ...ಗಲಭೆ ಮಾಡುತ್ತಿದ್ದಾರೇಕೆ ? ಏನು ಬೇಕಂತೆ ಅವರಿಗೆ ?

ಹೆಂಡತಿ : ನೀವಿನ್ನೂ ಕೇಳಿಲ್ಲವೆ ಸ್ವಾಮಿ ಅನರ್ಥ ಸುದ್ದಿ ?

ಅಗಸ : ಅನರ್ಥ ? ನನಗೆ ಹೇಗೆ ತಿಳಿಯಬೇಕು ? ನಾನು ಮನೆಯಿಂದ ಹೊರಗೇ ಹೋಗಿಲ್ಲ. ಯಾವ ಅನರ್ಥ ?

ಹೆಂಡತಿ : ವಸುಧಮ್ಮನ ಗಂಡ ಹೇಳಿದರು ಸ್ವಾಮಿ. ಈ ಜನ ಬರುತ್ತಿದ್ದಾರೆಂದು...ನಿಮ್ಮಿಂದ ಸೀತೆಗೆ ಮತ್ತೆ ವನವಾಸ ವಾಯಿತೆಂದು ರೊಚ್ಚಿಗೆದ್ದ ಈ ಜನ ಬಂದಿದ್ದಾರೆ.

ಅಗಸ : ಏನು ಬಡಬಡಿಸುತ್ತಿರುವೆ ಹುಚ್ಚಿಯಂತೆ.

ಹೆಂಡತಿ : ಆ ದಿನ, ನೀವು ಆಡಿದ ಮಾತುಗಳನ್ನು ಕೇಳಿ ಆ ಸೈನಿಕ ಕೂಡಲೆ ಅರಮನೆಗೆ ಹೋದನಂತೆ. ಎಲ್ಲವನ್ನೂ ಅರಸನಿಗೆ ಹೇಳಿದನಂತೆ.

ಅಗಸ : [ರೋಷದಿಂದ] ಮೂರ್ಖಿ, ಕೆಲವರ ಬಾಯಲ್ಲೊಂದು ಶಬ್ದವು ನಿಲ್ಲುವುದಿಲ್ಲ.

ಹೆಂಡತಿ : ಅದರಿಂದ ಮನನೊಂದು ರಾಮಚಂದ್ರ ಪ್ರಭು ಲಕ್ಷ್ಮಣನೊಂದಿಗೆ ಸೀತೆಯನ್ನು ವನವಾಸಕ್ಕೆ ಕಳುಹಿಸಿದ್ದಾನಂತೆ. ಸ್ವಾಮಿ, ಈ ಸಲ ಮಾತ್ರ ಆಜನ್ಮ ವನವಾಸ ; ನಿಮ್ಮ ಒಂದ ಮಾತಿಗಾಗಿ.

[ಆಚೆಯಿಂದ ಜೋರಾಗಿ ಗದ್ದಲ. ಕೂಗು, ಮನೆಯ ಮೇಲೆ ಕಲ್ಲುಗಳು ಬೀಳುತ್ತಿರುವ ಸದ್ದು]

ಧ್ವನಿ 1 : ಮುರಿಯಿರಿ ಕದ–

ಧ್ವನಿ 2 : ಹೊರಗೆಳೆದು ತನ್ನಿರಿ ಆ ಮೂರ್ಖನನ್ನು–

ಒಟ್ಟಿಗೆ ; ಬೆಂಕಿ ಹಚ್ಚಿರಿ ಅವನ ಮನೆಗೆ–

ಹೆಂಡತಿ : [ಕಿಟಕಿಯ ಬಳಿ ಹೋದ ಗಂಡನನ್ನು ಕುರಿತು] ಸ್ವಾಮಿ, ಕಿಟಕಿಯ ಹತ್ತಿರ ಹೋಗಬೇಡಿ. ಜನರು ಕಲ್ಲು ಒಗೆಯುತ್ತಿದ್ದಾರೆ.

ಅಗಸ : [ನಗುವ] ಹ ಹ ಹ.

ಹೆಂಡತಿ : ಇಂಥ ಪ್ರಸಂಗದಲ್ಲಿಯೂ ನಗೆಯೇ ಸ್ವಾಮಿ, ಎಂಥ ಕಲ್ಲೆದೆ ನಿಮ್ಮದು.

ಅಗಸ : ಅಯೋಧ್ಯೆಯ ಸುಸಂಸ್ಕೃತ ಪೌರರು ರಾಮರಾಜ್ಯದ ಪ್ರಜೆಗಳೆಂದು ತಮ್ಮ ಶಾಂತಿ, ವಿನಯ, ವಿದ್ಯೆಗಾಗಿ ಹೆಸರಾದ ಜನ. ಆದರೆ ನನ್ನ ಒಂದು ಮಾತಿಗಾಗಿ ಇವರ ಛದ್ಮ ವೇಷವೆಲ್ಲಾ ಕಳಚಿ ಬಿದ್ದದೆ ನೋಡು.

ಹೆಂಡತಿ : ಅವರನ್ನೇಕೆ ಬಯ್ಯುತ್ತೀರ. ನೀವಿಂಥವರು ಎಂದು, ನನಗೂ ಇಷ್ಟು ದಿನ ತಿಳಿದಿರಲಿಲ್ಲ. ತಿಳಿದಿದ್ದರೆ ತಿರುಗಿ ಬರುತ್ತಿರಲಿಲ್ಲ– ಈ ಕಟುಕರ ಮನೆಗೆ–

ಅಗಸ : ನಾನೂ ಈ ಅಯೋಧ್ಯೆಯವನೇ ಅಲ್ಲವೆ ? [ಕುದುರೆಗಳು ಬರುತ್ತಿರುವ ಸದ್ದು] ಏನಿದು ಕುದುರೆಗಳು. ಪರ ಊರಿನವರು ಬಂದರೇನು ನನ್ನ ಸ್ವಾಗತಿಸಲಿಕ್ಕೆ.

ಹೆಂಡತಿ : ನಾನು ನೋಡುತ್ತೇನೆ ಸ್ವಾಮಿ. ಏನಾದರೂ ನೀವು ಕಿಟಕಿಯ ಬಳಿ ಹೋಗಬೇಡಿ, ಸ್ವಲ್ಪ ತಾಳಿ [ತಾನು ಆಚೆ ನೋಡಿ] ಇವರು ಬೇರೆ ಊರಿನ ಜನರಲ್ಲ. ಸೈನಿಕರು, ರಾಜನ ರಾಹುತರು.

ಅಗಸ : [ಆಶ್ಚರ್ಯದಿಂದ] ರಾಹುತರು! ಅವರು ಇಲ್ಲಿ ಏಕೆ ? ನನ್ನನ್ನು ಹಿಡಿದೊಯ್ಯಲು ಬಂದಿದ್ದಾರೇನು ?

ಹೆಂಡತಿ : ಅಲ್ಲಿ ನೋಡಿ. ಸೈನಿಕರ ಮುಂದಾಳು. ಏನೋ ಸಿದ್ಧತೆ ನಡೆಸಿದ್ದಾನೆ. [ಎನ್ನುವಾಗ ಸೈನಿಕರ ಮುಂದಾಳು ಪತ್ರದ ಸುರುಳಿ ಬಿಚ್ಚಿ ಓದತೊಡಗುವ. ಎಲ್ಲ ಮಂದಿ ಮಾತು ಆಲಿಸುತ್ತ ಸ ತ್ರ ನಿಲ್ಲುವರು. ಒಬ್ಬಾತ ತಮಟೆ ಬಡೆಯುವ]

ಸೈನಿಕ : ಕೇಳಿರಿ–ಕೇಳಿರಿ–ಕೇಳಿರಿ, ಅಯೋಧ್ಯೆಯ ನಾಗರೀಕರೆ ಕೇಳಿರಿ– ಸಕಲ ಭೂಮಂಡಲೇಶ್ವರ ಮುಂದಾಳು ಕೌಸಲ್ಯಾತನಯ ಶ್ರೀರಾಮಚಂದ್ರ ಪ್ರಭುಗಳು ಈ ಮುಂದಿನಂತೆ ಆಜ್ಞಾಪಿಸಿ

ದ್ದಾರೆ. ರಾಣಿ ಸೀತಾದೇವಿಯ ನಿರ್ಗಮನದಿಂದ ಪೌರರಿಗೆಷ್ಟು ದುಃಖವಾಗಿದೆ ಎಂಬುದರ ಕಲ್ಪನೆ ರಾಜೇಂದ್ರರಿಗೆ ಇದೆ. ಆದರೆ ಸಂತಾಪಕ್ಕೆ ಒಳಗಾಗಿ ಪೌರರು ಹಿಂಸೆಗೆ ಕೈ ಹಾಕಬಾರದು. ಅನರ್ಥಕ್ಕೆ ಎಡೆಗೊಡಬಾರದು. ರಾಜರ ಸಕಲ ಕಾರ್ಯಗಳ ಹೊಣೆ ಅವರ ಮೇಲೆಯೆ ಇದೆ ಎಂಬುದನ್ನು ನೆನಪಿಟ್ಟು ಶಾಂತಿಯಿಂದ ವರ್ತಿಸಬೇಕು [ಒಬ್ಬ ಪೌರನನ್ನು ಕುರಿತು ದರ್ಪದಿಂದ] ಕೇಳಿದಿರೇನು ರಾಜಾಜ್ಞೆ. ಹೊರಡಿರಿ ಮನೆಗೆ.

ಒಬ್ಬಾತ : [ಗುಂಪಿನಿಂದ] ಆ ದುರುಳನನ್ನು ಅರಸರು ಹೀಗೇ ಬಿಡಬಾರದು.

ಇನ್ನೊಬ್ಬ : ನಿಜ–ಅವನಿಗೆ ತಕ್ಕ ಶಿಕ್ಷೆ ಆಗಲೇಬೇಕು.

ಮತ್ತೊಬ್ಬ : ಈಗಿಂದೀಗಲೆ ಅವನನ್ನು ಎಳೆದು ತನ್ನಿ–

ಸೈನಿಕ : ಸಾಕು ಈ ಜೊಳ್ಳು ಮಾತು–ಶ್ರೀರಾಮ ಪ್ರಭುಗಳಿಗೆ ನ್ಯಾಯದ ಪಾಠ ಹೇಳಿಕೊಡುತ್ತೀರೇನು. ಹೇಳಿದಷ್ಟು ಕೇಳಬಾರದೆ ? ಹುಂ. ಕೂಡಲೇ ಹೊರಡಿ ಮನೆಗೆ.

[ಕ್ರಮೇಣ ಜನ ಚದುರುವರು ಸೈನಿಕನೂ ಹೊರಡುವ].

ಅಗಸ : ಹೋದರೇನು ಜನ,

ಹೆಂಡತಿ : ಹೋದರು. ಎಲ್ಲ ಹೋದರು–

ಅಗಸ : ಈಗ ನಾನೂ ಹೊರಡಬೇಕು.

ಹೆಂಡತಿ : [ಬೆದರಿ] ನೀವು, ನೀವೆಲ್ಲಿ ಹೊರಟಿರಿ ?

ಅಗಸ : ಅರಮನೆಗೆ. ನಾನು ರಾಮಚಂದ್ರನನ್ನು ಕಾಣಲೇಬೇಕು. ಸೀತೆ ಮರಳಿ ಬರಲೇ ಬೇಕು–

ಹೆಂಡತಿ : [ದೈನ್ಯದಿಂದ] ಈಗ ಬೇಡಿ ಸ್ವಾಮಿ. ರಾಜರ ಕ್ಷಮೆ ಬೇಡುವುದಿದ್ದರೂ ಸ್ವಲ್ಪ ತಡೆದು ಹೋಗಿ.

ಅಗಸ : [ತಾತ್ಸಾರದಿಂದ] ಕ್ಷಮೆ, ನಾನು ಯಾರ ಕ್ಷಮೆ ಕೇಳಬೇಕ ನಾನೇನು ತಪ್ಪು ಮಾಡಿದೆ. ನನ್ನ ಮಾತು ಕೇಳಿ ರಾಮ-ಸೀತೆಯನ್ನು ವನಕ್ಕೆ ಅಟ್ಟಿದ್ದಾನಂತಲ್ಲ.

ಹೆಂಡತಿ : ಹೌದು.

ಅಗಸ : ಈಗ ನನ್ನ ಮಾನವನ್ನು ಉಳಿಸಲಿಕ್ಕೆ ಅವಳು ತಿರುಗಿ ಬರಬೇಕು.

ಹೆಂಡತಿ : ನಿಮ್ಮ ಮಾತೇ ಅರ್ಥವಾಗಲ್ಲೊಲ್ಲದು.

ಅಗಸ : ನೀನು ಆ ಸೈನಿಕರ ಮುಂದಾಳು ಹೇಳಿದ್ದನ್ನು ಕೇಳಲಿಲ್ಲ ವೇನು ?

ಹೆಂಡತಿ : ಏನೆಂದ ಹೇಳಿ ?

ಅಗಸ : ರಾಜರ ಕೃತ್ಯದ ಹೊಣೆ ರಾಜರ ಮೇಲೆಯೇ ಇವೆಯಂತೆ. ಎಷ್ಟು ಚತುರತೆಯಿಂದ ಹೊಣೆ ತನ್ನದಲ್ಲ ಎಂದು ಸೂಚಿಸುತ್ತಾನೆ. ನಿನ್ನ ರಾಮ. ಜನರೂ ಇದನ್ನು ತನ್ನ ತಲೆಯ ಮೇಲೆ ಹಾಕಿದ್ದಾರೆ. ಈ ಅಪವಾದ ಹೊತ್ತು ನಾನಿಲ್ಲಿ ಇರುವುದಾರೂ ಹೇಗೆ? ಈ ಅಪವಾದ ನನಗೆ ಅಂಟಿಕೊಂಡರೆ ನಾನು ಜೀವನ ಸಾಗಿಸುವದಾದರು ಹೇಗೆ ? ನನಗೆ ಬಟ್ಟೆ ಕೊಡುವವರು ಯಾರು ? ಇಲ್ಲ, ಇಲ್ಲ. ನಾನಿಂದು ಅರಸರನ್ನು ಕಾಣಲೇ ಬೇಕು–

ಹೆಂಡತಿ : ಸ್ವಾಮಿ. ದಾರಿಯಲ್ಲಿ ನಿಮಗೇನಾದರೂ ಅಪಾಯವಾದೀತು. ದಯಮಾಡಿ ಈಗ ಹೋಗಬೇಡಿ.

ಅಗಸ : ಜನರಿಗೇಕೆ ಸುಮ್ಮನೆ ಹೆದರುತ್ತೀ ನೀನು ? ಅವರು ರಾಮನ ಭಕ್ತರು. ಅವರಿಗೆ ರಾಮನ ಮಾತಿನ ಅರ್ಥ ತಿಳಿಯಲಿಲ್ಲವೆಂದು ಎಣಿಸಿದೆಯಾ ? ಅವರು ನನ್ನನ್ನು ಜೀವಂತ ಇರಗೊಟ್ಟರೆ ನಾನಿರುವವರೆಗೆ ನನ್ನ ಮೇಲೆ ಈ ಅಪವಾದ ಹೊರಿಸುತ್ತಿರಬಹುದು. ಆದರಿಂದ ನನ್ನನ್ನು ಬಿಟ್ಟಲಾರದವರು.

ಹೆಂಡತಿ : ಅವರ ಭಯ ಇಲ್ಲ ನನಗೆ. ನನಗಿದ್ದ ಭಯ ರಾಮನದು.

ಅಗಸ : [ಹಟದಿಂದ] ನೀನು ಸಾವಿರ ಹೇಳು. ನಾನಂತೂ ಈಗ ಅರ ಮನೆಗೆ ತೆರಳಿ ರಾಮನನ್ನು ಕಾಣುವವನೇ–

(ಎಂದು ಬಿರಬಿರನೆ ಆಚೆ ಹೊಡುವ. ಹೆಂಡತಿ ಬೆಪ್ಪಾಗಿ ನಿಲ್ಲುವಳು. ದೀಪ ಕರಗುವುದು. ಮತ್ತೆ ದೀಪ ಬೆಳಗಿದಾಗ ಅರಮನೆಯ ಮುಂಭಾಗ. ಕಾವಲುಗಾರರಿಬ್ಬರು ಪಹರೆ ಕಾಯುತ್ತಿದ್ದಾರೆ. ಅವರಲ್ಲಿ ಒಬ್ಬನೊಂದಿಗೆ ಅಗಸ ವಾಗ್ವಾದ ಮಾಡುತ್ತಿದ್ದಾನೆ].

ಪಹರೆ ೧ : ಇನ್ನು ಹೆಚ್ಚು ಮಾತು ಅನವಶ್ಯಕ. ಹೊರಡಿ ಇಲ್ಲಿಂದ–

ಅಗಸ : [ಜೋರಿನಿಂದ] ಒಳಗೆ ಬಿಡುವುದಿಲ್ಲ ಎಂದರೇನು ? ನಾನೀಗ ರಾಮನನ್ನು ಕಾಣಲೇಬೇಕು.

ಪಹರೆ ೨ : ಗದ್ದಲ ಮಾಡದೆ ತೊಲಗಾಚೆ

ಅಗಸ : ಇಲ್ಲ. ಅವರನ್ನು ಕಾಣದೆ ನಾನು ಈ ಸ್ಥಳ ಬಿಟ್ಟು ಕದಲು ವುದಿಲ್ಲ.

ಪಹರೆ ೧ : ಅದು ಹೇಗೆ ಇಲ್ಲಿರುತ್ತೀಯೋ ನಾನು ನೋಡುತ್ತೇನೆ,

[ಈ ಮೂವರು ಮಾತುಕತೆಯಲ್ಲಿ ಮಗ್ನರಾಗಿ ದ್ದಾಗ ಭರತನ ಆಗಮನ. ಅವನನ್ನು ಕಂಡು ಪಹರೆಯವರು ಬೆಚ್ಚಿ ನಿಲ್ಲುವರು]

ಭರತ : [ಗಂಭೀರವಾಗಿ] ಏನದು ಗದ್ದಲ ?

ಅಗಸ : ನಮಸ್ಕಾರ ಸ್ವಾಮಿ

ಭರತ : ಏನಾಗಬೇಕು ನಿನಗೆ ?

ಅಗಸ : ಮಹಾಸ್ವಾಮಿ

ಭರತ : ಹೇಳು ಏನು ವಿಚಾರ ?

ಅಗಸ : ನಾನೀಗ ಶ್ರೀರಾಮಚಂದ್ರರನ್ನು ಕಾಣಲೇಬೇಕೆಂದು ಬಂದೆ. ದ್ವಾರಪಾಲಕ ನನಗೆ ಒಳಗೆ ಹೋಗಗೊಡಲಿಲ್ಲ. ಅವನ ಕಾಲ್ಗೆರಗಿದೆ, ಜಗಳಾಡಿದೆ. ಅಷ್ಟರಲ್ಲಿ ತಾವು ಬಂದಿರಿ.

ಭರತ : ಸರಿ. ಆದರೆ ಅವರಿಗೀಗ ಸ್ವಾಸ್ಥ್ಯವಿಲ್ಲ.

ಅಗಸ : ಅಲ್ಲ ಮತ್ತೆ ನಾಳೆ ಬರಲೆ ಪ್ರಭು.

ಭರತ : ಏನು ಹೇಳುವುದಿದ್ದರೂ ನನ್ನಲ್ಲಿಯೇ ಹೇಳು.

ಅಗಸ : ನಾನು ಕಾಣಬೇಕಿತ್ತು. ಶ್ರೀರಾಮಚಂದ್ರನನ್ನು. ಅವನು ತನ್ನ ಒಂದು ಕೃತ್ಯದಿಂದ ನನ್ನ ಜೀವನ ಹೇಗೆ ಹಾಳು ಮಾಡುತ್ತಿದ್ದಾನೆಂದು ತೋರಿಸುವದಿತ್ತು.

ಭರತ : ಒಗಟಿನಂತೆ ಮಾತನಾಡಬೇಡ, ಹೇಳಬೇಕೆಂದಿರುವುದನ್ನು ನೇರವಾಗಿ ಹೇಳು. ಈ ಭರತನಲ್ಲಿ ವಿಷಯ ತಿಳಿಸ ಬಹುದಲ್ಲ.

ಅಗಸ : ನಾನೇನು ಹೇಳಲಿ ಒಡೆಯ. ನಾನಂದು ಕೋಪದಿಂದ ಆಡಿದ ಮಾತಿಗೆ ಪ್ರಭುಗಳು ಸೀತಾದೇವಿಯನ್ನು ವನಕ್ಕೆ ಕಳುಹಿಸಿದ್ದಾರಂತೆ. ನಾನು ಕೆಟ್ಟ ಉದ್ದೇಶದಿಂದ ಆಡಿರ ಲಿಲ್ಲ ಒಡೆಯ, ಬಾಯ್ತಪ್ಪಿ ಆಡಿದ ಮಾತುಗಳು.

ಭರತ : ಆ ಮಾತಿಗೆ ಸಂಬಂಧಿಸಿ ಬಂದಿರುವೆಯಾ ? ಹುಂ, ಈಗ ದುಃಖಪಟ್ಟು ಏನು ಉಪಯೋಗ? ಶ್ರೀ ರಾಮಚಂದ್ರರು ಈಗ ನಿಶ್ಚಯ ಮಾಡಿದ್ದಾರೆ-ಈಗ ಅವರು ಮನಸ್ಸನ್ನು ಬದಲಿಸಲಾರರು.

ಅಗಸ : ಅದರೆ ನನ್ನಗತಿ ಏನು ? [ಕಳವಳದಿಂದ] ಶ್ರೀರಾಮಚಂದ್ರ ಪ್ರಭುಗಳ ಕೃತ್ಯದ ಹೊಣೆಯನ್ನು ನಾನು ಹೊರಲಾರೆ ಸ್ವಾಮಿ.

ಭರತ : ನಾನೇನು ಮಾಡಲಿ ರಜಕ. ತಪ್ಪು ನಿನ್ನದಲ್ಲ. ನೀನಲ್ಲ ದಿದ್ದರೆ ಬೇರೆ ಯಾವುದಾದರೂ ಕಾರಣ ಸಿಗುತ್ತಿತ್ತು ಶ್ರೀರಾಮನಿಗೆ.

ಅಗಸ : ಎಂದರೆ, ಎಂದರೇನು ಸ್ವಾಮಿ ?

ಭರತ : ಇನ್ನು ಬಿಡಿಸಿ ಹೇಳಲಾರೆ ಸಧ್ಯಕ್ಕೆ ಅಷ್ಟೆ.

ಅಗಸ : ಸ್ವಾಮಿ

[ಭರತ ಮಾತನಾಡದೆ ಗಂಭೀರವಾಗಿ ತೆರಳುವ]

ಅಗಸ : ಸ್ವಾಮಿ–ಸ್ವಾಮಿ.

[ಎಂದು ನಾಲ್ಕು ಹೆಜ್ಜೆ ಮುಂದೆ ಹೋಗಿ ನಂತರ ನಿರಾಶನಾಗಿ ಹಿಂತಿರುತ್ತಾ ತನ್ನಲ್ಲಿ ತಾನೆ]

ಹುಂ, ಇನ್ನು ಮನೆಗೆ ಹೋಗುವದು ಅಶಕ್ಯ. ಹೆಂಡತಿಯನ್ನು ಕಾಣುವುದು ಅಸಹ್ಯ. ಅವಳು ಆ ಅಪವಾದದ ಸಾಕ್ಷಾತ್ಕಾರ. ಇಲ್ಲ, ಇಲ್ಲ–ಖಂಡಿತಾ ನನ್ನಾಣೆ. ಇನ್ನು ಅಯೋಧ್ಯೆಗೆ ಬರಲಾರೆ ಹುಂ. ಮುಂದೆ ಈ ಊರು ಬಿಡಲೇಬೇಕು.

[ದೀಪ ಆರುವದು. ಮತ್ತೆ ದೀಪ ಬೆಳಗಿದಾಗ ಒಂದು ಮೂಲೆಯಲ್ಲಿ ವಿಷ್ಣುಪುರಎಂಬ ಫಲಕ. ಒಂದು ಗುಂಪು ಗ್ರಾಮದ ಮಂದಿ ಬಣ್ಣ ಬಣ್ಣದ ವೇಷ ತೊಟ್ಟು. ಕೋಲಾಟ ಆಡುವುದ ರಲ್ಲಿ ಮಗ್ನರಾದ್ದಾರೆ. ಅಲ್ಲಿಗೆ ಹೊಂದುವಂಥ ಯಾವುದಾದರೂ ಜಾನಪದ ಗೀತೆ ಅಳವಡಿಸಿ ಕೊಳ್ಳಬಹುದು.]

ಅಗಸ : [ದೂರನಿಂತು] ಭಲೆ–ಭಲೆ–

ಒಬ್ಬಾತ : [ಕುಣಿಯುತ್ತಲೆ] ಏನು ನೀವು ಮಾತ್ರ ಕುಣಿತಕ್ಕೆ ಸೇರದೆ ನಿಂತಿದ್ದೀರಿ ಬನ್ನಿ.

ಅಗಸ : ಕುಣೀತಿದ್ದ ಮನಸ್ಸು ವಯಸ್ಸು ಮುಗೀತು. ಏನೋ ಬೇಸರಾ ಅಂತ ನೋಡ್ತಾ ನಿಂತೆ.

ಒಬ್ಬಾತ : ಏನು–ಬೇಸರ ಹೇಳಬಾರದೆ ?

ಅಗಸ : ಏನಿಲ್ಲ [ಎಂದೂ ತಾನೂ ಅವರೊಂದಿಗೆ ಕುಣಿತಕ್ಕೆ ಸೇರುವ]

ಮತ್ತೊಬ್ಬ : [ಇನ್ನೊಬ್ಬನನ್ನು ರಂಗದ ಮುಂಭಾಗಕ್ಕೆ ಕರೆದು] ನಂಗೊಂದು ಅನುಮಾನ. ಈತ ಯಾವ ಊರವನು ಹೇಳು ?

ಇನ್ನೊಬ್ಬ : ಹ ಹ ಬಹಳ ಚೆನ್ನಾಗಿದೆ. ಅಷ್ಟು ಗೊತ್ತಿಲ್ವೆ. ಇದೇ ಊರವನು. ನಮ್ಮ ಬೀದೀಲೇ ಇದಾನೆ.

ಮತ್ತೊಬ್ಬ : ಇಲ್ಲಿರೋದು ನಿಜ–ಅವನ ನಿಜವಾದ ಹೆಸರೇನು ಗೊತ್ತೇನು ?

ಒಬ್ಬ : ಏನು ?

ಮತ್ತೊಬ್ಬ : ಅವನೇ ಪದ್ಮನಾಭ–ಅಯೋಧ್ಯೆಯ ದುಷ್ಟ ಅಗಸ

ಇನ್ನೊಬ್ಬ : ಹೌದೆ, ಲೇ ಪದ್ಮನಾಭ.

ಅಗಸ : [ಬೆಚ್ಚಿ] ಓ, ಈ ಊರಿನವರು ಹೆಸರು ಬದಲಿಸಿ ಕೊಂಡರೂ ಗುರುತು ಹಿಡಿದಂತಿದೆ. ಮಾಡಲಿ ಈಗ.

ಎಲ್ಲರು : ಏ ಪದ್ಮನಾಭ–

ಅಗಸ : ಇಲ್ಲಿಂದ ಓಡುವುದೇ ವಾಸಿ.

[ಓಡತೊಡಗುವನು]

ಗುಂಪು : ಹಿಡ್ಕೊಳೊ ಅವನ್ನ–ಹೋಡೀರೋ ಕಲ್ಲು.

[ಅವನು ಓಡುವ, ಗುಂಪು ಅವನನ್ನು ಓಂಬಾಲಿಸುವದು. ದೀಪ ಆರಿ ಮತ್ತೆ ಹತ್ತಿದಾಗ ಇನ್ನೊಂದು ಮೂಲೆಯಲ್ಲಿ ಮಿಥಿಲಾ ಎಂಬ ಫಲಕವಿದೆ. ಮುಂಚೆ ಒಬ್ಬಾತ ಹಾರ್ಮೋನಿಯಂ ಬಾರಿಸಿಕೊಂಡು ಹಾಡುತ್ತಾ ಬರುವ. ಅಗಸ ಒಂದು ಅಂಗಡಿಯಲ್ಲಿ ಕುಳಿತಿದ್ದಾನೆ.]

ಅಗಸ : ಸಧ್ಯ, ಒಂದು ಅಂಗಡೀಂತ ಆಯಿತಲ್ಲ.

ವ್ಯಕ್ತಿ : [ಹಾರ್ಮೋನಿಯಂ ಬಾರಿಸುವುದನ್ನು ನಿಲ್ಲಿಸಿ] ಅಯ್ಯಾ.

ಅಗಸ : ಸ್ವಾಮಿ.

ವ್ಯಕ್ತಿ : ಬೇಸರ ಅಂತ ಕೂತಿದೀಯೋ ಯಾರನ್ನಾದರೂ ಕಾದು ಕೂತಿದ್ದೀಯೋ ?

ಅಗಸ : ಒಂದು ಗಂಟು ಬಟ್ಟೆ ಒಗೆದು ಸುಸ್ತಾಗಿ ಕೂತಿದೀನಿ

ವ್ಯಕ್ತಿ : ಇಂಥ ವೇಳೇಲಿ ಮನರಂಜನೆ ಬೇಕು ತಾನೆ ?

ಅಗಸ : ಮನರಂಜನೆ ಹುಡುಕಿಕೊಂಡು ಹೋಗೋ ಅಷ್ಟು ಮನಸ್ಸಿನ ನೆಮ್ಮದಿ ನಾನು ಕೇಳಿ ಬರಲಿಲ್ಲ.

ವ್ಯಕ್ತಿ : ಇಲ್ಲೇ ಅಂಥ ಒಂದು ಕಾರ್ಯಕ್ರಮ ನಡೆದರೆ ?

ಅಗಸ : ನೋಡಲೇ ಬೇಕು ಅಂದರೆ ನೋಡ್ತೀನಿ,

[ವ್ಯಕ್ತಿ ಹಾರ್ಮೋನಿಯಂ ಬಾರಿಸತೊಡಗಿದಾಗ ಒಬ್ಬಾಕೆ ನಾಟ್ಯ ಮಾಡುವಳು. ಬಿರುಸಿನ ನೃತ್ಯ ನೋಡಿ ಅಗಸ ತಲ್ಲೀನನಾಗುವ.]

ಅಗಸ : ಭಲೆ ಭಲೆ

ವ್ಯಕ್ತಿ : ನಿಮ್ಮಂಥವರು ಭಲೆ ಅಂದರೆ ಸಾಲದು. ಯಥಾಶಕ್ತಿ ಹಣ ಕೊಡಬೇಕು.

ಅಗಸ : ಹ್ಞಾಂ ತೊಗೋಪ್ಪ

[ವ್ಯಕ್ತಿ ಕೈಚಾಚಿ ಹಣ ತೆಗೆದುಕೊಳ್ಳುವ, ನೃತ್ಯ ನೋಡುತ್ತ ನಿಂತ ಒಬ್ಬಾತ ಗೇಲಿ ಮಾಡುವ].

ಒಬ್ಬಾತ : ಥೂ. ಅವನತ್ರ ಕಾಸು ಇಸ್ಕೊಂಡು ಜೀವನ ಮಾಡಬೇಕಾ ನೀನು ?

ನೃತ್ಯಗಾತಿ : ಸಂತೋಷದಿಂದ ಅವರು ಹಣ ಕೊಟ್ಟರೆ ನಾನ್ಯಾಕೆ ತೊಗೋಬಾರದು?

ವ್ಯಕ್ತಿ : ಅದೇ ಸಂಸಾರ ತೂಗಿಸಬೇಕಾದರೆ ಕಾಸಿಗೆ ಕೈಯೊಡ್ಡಲೇ ಬೇಕು.

ಒಬ್ಬಾತ : ಥೂ, ಅಂಥ ದ್ರೋಹಿಯಿಂದ ಹಣ ತಗೋಬೇಕಾ ?

ಅಗಸ : [ರೇಗಿ] ಏಯ್–ಏನು ಮಾತಾಡ್ತಿದೀ ಯಾರು ನೀನು ?

ಒಬ್ಬಾತ : ನಾನು ಯಾರು ಅನ್ನೋದು ಮಿಥಿಲೆ ಜನಕ್ಕೆಲ್ಲ ಗೊತ್ತು.

ಅಗಸ : ನಾನು ಯಾರು ಅಂತಲೂ ಗೊತ್ತು.

ಒಬ್ಬಾತ : ಬದಲಾದ ಹೆಸರು ಗೊತ್ತು. ಆದರೆ ನೀನೇ ಅಯೋಧ್ಯೆಯ ಅಗಸ. ಸೀತಾಮಾತೆ ಕಾಡಿಗೆ ಹೋಗಲಿಕ್ಕೆ ಕಾರಣನಾದ ದುಷ್ಟ ಅಂತ ಗೊತ್ತಾ ? ಪದ್ಮನಾಭ ಅಂತ ಗೊತ್ತಾ ?

ವ್ಯಕ್ತಿ : ಹಾ, ಆ ದುಷ್ಟನೇ ಇವನು. ಇವನ್ಹತ್ರ ಮಾತಾಡಿದ್ದೇ ಪರಮ ಪಾತಕ, ತಗೋ ನಿನ್ನ ಹಣ, ಥೆ, ಮುಂಚಿ...ಕೈ ತೊಳಕೋ ಬೇಕು.

ಗುಂಪು : ಯಾಕೆ ಬಿಟ್ಟ್ರಿ ಅವನ್ನ–ಪಾತಕಿ. ನಡೀರಿ ಹಿಡ್ಕೊಂಡು.

[ಕೆಲವರು ಅವನನ್ನು ಹಿಡಿದುಕೊಳ್ಳಲು ನುಗ್ಗುವರು]

ಅಗಸ : ಬಿಡಿ ನನ್ನಾ ಬಿಡಿ ನನ್ನಾ...

[ಎಂದು ಬಿಡಿಸಿಕೊಂಡು ಓಡುವ. ಜನ ಅವನ ಹಿಂದೆ ಓಡುವರು. ದೀಪ ಆರುವದು. ಮತ್ತೆ ಬೆಳಕಾದಾಗ ಒಂದು ಕಾಡು. ಅಗಸ ಒಂದು ಮರದ ಬಳಿ ಕುಳಿತಿದ್ದಾನೆ. ಅದೇ ದಾರಿಯಲ್ಲಿ ಶಾಸ್ತ್ರಿಗಳೊಬ್ಬರು ಮಂತ್ರ ಹೇಳಿಕೊಂಡು ಬರುವರು.]

ಅಗಸ : ಈ ಸ್ಥಳವೇ ಎಷ್ಟು ಹಿತವಾಗಿದೆ.

ಶಾಸ್ತ್ರಿ : [ಮಂತ್ರ ಹೇಳುತ್ತ ಬಂದು ಈತನನ್ನೇ ಗಮನಿಸಿ] ಅರೆ, ಈ ಕಾಡಿನಲ್ಲೇಕೆ ಕುಳಿತಿದ್ದಾನೆ ಈತ. ಅಯ್ಯಾ ಈ ಕಾಡಿನಲ್ಲಿ ಒಬ್ಬನೇ ಏಕೆ ಕುಳಿತಿರುವೆ ?

ಅಗಸ : [ಬೆಪ್ಪಾಗಿ] ನಾನು ವಾಸ ಇರುವುದೇ ಇಲ್ಲಿ ಸ್ವಾಮಿ.

ಶಾಸ್ತ್ರಿ : ಏನು ಮಾತು ಹೇಳುತ್ತಿದ್ದೀ. ನಿನಗೆ ಒಂದೂರು ಇಲ್ಲವೇ ?

ಅಗಸ : ಊರು ಕೇರಿ–ತೊರೆದು ಈ ಕಾಡು ಸೇರಿ ಆರು ವರುಷವಾಯಿತು.

ಶಾಸ್ತ್ರಿ : ಏನು ಮಾಡುತ್ತಿರುವೆ ಇಲ್ಲಿ ?

ಅಗಸ : ನಾನು ಮನುಷ್ಯ ಎಂಬುದನ್ನು ಮರೆತು ಪಶುವಾಗಲೆತ್ನಿಸಿದೆ.

ಶಾಸ್ತ್ರಿ : ಹುಚ್ಚು ಮನುಷ್ಯ.

ಅಗಸ : ಹುಚ್ಚಲ್ಲ ದಣಿ. ನನ್ನನ್ನು ಅರ್ಥ ಮಾಡಿಕೊಳ್ಳದ ಜನ ನಿಷ್ಕಾರಣವಾಗಿ ನನ್ನ ವಿರುದ್ಧ ಬಂಡೆದ್ದು ಬದುಕನ್ನು ಅಸಹನೀಯ ಮಾಡಿದರು, ಸಮಾಜದ ಎಲ್ಲ ಏಳಿಗಳೂ ನನ್ನನ್ನು ಭೀತಿಯಿಂದ ತಲ್ಲಣಗೊಳಿಸುವಂತೆ ಮಾಡಿತು. ಮಾಡುವುದೇನು. ಪ್ರೀತಿಯೂ ಅಭಾವವಾದಾಗ ಮನುಷ್ಯ ಒಂಟಿತನವನ್ನು ಪ್ರೀತಿಯಿಂದಲೇ ಬಯಸುತ್ತಾನೆ.

ಶಾಸ್ತ್ರಿ : ಅರ್ಥವಿಲ್ಲದ ಶಬ್ದಗಳು ಮಾನವ ಜಾತಿಯ ಮೇಲೆ ಇಂಥ ದ್ವೇಷ ಸರಿಯಲ್ಲ.

ಅಗಸ : ಯಾರಿಗೂ ಬೇಡವಾದ ವ್ಯಕ್ತಿಯಾದ ಮೇಲೂ ಅವರ ಕಾಲಡಿಯಲ್ಲಿ ಬಾಳಬೇಕೆ ? ಕೃಪಾಕಟಾಕ್ಷದ ಭಿಕ್ಷೆ ಬೇಡ ಬೇಕೆ ?

ಶಾಸ್ತ್ರಿ : ತಮ್ಮ . ನೀನು ನೊಂದ ಜೀವಿ ಎಂಬುದನ್ನು ನಿನ್ನ ಮಾತು ಗಳೇ ಸಾರುತ್ತಿವೆ ಮತ್ತು ಹಳೆಯ ನೆನಪುಗಳನ್ನು ಕೆದಕಲಿಕ್ಕೂ ಇದು ಸಮಯವಲ್ಲ, ನಡಿ. ನಿಧಾನವಾಗಿ ಮಾತಾಡೋಣ.

ಅಗಸ : ನಾನೆಲ್ಲಿಗೆ ಬರಲಿ ?

ಶಾಸ್ತ್ರಿ : ಇಲ್ಲಿಗೆ ಕೊಂಚ ದೂರದಲ್ಲಿ ಒಂದು ಆಶ್ರಮವಿದೆ.

ಅಗಸ ; ಆಶ್ರಮದಲ್ಲಿ ನನಗೇನು ಕೆಲಸ ?

ಶಾಸ್ತ್ರಿ : ಅಲ್ಲಿನ ವಾತಾವರಣದಲ್ಲಿ ನಾಲ್ಕು ದಿನ ಇರು ತಮ್ಮ, ವೇದೋಪನಿಷತ್ತುಗಳ ಗಂಗೆ ನಿನ್ನ ಕಿವಿಗಳ ಮೇಲೆ ಹರಿ ಯಲಿ, ಆಗ ಮನಸ್ಸು ತಣಿದೀತು. ಸಮಾಧಾನದ ಬೀಜ ಚಿಗುರುವುದೂ ಸಾಧ್ಯ.

ಅಗಸ : ನನ್ನನ್ನೇಕೆ ಹೀಗೆ ಒತ್ತಾಯ ಮಾಡುತ್ತೀರಿ ?

ಶಾಸ್ತ್ರಿ : ನೋವಿನ ಹೃದಯದ ಕೂಗು ನನಗೆ ಕೇಳುತ್ತದೆ, ಬಾ ನನ್ನೊಡನೆ. ಅಲ್ಲಿ ಋಷಿಗಳ ಪರಿಚಯ ಮಾಡಿಕೊಡುತ್ತೇನೆ.

ಅಗಸ : ನಡೆಯಿರಿ. ವ್ಯಕ್ತಿ ವಿಶ್ವಾಸಕ್ಕೆ ಕಟ್ಟು ಬಿದ್ದಾಗ ಮಾತು ಮೂಕವಾಗುತ್ತದೆ.

[ಇಬ್ಬರೂ ತೆರಳುವರು. ದೀಪ ಕರಗುವುದು. ನಂತರದ ವೇದಘೋಷ ಜೋರಾಗಿ ಕೇಳಿ ಬರುವುದು. ಬೆಳಕು ಮತ್ತೆ ಕಾಣಿಸಿದಾಗ ಆಶ್ರಮದ ವಾತಾವರಣ, ಅಗಸ ನಿರ್ಮಲ ಚಿತ್ತನಾಗಿ ಕೇಳುತ್ತಿದ್ದಾನೆ].

ಅಗಸ : ಎಂಥ ಶಾಂತ ವಾತಾವರಣ. ಮೂರು ವರುಷಗಳಲ್ಲಿ ಎಷ್ಟೊಂದು ಬದಲಾವಣೆ. ಮತ್ತೆ ಆಸೆಗಳ ಮರುಕಳಿಕೆ. ಹೆಂಡತಿಯನ್ನು ಕಾಣುವ ತವಕ. ಹೌದು. ಹೋಗಬೇಕು. ಅಯೋಧ್ಯೆಗೆ ಮರಳಬೇಕು. ನನ್ನ ಮನೆಯನ್ನು ನಾನು ಮತ್ತೆ ಸೇರಲೇಬೇಕು, ಹೇಗಿದ್ದರೂ ಮಹರ್ಷಿಗಳ ಆಶೀರ್ವಾದ ಪಡೆದಿದ್ದೇನೆ.

[ಸಂಭ್ರಮದಿಂದ ಹೊರಡುವ. ದೀಪ ಆರುವುದು; ಮತ್ತೆ ದೀಪ ಬೆಳಗಿದಾಗ ರಂಗದ ಮೇಲೆ ಮುರುಕಲು ಮನೆ. ಹಿನ್ನೆಲೆಯಲ್ಲಿ ದುಃಖ ಸೂಚಕದಾದ ವಾದ್ಯ ಸಂಗೀತ. ಅಗಸ ಮನೆಯ ಮುಂದೆ ತಲೆ ತಗ್ಗಿಸಿ ನಿಂತಿದ್ದಾನೆ.]

ಅಗಸ : ಹೇಗೆ ವಿಧ್ವಸ್ಥವಾಗಿದೆ ನನ್ನ ಮನೆ. ಇದನ್ನು ಮನೆ ಎಂದು ಯಾರು ಹೇಳುತ್ತಾರೆ. ಕೊಟ್ಟಿಗೆ [ನಿಟ್ಟುಸಿರು]

ಗೃಹಸ್ಥ : ಏನು ಸ್ವಾಮಿ, ಊರಿಗೆ ಹೊಸಬರೇನು ನೀವು?

ಅಗಸ : ಹೌದು.

ಗೃಹಸ್ಥ : ಹೋಗಿ ಹೋಗಿ ಆದೇನು ಇಲ್ಲಿ ನಿಂತಿದ್ದೀರ ?

ಅಗಸ : ಹ್ಞಾ. ಈ ಮನೆಯನ್ನು ನೋಡುತ್ತಿದ್ದೆ. ಹೇಗೆ ವಿಧ್ವಸ್ಥವಾಗಿದೆ. ಸ್ವಾಮಿ. ಈ ವೈಭವದ ನಗರಿಯಲ್ಲಿ ಈ ಅವಕಳೆ ಹೇಗೆ ?

ಗೃಹಸ್ಥ : ಅಂಥ ಮೇಲೆ ನೀವು ಈ ಊರಿನವರಲ್ಲ ಎಂಬುದು ಖಚಿತ ವಾಯಿತು. ಗೊತ್ತಿಲ್ಲವೇನು ನಿಮಗೆ. ಇಲ್ಲಿ ಆ ಅಗಸ ಇರುತ್ತಿದ್ದ. ಸೀತಾದೇವಿಯನ್ನು ವನಕ್ಕೆ ಕಳಿಸಿದ ಧೂರ್ತ. ಅವನಂತೂ ಓಡಿ ಹೋದ ಎನ್ನಿ.

ಅಗಸ : ಅನಂತರ ಯಾರಿದ್ದರೂ ಈ ಮನೆಯಲ್ಲಿ ?

ಗೃಹಸ್ಥ : ಅವನಿದ್ದ ಮನೆಯಲ್ಲಿ ಯಾರಿರುತ್ತಾರೆ ಹೇಳಿ ? ಈ ಮನೆಗ ಬರಲು ಯಾರೂ ಸಿದ್ಧರಿರಲಿಲ್ಲ.

ಅಗಸ : ಆಯಿತು. ಆತನ ಹೆಂಡತಿ?

ಗೃಹಸ್ಥ : ಅವನು ಹೋದ ಮೇಲೆ ಅವಳೆಲ್ಲಿರುತ್ತಾಳೆ ? ಬಲ್ಲವರು ಹೇಳಿ ನೋಡಿದರು ಕೇಳಬೇಕಲ್ಲ. ಒಂದು ತುತ್ತೂ ಉಣ ಲಿಲ್ಲ, ಒಂದು ಹನಿ ನೀರೂ ಕುಡಿಯಲಿಲ್ಲ.

ಅಗಸ : ಹೌದೇನು ?

ಗೃಹಸ್ಥ : ಕದಮುಚ್ಚಿ ಒಳಗೆ ಹುಚ್ಚಿಯಂತೆ ಕುಳಿತಿರುತ್ತಿದ್ದಳು.

ಅಗಸ : ಹುಚ್ಚು ಹಿಡಿಯಿತೇನು ಆಕೆಗೆ ?

ಗೃಹಸ್ಥ ; ಇಲ್ಲ. ತೀರಿಕೊಂಡಳು. ಅವಳು ಸತ್ತ ನಂತರ ಕೂಡಾ ಎರಡು ದಿನಗಳವರೆಗೆ ಯಾರಿಗೂ ಗೊತ್ತಾಗಲಿಲ್ಲವಂತೆ. ಕೊನೆಗೆ ಸಿಕ್ಕಿದ್ದು ಕೊಳೆತ ಹೆಣ ಮಾತ್ರ.

ಅಗಸ : [ದುಃಖದಿಂದ] ಅಯ್ಯೋ.

ಗೃಹಸ್ಥ : ಅವನ ಕತೆ ಮಾತ್ರ ಇನ್ನೂ ಗಟ್ಟಿಮುಟ್ಟಾಗಿದೆ ಇನ್ನೊಬ್ಬ ಅಗಸನ ಬಳಿ ಹ...ಹ...ಹ...

[ಎಂದು ಗಹಗಹಿಸಿ ನಗುತ್ತ ತೆರಳುವ. ಅಗಸ ತಲೆಯ ಮೇಲೆ ಕೈಯಿಟ್ಟು ನಿಲ್ಲುವ. ದೀಪ ಆರುವುದು. ಫ್ಲಾಷ್ ಬ್ಯಾಕ್ ಸಹಾ ಇಲ್ಲಿಗೆ ಮುಗಿಯುವುದು. ದೀಪ ಹತ್ತಿದಾಗ ಮತ್ತೆ ಅದೇ ಕಾಡು. ಋಷಿ ಕತೆ ಕೇಳುತ್ತ ಕುಳಿತಿದ್ದಾನೆ: ಅಗಸ ಕತೆ ಹೇಳುತ್ತಿದ್ದಾನೆ].

ಅಗಸ : [ಭಾವ ಪೂರ್ಣವಾಗಿ] ಆ ನಗುವಿನೊಡನೆ ನಾನು ಋಷಿಗಳ ಆಶ್ರಮದಲ್ಲಿ ಕಲಿತ ತಿಳಿವಳಿಕೆಗೆ ದೊರಕಿಸಿಕೊಂಡ ಶಾಂತಿ, ಎಲ್ಲ ಹಳೆಯ ಬಟ್ಟೆಗಳಂತೆ ಕಳಚಿಬಿದ್ದವು. ಅವುಗಳ ಸ್ಥಳ ದಲ್ಲಿ ಉಳಿದಿತ್ತು ವೇದನೆ ಮಾತ್ರ. ಆ ನಗೆಯ ಗಹಿಗಹಿಕೆ ಯಲ್ಲಿ ನನಗೆ ಶ್ರೀರಾಮನ ವೇದನೆಯೂ ಅರ್ಥವಾಯಿತು. ಆದರೆ ಅದರೊಡನೆ ಬಿರುಗಾಳಿಯಲ್ಲಿ ಸಿಲುಕಿದಂತಾಗಿದೆ, ಅಯೋಧ್ಯೆ ಬಿಟ್ಟಾಗ ನನಗೆ ನನ್ನ ಜನತೆಯ ಮೇಲಿನ ದ್ವೇಷದ ಆಧಾರವಿತ್ತು, ಈಗ ನನ್ನಲ್ಲೇ ಉಳಿದಿದೆ. ಆತ್ಮ ತಿರಸ್ಕಾರ, ಅದೇನು ಆಧಾರ ಕೊಡುತ್ತದೆ. ಈಗ ನನಗೂ 14 ವರ್ಷ ವನವಾಸವಾಗಿದೆ.

ಋಷಿ : ಇಲ್ಲಿ ಹೇಗೆ ಬಂದೆ ತಮ್ಮಾ ?

ಅಗಸ : ಮೊನ್ನೆ ಎಲ್ಲೊ ಒಬ್ಬ ಭಿಕ್ಷುಕ ಹೇಳಿದ. ಸೀತಾದೇವಿಯ ಶೋಧವಾಗಿದೆ. ಅವರು ತಮ್ಮ ಇಬ್ಬರು ಮಕ್ಕಳೊಡನೆ ವಾಲ್ಮೀಕಿ ಋಷಿಗಳ ಆಶ್ರಮದಲ್ಲಿದ್ದಾರೆ ಎಂದು. ಆಗ ಒಮ್ಮೆಲೆ ಆಶೆಮೂಡಿತು, ಸೀತಾದೇವಿಯನ್ನು ಕಂಡು ಕ್ಷಮೆ ಕೋರಬೇಕೆಂದು ಓಡಿ ಬಂದೆ ಇಲ್ಲಿಗೆ [ನಕ್ಕು] ಇಲ್ಲಿ ಬಂದರೆ ಅವರು ಅಯೋಧ್ಯೆ ಸೇರಿದ್ದಾರೆ ಎಂದಿರಿ ನೀವು.... ಹೋಗಲಿ. ಚಿಂತೆಯಿಲ್ಲ ರಾಮ ಸೀತೆ ಕೂಡಿದ್ದಾರೆ. ಅದೇ ಆನಂದ, ನಮಸ್ಕಾರ ಸ್ವಾಮಿ. ನಿಮಗೆ ಬೇಸರ ತರಿಸಿರ ಬೇಕು. ಬರುತ್ತೇನೆ. ನಾನು ಅಯೋಧ್ಯೆಗೆ ಹೋಗಬೇಕು ಅಲ್ಲಿ ಸ್ವರ್ಣ ಸೀತೆ ಕರಗುವುದನ್ನು ನೋಡಬೇಕು.

ಋಷಿ : ಬೇಡ ಪದ್ಮನಾಭ–ಅಯೋಧ್ಯೆಗೆ ಹೋಗಬೇಡ.

ಅಗಸ : [ಆಶ್ಚರ್ಯ] ಏಕೆ ಸ್ವಾಮಿ ?

ಋಷಿ : [ಮೆಲ್ಲನೆ] ಸೀತೆ ಅಲ್ಲಿಲ್ಲ.

ಅಗಸ : [ನಡುಗುತ್ತ] ಎಲ್ಲಿದ್ದಾರವರು ಹಾಗಾದರೆ ?

ಋಷಿ ; ಅವಳು ಅವಳು ಮಣ್ಣುಗೂಡಿದ್ದಾಳೆ.

ಅಗಸ : ಗುರುಗಳೇ, ಇದೇನು ಅಭದ್ಧ.

ಋಷಿ : ಶ್ರೀ ರಾಮ ಸೀತೆಯನ್ನು ಕಂಡಾಗ ಅವಳ ಕ್ಷಮೆ ಬೇಡಿದ. ತನ್ನ ತಪ್ಪಾಯಿತು. ಅಯೋಧ್ಯೆಗೆ ಬಾ ಎಂದು ಕರೆದ. ಆದರೆ ಸೀತೆ ಹೋಗಲಿಲ್ಲ.

ಅಗಸ : ಏಕೆ. ಏಕೆ ಹೋಗಲಿಲ್ಲ.

ಋಷಿ : ಅವಳು ಕೇವಲ ಚೀರಿದಳು. "ಭೂಮಿತಾಯಿ ನೀನೇ ನನ್ನನ್ನು ಒಡಲಿನಲ್ಲಿ ತೆಗೆದುಕೊಳ್ಳಬೇಕು" ಎಂದು ಪ್ರಾರ್ಥಿಸಿದಳು. ಅವಳ ಆಕ್ರಂದನಕ್ಕೆ ಕಿವಿಗೊಟ್ಟಂತೆ ಅವಳು ನಿಂತಲ್ಲಿಯೇ ಭೂಮಿ ಒಡೆಯಿತು. ಆ ಬಿರುಕಿನಲ್ಲಿ ಕಾಣೆಯಾದಳು ಸೀತೆ.

ಅಗಸ : ಏಕೆ, ಏಕೆ ಗುರುಗಳೇ ಏಕೆ ? ಸೀತಾದೇವಿ ಹೀಗೇಕೆ ವಿನಾಶವನ್ನು ಕೇಳಬೇಕು ? ಅವಳೇನಾದರೂ ಅಂದಿರ ಬೇಕಲ್ಲವೇ ? ಅಯೋಧ್ಯೆಗೆ ಬಂದಿರುವುದಕ್ಕೆ ಕಾರಣ ಕೊಟ್ಟಿರಬೇಕಲ್ಲವೆ ? ಏಕೆ ಸುಮ್ಮನಿರುವಿರಿ ? ನೀವು ಸುಳ್ಳಾಡಬಾರದು. ಸುಳ್ಳಾಡಬಾರದು, ಸುಳ್ಳಾಡಲಾರಿರಿ. ನನಗೆ ನೀವು ಹೇಳಲೇ ಬೇಕು. ಸೀತಾದೇವಿ ಏನೆಂದಳೆಂದು ನೀವು ಹೇಳಲೇಬೇಕು.

ಋಷಿ : ಒಮ್ಮೆ ಒಬ್ಬ ನಿಷ್ಪಾಪಿಯನ್ನು ನಿಷ್ಕಾರಣವಾಗಿ ಶಪಿಸಿದೆ ನಾನು, ಈಗಲಾದರೂ ಕರುಣೆ ತೋರಿಸಲು ಅಸ್ಪದಕೊಡು ಪದ್ಮನಾಭ.

ಅಗಸ : [ಒತ್ತಾಯದ ಧ್ವನಿಯಲ್ಲಿ] ಇಲ್ಲ ಸ್ವಾಮಿ. ನೀವು ನನಗೆ ಹೇಳಲೇ ಬೇಕು.

ಋಷಿ : ಶ್ರೀ ರಾಮನ ಮಾತು ಕೇಳಿ ಸೀತೆ ಅಂದಳು: ಇಲ್ಲ ಇಲ್ಲ ಆರ್ಯಪುತ್ರ, ನಾನು ಅಯೋಧ್ಯೆಗೆ ಬರುವುದಾದರೂ

ಹೇಗೆ ? ಯಾವ ಅಗಸನಿಂದಲೂ ತೊಳೆಯಲಾಗದ ಕಳಂಕಿಯಲ್ಲವೆ ನಾನು ?

ಅಗಸ : ಓ ದೇವರೆ, ದೇವರೆ.

ಋಷಿ : ನೊಂದುಕೊಳ್ಳಬೇಡ ತಮ್ಮಾ. ಸೀತೆ ಅದನ್ನು ಕೋಪದಿಂದ ಎನ್ನಲಿಲ್ಲ.

ಅಗಸ : ಈಗ ನನಗೇನು ಗತಿ? ನನಗೆ ಬಿಡುಗಡೆಯೇ ಇಲ್ಲವೆ ?

ಋಷಿ : ನಾನೇನು ಹೇಳುವುದು ನಿನಗೆ. ಬೇಕಾದರೆ ನನ್ನೊಡನೆ ಬಾ. ನನ್ನ ಆಶ್ರಮ ಸಮೀಪದಲ್ಲಿಯೇ ಇದೆ.

ಅಗಸ : ನಿಮ್ಮ ಆಶ್ರಮ ಅಂದರೆ ನೀವು...ನೀವು...

ಋಷಿ : ಹೌದು. ನಾನು ವಾಲ್ಮೀಕಿ—

ಅಗಸ : [ಅತ್ಯಾಶ್ಚರ್ಯ] ವಾಲ್ಮೀಕಿ, ವಾಲ್ಮೀಕಿ ಮಹರ್ಷಿಗಳೆ.

ಋಷಿ : ಬರುತ್ತೀಯೇನು ನನ್ನ ಆಶ್ರಮಕ್ಕೆ. ಅಲ್ಲಿ ನಾನು ನನ್ನ ಒರಟು ಶಿಷ್ಯರು ದಟ್ಟಡವಿಯ ನಡುವೆ ಪುರುಕಲು ಗುಡಿಸಲು, ಅಲ್ಲಿ ಶಾಂತತೆ ಸಿಕ್ಕುತ್ತದೆ. ಆದರೆ ಶಾಂತಿ ಸಿಕ್ಕೀತೆಂದು ಹೇಗೆ ಹೇಳಲಿ.

ಅಗಸ . : ನೀವೇ ಹೀಗಂದರೇನು ಗುರುಗಳೇ. ನನ್ನಂಥ ಪಾಳಿ ಏನು ಮಾಡಬೇಕು. ನೀನು ಮಹಾ ಕವಿಗಳು. ಸಿದ್ಧ ಪುರುಷರು.

ಋಷಿ : ಇಲ್ಲ ಇಲ್ಲ, ನಾನು ಸಿದ್ಧಪುರುಷನಲ್ಲ. ನನ್ನ ಶೋಧವಿನ್ನೂ ಮುಗಿದಿಲ್ಲ. ಮರಣದ ಮುಂಗುತ್ತಲೆಯಲ್ಲೊ–ಹುಡುಕುತ್ತಿದ್ದೇನೆ.

ಅಗಸ : [ಆಶ್ಚರ್ಯ] ನೀನು ಏನನ್ನು ಹುಡುಕುತ್ತಿದ್ದಿರಿ ?

ಋಷಿ : ನೀನು ಹುಡುಕುತ್ತಿರುವುದನ್ನೇ ಪದ್ಮನಾಭ ಹೋಳಾಗಿ ಬಿದ್ದ ಜೀವವನ್ನು ಒಂದುಗೂಡಿಸುವ ಬಗೆಯನ್ನು ಹುಡುಕುತ್ತಿದ್ದೇನೆ. ನಾನು ಕವಿ ನಿಜ, ಆದರೆ ಕಾವ್ಯದ ಉಗಮ

ವಾಯಿತು. ಕಳವಳದಲ್ಲಿ ಶಾಪದ ರೂಪದಲ್ಲಿ, ಬೇಡನೊಬ್ಬನ ಪಕ್ಷಿಯೊಂದು ಸಾಯುತ್ತಿರುವಾಗ, ಅದರ ಜೋಡಿ ಹಕ್ಕಿಯ ವಿರಹದ ಆಕ್ರಂದನಕ್ಕೆ ವಾಚೆ ಒಡೆಯಿತು ನನಗೆ. ಅದಕ್ಕೆಂದೆ ಈ ವಿಯೋಗವನ್ನು ಮರೆಯಲಿಕ್ಕೆ ನನ್ನ ಕಾವ್ಯ ಏಕಭಾವವನ್ನರಹಿಕೊಂಡು ಹೋಯಿತು. ಐಕ್ಯದ ಅರಿವಿಗಾಗಿ ದೇವರ ಅವತಾರವನ್ನು ಬಿಟ್ಟು ಯಾರನ್ನು ಮರೆಹೋಗುವದು. ಅದಕ್ಕೆ ರಾಮಾಯಣ ಬರೆದೆ. ಆದರೆ ಬರೆಯುತ್ತ ಹೋದಂತೆಲ್ಲ ನನ್ನ ಶಬ್ದಗಳಲ್ಲಿ ಮೂಡಿದ್ದು ವಿರಹ ಮಾತ್ರ. ತಂದೆ-ತಾಯಿಂದ ದೂರವಾಗಿ ತೀರಿಕೊಂಡ ಶ್ರವಣ. ರಾಮನಿಂದ ದೂರವಿರಲಾರದೇ ತೀರಿಕೊಂಡ ದಶರಥ, ಲಕ್ಷ್ಮಣನಿಂದ ದೂರವಾದ ಊರ್ಮಿಳೆ, ಭರತನನ್ನು ಕಳಕೊಂಡ ಕೈಕೇಯಿ-ಇವೆಲ್ಲದರ ನಡುವೆ ರಾಮ-ಸೀತೆ ಏಕಭಾವದ ಶೋಧವಾಗಿ ಜನಿಸಿದ ನನ್ನ ರಾಮಾಯಣ ವಿಯೋಗದ ಬಣ್ಣನೆಯಾಯಿತು. ವಿರಹತಾಪದ ಬಣ್ಣನೆಯಾಯಿತು. ಆದರೂ ನಾನು ಆಸೆ ಬಿಡಲಿಲ್ಲ, ಒಂದಿಲ್ಲೊಂದು ದಿನ ರಾಮ-ಸೀತೆ ಒಂದಾಗಲೇ ಬೇಕು. ನನ್ನ ಕಾವ್ಯದಲ್ಲಿ ಸುಯೋಗ ಮೂಡಲೇ ಬೇಕು ಎಂಬ ಆಸೆ ಇತ್ತು ನನಗೆ. ಕೊನೆಗೆ ರಾಮ-ಸೀತೆ ಒಂದಾದರೂ ಆದರೆ.... ಆದರೆ....

ಅಗಸ : [ತಕ್ಷಣ] ಆದರೆ ನಾನು ಬರಿದೆ ಹರಿತವಾದ ಮಾತುಗಳನ್ನು ಎಸೆದೆ. ಅವರ ಜೋಡಿಯನ್ನು ಮುರಿದೆ.

ಋಷಿ : ಆ ತಪ್ಪು ನಿನ್ನದಲ್ಲ. ಭರತನೆಂದದ್ದು ನಿಜ. ಈಗ ಹಿಂತಿರುಗಿ ನೋಡಿದಾಗ ರಾಮ-ಸೀತೆಯರ ಅಗಲಿಕೆ ಅನಿವಾರ್ಯವಿದ್ದೀತು ಎನಿಸುತ್ತದೆ. ಇಂದಿನವರೆಗೆ ನನ್ನನ್ನು ಪೀಡಿಸುತ್ತಾ ಬಂದ ಕ್ರೌಂಚ ಪಕ್ಷಿಯ ಕೂಗು ಇಷ್ಟು ಸುಲಭವಾಗಿ ಮೂಕವಾಗುವುದು ಅಶಕ್ಯ ಎಂದೆನಿಸುತ್ತದೆ. ಈಗ ಸೀತೆ ಮಣ್ಣಾಗಿದ್ದಾಳೆ. ರಾಮ ದಿಗ್ಭ್ರಾಂತನಾಗಿ

ಕಲ್ಲಾಗಿದ್ದಾನೆ. ನನ್ನ ಬಳಿ ಉಳಿದಿದೆ,....ನಾನು........ ಆ ನಿಷಾದನಿಗಿತ್ತ ಶಾಪ ಮಾತ್ರ ಶಾಪ ಮಾತ್ರ.

ಅಗಸ : [ದುಗುಡದಿಂದ] ಇನ್ನು ಮುಂದೇನು ಸ್ವಾಮಿ. ಇನ್ನು ಮುಂದೇನು ? ರಾಮಾಯಣ ಹೀಗೆಯೇ ಕೊನೆಗೊಳ್ಳ ಬೇಕೆ ?

[ಎನ್ನುತ್ತಿದ್ದಾಗ ದೀಪ ಆರುವುದು]

ತೆರೆ

ಪಾತ್ರಗಳು

ಶ್ರೋತೃ
ಇನ್ನೊಬ್ಬ
ಮೇಳ
ಗುರು
ಶಿಷ್ಯ
ಗೌಡತಿ (ಸಿದ್ದವ್ವ)
ಗೌಡ
ಸಣ್ಣಮಲ್ಲ
ಸಣ್ಣಜ್ಜ
ಬೈರಜ್ಜ
ಸಿದ್ದೇಗೌಡ
ಜನ

# 1

ಚೌಡಿಕೆಯವರು ಶೃತಿ ಮಾಡಿಕೊಳ್ಳುತ್ತಿದ್ದಾರೆ.
ಸಭೆಯಲ್ಲಿ ಗುಜು ಗುಜು ಸದ್ದು.

ಶ್ರೋತೃ : ಕತೆ ಸುರು ಮಾಡಪ್ಪೊ ಹೊತ್ತಾತು [ಚೌಡಿಕೆ ದನಿ]

ಇನ್ನೊಬ್ಬ : ಯಾರ್‍ಲ್ಲ ಅವನು : ಅವಸರ ಮಾಡೋನು ? ಸ್ರುತಿ ಮಾಡಿ-ಕೊಂತವ್ರೆ [ಚೌಡಿಕೆಯ ದನಿ-ಗೆಜ್ಜೆ ದನಿ]

ಮೇಳ : ದೇವಾ ಹರನೇ......
ಕಾವೀಯ ಜೋತಾರ ತಂದನ್ನ ತಾನ
ಕಾಲೀಗೆ ನೇತಾರ—ತಂದನ್ನ ತಾನ
ಬೆಲ್ಲ ಬೇವಿನ ಸೊಪ್ಪು—ತಂದನ್ನ ತಾನ
ಎಲ್ಲಿ ಮಾಡಗಲಿ ಶಿವನೆ – ತಂದನ್ನ ತಾನ
ವಲ್ಲೀಯು ಹೊದಿಸೇನ—ತಂದನ್ನ ತಾನ
ಮಲ್ಲೀಗೆ ಮುಡಿಸೇನ—ತಂದನ್ನ ತಾನ
ಕಾಣಿಕೆ ಇಟ್ಟೇನ—ತಂದನ್ನ ತಾನ
ಕೈಯ ನಾ ಮುಗಿದೇನ—ತಂದನ್ನ ತಾನ
ದೇವಾ ಹರನೇ......

ಗುರು : ಕನ್ಸನಲ್ಲಿ ಕಂಡವನ ; ಮನ್ಸನಲ್ಲಿ ಬೇಕಾದವನ....

ಶಿಷ್ಯ : ಆಹಾ,

ಗುರು : ತುಳಸೀ ದಂಡೆ ವನದಾಗಿರುವಂತಹ

ಶಿಷ್ಯ : ಆಹಾ,

ಗುರು : ಮನಸಿಚಾರಿ ಶಂಭುಲಿಂಗನನ್ನು ನಿಜರೂಪದಲ್ಲಿ ಕಂಡು ಕೈ ಮುಗಿದೇ....

ಶಿಷ್ಯ : ಅತ್ತೀಯ ಹಣ್ಣು ನೂರು—ಹರ ನನ್ನ ಮಹದೇವ
ಅತ್ತೀಯ ಕಾಯಿ ನೂರು—ಹರ ನನ್ನ ಮಹದೇವ
ಶಂಭೊ ನುಡಿ ನೂರು—ಹರ ನನ್ನ ಮಹದೇವ
ಪಾದದ ಮ್ಯಾಲ ಪದ ನೂರು–ಹರ ನನ್ನ ಮಹದೇವ
ಮೊದಲಾಗಿ ನೆನದೇನು—ಹರ ನನ್ನ ಮಹದೇವ
ದೇವ ಮಲ್ಲಯ್ಯನ—ಹರ ನನ್ನ ಮಹದೇವ

ಗುರು : ಅಪ್ಪಾ, ಮರಿದೇವರೂ....

ಶಿಷ್ಯ : ಗುರುವೇ.

ಗುರು : ಇವತ್ತು ಯಾವ ಕಥೆ ಮಾಡಲಪ್ಪ ?

ಶಿಷ್ಯ : ಗುರುವೆ ಕಗ್ಗಲ್ಲ ಕಲ್ಗಡಿ, ಮುಗ್ಗಲ್ಲು ಪುಡ್ಗಡಿ, ನೆಗ್ಗಿಲು ಮುಳ್ಳು ನೆರಿನೆರಿ ತುಳ್ಕಂಡು ಎಗ್ಗಿಲ್ದೆ ಹೋಗ್ವಂತ ಈ ನರನ ಬಾಳಿಗೆ ಒಗ್ಸುವಂತ ಒಂದು ಪ್ರಸಂಗ ಹೇಳುವಂಥವ ನಾಗು.

ಗುರು : ಹಂಗಂತೀಯ ಮರಿ....

ಶಿಷ್ಯ : ಹೌದು ಗುರುವೇ, ಇದು ಕಲಿ ಮಾಪುರುಷನ ಕಾಲ.

ಗುರು : ಹೌದೋ,

ಶಿಷ್ಯ : ನರಮಾನ್ಯವರು ಬಲು ಕೆಟ್ಟುಹೋಗಿದ್ದಾರೆ. ಅವರಿಗೆ ಬುದ್ಧಿ ಹೇಳ್ವಂತ ಒಂದು ಕತೆ ಹೇಳ್ಬೇಕೂ ನನ್ನಪ್ಪ.

ಗುರು : ಒಳ್ಳೆ ಮಾತೇ ಹೇಳ್ದೆ ಮರಿ. ನಾವು ನರಮಾನ್ಯವರು.

ಶಿಷ್ಯ : ಆಹಾ....,

ಗುರು : ಇದು ಕಲಿ ಪುರುಷನ ಕಾಲ

ಶಿಷ್ಯ : ಹೌದೋ.

ಗುರು : ತಣ್ಣೀರು ಆರ್ಸಿ, ಬಿಸಿನೀರು ಕಾಯ್ಸಿ ಕುಡಿಯೋ ಕಾಲ. ಆಡೋ ಮಾತು ಬ್ಯಾರೆ, ನಡಿಯೋ ನಡಿಗೆ ಬ್ಯಾರೆ, ಅದಕ್ಕೆ....

ಶಿಷ್ಯ : ಆಹಾ

ಗುರು : ಮಾತು ಆಡಿದ್ರೋತು, ಮುತ್ತು ಒಡೆದ್ರೋತು ಅಂತ, ಕೊಟ್ಟ ಮಾತಿನ ಕತೆ ಹೇಳ್ತೀನಿ ಕೇಳ್ತಿಯಾ ತಮ್ಮ ?

ಶಿಷ್ಯ : ಆಗಬಹುದು ದ್ಯಾವರೇ.

ಮೇಳ : ಒಂದಾನೊಂದೂರಾಗೆ—ತಂದನ್ನ ತಾನ
ಗಂಡ ಹೆಂಡತಿಯುರು—ತಂದನ್ನ ತಾನ
ಗೌಡ–ಗೌಡತಿಯುರು—ತಂದನ್ನ ತಾನ
ಮದುವ್ಯಾಗಿ ಬಾಳ ದಿನ—ತಂದನ್ನ ತಾನ
ಮಕ್ಕಳಾಗಲಿಲ್ಲ—ತಂದನ್ನ ತಾನ
ದುಃಖಾವ ಮಾಡುತಾರೆ—ತಂದನ್ನ ತಾನ
ಹರಕೆಯ ಹೊರುತಾರೆ—ತಂಡನ್ನ ತಾನ

ಶಿಷ್ಯ : ಆ ಗೌಡನ ಹೆಸರು ?

ಗುರು : ಮುದ್ದೇಗೌಡಾಂತ.

ಶಿಷ್ಯ : ಗೌಡತಿ ?

ಗುರು : ಸಿದ್ದವ್ವ ಅಂತ

ಶಿಷ್ಯ : ಆಹಾ...

ಗುರು : ಬಾಳ ದಿನದಿಂದ ಆ ದಂಪತಿಗಳಿಗೆ ಮಕ್ಕಳಿಲ್ಲ. ಮುಂದೇವ್ರಿಗೆ ಹರಕೆ ಹೊತ್ತರು.

ಶಿಷ್ಯ : ಆಹಾ.

ಗುರು : ಹುತ್ತಕ್ಕೆ ಹಾಲೆರೆದರು.

ಶಿಷ್ಯ : ಹೌದಲ್ಲವೆ ?

ಮೇಳ : ಬಾಳ ದಿನ ಆದಮ್ಯಾಲೆ ದ್ಯಾವರು ಕಣ್ಣ ತಗದಾನ
ದ್ಯಾವರು ಕಣ್ಣ ತೆಗೆದಾನ
ಸಿದ್ದವ್ವ ಗರ್ಭಿಣಿ—ತಂದನ್ನ ತಾನ

ಗಂಡ ಹೆಂಡತಿಯರು ಹಿರಿಹಿರಿ ಹಿಗ್ಯಾರು
ಹಿರಿ ಹಿರಿ ಹಿಗ್ಯಾರು
ದೇವರಿಗೆ ಕೈ ಮುಗಿದೂ—ತಂದನ್ನ ತಾನ

ಗುರು : ಅಪ್ಪಾ ಮರಿದೇವರು.

ಶಿಷ್ಯ : ಸ್ವಾಮಿ ಗುರುದೇವರು.

ಗುರು : ಮಂದೇವರ ಕರುಣೆಯಿಂದ ಸಿದ್ದವ್ವ ಗರ್ಭಿಣಿಯಾದಳು....

ಶಿಷ್ಯ : ಶಿವ ಶಿವ

ಗುರು : ಕಾದ ನೆಲದ ಮ್ಯಾಲೆ ಮಳೆ ಬಂದ ಹಾಗೆ–ಆ ದಂಪತಿಗಳ ದುಃಖವೆಲ್ಲ ದೂರವಾಯ್ತು.

ಶಿಷ್ಯ : ಆ ಮ್ಯಾಲೇ.

ಗುರು : ಒಂದು ದಿನ ಗಂಡ-ಹೆಂಡಿರಿಬ್ಬರೂ, ಉಂಡು ಅಡಕಿಲೆ ಹಾಕ್ಕೊಂಡು....

## 2

[ಸಿದ್ದವ್ವ–ಮುದ್ದೇಗೌಡ ಮನೆಯಲ್ಲಿ ಮಾತ ನಾಡುತ್ತಿದ್ದಾರೆ]

ಗೌಡತಿ : ನಿನ್ನೊಂದು ಮಾತು ಕೇಳಬೇಕೆಂದಿವ್ನಿ. ಹೂ ಅಂತಿಯಾ ?

ಗೌಡ : ನಿನ್ನ ಮಾತಿಗೆ ನಾನು ಯಾವಾಗ ಇಲ್ಲಾ ಅಂದೀನಿ ? ಒಂದು ಬಿಟ್ಟು ನಾಕು ಹೇಳು. ಹಂಗಿರ್‍ಲಿ, ನಿನ್ನ ಮಾತು ಏನೂಂತ ಕೇಳ್ದಂಗೆ ಹೂಂ ಅನ್ನೋದು ಹೆಂಗಾದಾತು ?

ಗೌಡತಿ : ನೀನು ಹುಂ ಅನ್ನಲಾರದ್ದ ನಾನಿನ್ನೇನು ಕೇಳೇನು ?

ಗೌಡ : ಹಂಗಾದ್ರೆ ಏನ ಕೇಳೀಯಾ ?

ಗೌಡತಿ : ನೀನೇನಂತೀಯೋ ಏನೋ ?

ಗೌಡ : ಏನನ್ನಬೇಕೂ ಅಂತೀಯಾ ?

ಗೌಡತಿ : ಹೂಂ ಅನ್ನಬೇಕು.

ಗೌಡ : ಅದೇನೂಂತ ಹೇಳ್ದೆ—ಅದೆಂಗೆ ಹೂಂ ಅನ್ನೋದು ?

ಗೌಡತಿ : ನಾನೇನಂ ಸೀರೆ—ಒಡವೆ ಕೇಳಲ್ಲ.

ಗೌಡ : ಅಯ, ಅದೇನೂಂತ ಹೇಳ್ಬಾರ್ದ ?

ಗೌಡತಿ : ಹೂಂ ಅಂತೀನೀಂದ್ರೆ ಹೇಳ್ತೀನಿ.

ಗೌಡ : ಇದೊಳ್ಳೆ ಕತೆ ಆಯ್ತಲ್ಲ. ಹೂಂ ಹೇಳು.

ಗೌಡತಿ : ಈಗಲ್ಲ, ನನ್ನ ಮಾತಾದ ಮ್ಯಾಲೆ ಹೂಂ ಅನ್ನಬೇಕು.

ಗೌಡ : ಆಗ್ಲಿ. ಆಮೇಲೂ ಅಂತೀನಿ, ಆಯ್ತಾ ?

ಗೌಡತಿ : ಏನಿಲ್ಲ, ನಂಗೀಗ...

ಗೌಡ : ಅಯ, ಅದೇನ ಪೂರ್ತ ಹೇಳ್ಬಾರ್ದ ?

ಗೌಡತಿ : ನಂಗೀಗ ಮೂರು....

ಗೌಡ : ಇವಳದೊಳ್ಳೆ ಕತೆ ಆಯ್ತಲ್ಲ. ಮೈಲಾರಲಿಂಗನ ಕಾರಣಿಕ ಹೇಳ್ದಂಗೆ. ಹಿಂಗೇಳಿದರೆ ನಂಗೆಂಗೆ ತಿಳಿದಾತು ?

ಗೌಡತಿ : ನಂಗೆ ಮೂರು ತಿಂಗಳು.

ಗೌಡ : ಏನಂದೆ ?

ಗೌಡತಿ : ಮೂರು ತಿಂಗಳು ತುಂಬಿತೂ ಅಂದೆ.

ಗೌಡ : ಹೌದಲೆ ನನ್ನ ಸಿದ್ದಿ, ಅಂಗನ್ನು ಮತ್ತೆ. ಅದಕ್ಕೇ ನಿನ್ನ ಮಕದ ಮ್ಯಾಗೆ ಬೆಳ್ಳಿ ಚಿಕ್ಕೆ ಬೆಳಗಾದು, ಸಿದ್ದೀ, ನೀ ಎಂಗೆ ಕಾಣಿಸ್ತೀಯಾಂತ.

ಗೌಡತಿ : ತಕ್ಕಳ್ಳಿ, ನಾನೇನೋ ಕೇಳಾನ ಅಂತಂದ್ರೆ ನೀನು ಅಂತರಗಟ್ಟೆ ಅಸಾದಿ ಮಾರಮ್ಮನ ಒಗಲ್ದಂಗೆ ಒಗಳಾಕೆ ನಿಂತೆ.

ಗೌಡ : ಒಗಳಬ್ಯಾಡ್ವ ಮತ್ತೆ. ನಿನ್ನ ಬಾಯಾಗೆ ಇಂತ ಮಾತು ಕೇಳ್ಬೇಕೂಂತ ಏಸ್ ದಿನದಿಂದ ಕಾದಿದ್ದೆ. ಅಂತೂ, ನಮ್ಮಪ್ಪ ದ್ಯಾವರು ದೊಡ್ಡವನು. ಕಣ್ತಗದ. ನೋಡು, ಎಲ್ಲಾರ ಗಂಡ್ಮಗ ಆದ್ರೆ.

ಗೌಡತಿ : ಆಯ ಸುಮ್ಕಿರು. ಹೊಟ್ಯಾಗಲ ಕೂಸು ಹೊಟ್ಯಾಗಿದ್ದಂಗೆ ಹೆಸರು ಕರೆಯಾಕೆ. ಅಡಂಗಿರ್ಲಿ, ಹೊತಾರೆ ತ್ವಾಟಕ್ಕೆ ನಾನೇ ಉಣ್ಣಾಕೆ ತರಾವ ಅಂತ.

ಗೌಡ : ಎಲ್ಲಾರ ಉಂಟಾ ? ಮೂರು ತಿಂಗಳೂ ಅಂತೀ, ಹಂಗೆಲ್ಲಾ ಅಡ್ಡಾಡಾದುಂಟಾ ? ಅದರಾಗೆ ನಮ್ಮ ತ್ವಾಟಕ್ಕೋಗಾದು ಸುಮ್ಕೆ ಆಗ್ತೈತಾ ? ಗ್ಯಾರಮುರಡಿ ದಿಬ್ಬಾ ಹತ್ತಿ ಇಳೀ ಬೇಕು. ಏಯ್ ಶೆಗಿ. ಮನೆಯಾಗ್ ಏನು ಆಳು ಕಾಳು ಇಲ್ವ ?

ಗೌಡತಿ : ಹಂಗಲ್ಲ. ಮನ್ಯಾಗೇ ಕುಂತು ಬ್ಯಾಸರ ಆಗೈತೆ–ತ್ವಾಟ ದಾಗೆ ಆಡ್ಡಾಡಿ ಒರಾಂವ ಅಂತ. ಆದ್ಯಾಕೋ ನಮ್ಮ ತ್ವಾಟದ ಗಿಣಿಮಾವಿನಕಾಯಿ ತಿನ್ನಂಗಾಗೈತೆ.

ಗೌಡ : ಹೂಂ ಅಂಗೆ ಮಾಡು. ನಿಂಗೆ ಈಟೊಂದು ಆಸೆ ಇರೋ ವಾಗ ನಾನ್ಯಾಕೆ ಬ್ಯಾಡ ಅನ್ಲಿ. ನಾನು ಹೊತ್ತುಟ್ಟಕೆ ಮೊದಲು ಹೋಗಿರ್ತೀನಿ. ನೀನು ಮೂರಾಳ್ದುದ ಹೊತ್ತಿಗೆ ಹಿಟ್ಟು ತಕ್ಕಂಬಾ.

ಮೇಳ : ಹಂಗಂದ ಮಾತೀಗೆ—ಕಲ್ಯಾಣದಯ್ಯಾ
ಮೂರು ತಿಂಗಳ ಬಸುರಿ— ಕಲ್ಯಾಣದಯ್ಯಾ
ಸಿದ್ದವ್ವ ಹಿಗ್ಯಾಳೇ—ಕಲ್ಯಾಣದಯ್ಯಾ
ಮುಂಜಾನೆ ಎದ್ದಾಳೆ—ಕಲ್ಯಾಣದಯ್ಯಾ
ಗಡಗಡ ಅಡಿಗೇಯು—ಶಿವ ಶಂಬು ಮಹದೇವ
ಸಡಗರದಿ ಮಾಡ್ಯಾಳು—ಶಿವ ಶಂಭು ಮಹದೇವ
ರಾಗಿ ಮುದ್ದೆಯು ಮಾಡಿ—ಶಿವ ಶಂಭು ಮಹದೇವ
ಬ್ಯಾಗ ಅಂಬ್ರುವ ಕಾಸಿ —ಶಿವ ಶಂಭು ಮಹದೇವ

ಗುರು : ತಮ್ಮ

ಶಿಷ್ಯ : ಗುರುವೇ....

ಗುರು : ಸಿದ್ದವ್ವ ಹೊತ್ತಾರೆ ಹೊತ್ತಿಗೆ ಮುಂಚೆ ಎದ್ದು ಹಿಟ್ಟು ಮಾಡಿ ತಟ್ಟಿಲಿ ತುಂಬಿ ತ್ವಾಟಕ್ಕೆ ಹೊರಟಾಳೇ ?

## 3

[ಏತದ ಸದ್ದು—ನೀರು ಸುರಿಯುವ ಸದ್ದು. ಆಳು ಸಣ್ಣಮಲ್ಲ ಹಾಡಿಕೊಂಡು ಏತ ಎತ್ತುತ್ತಿದ್ದಾನೆ.]

ಸಣ್ಣಮಲ್ಲ : ದಂಡೀನ ದಾರ್‍ಯಾಗೆ ಗೊಂಡೇವ ಮಾರೋಳೆ
ಕೊಂಡು ಕೊಂಡೇನು ಬೆಲೆ ಹೇಳೆ
ಕೊಂಡು ಕೊಂಡೇನು ಬೆಲೆ ಹೇಳೆ ಎಲೆ ಹುಡುಗಿ
ತಂದುಕೊಂಡೇನು ತೆರಹೇಳೆ
ಆಚೆ ಕೇರಿಯುವಳೆ ಕಾಚಕ್ಕಿ ನೆರೆಯುವಳೆ
ಕಾಕ್ಹಾಕಿ ನನ್ನ ಕರೆಯೋಳೆ—ಎಲೆ ಹೆಣ್ಣೆ
ಪ್ರೀತಿ ಬಿತ್ತಲ್ಲ ನಿನ ಮ್ಯಾಲೆ

ಗೌಡ : ಲೇ ಸಣ್ಣಮಲ್ಲಾ

ಸಣ್ಣಮಲ್ಲ : [ತನ್ನಷ್ಟಕ್ಕೆ ತಾನು ಹಾಡುತ್ತಿರುತ್ತಾನೆ]
ನಡುವಿಗೆ ಒಡ್ಯಾಣ ಬೆಡಗಿನ ಚಿನ್ನದ ಗೊಂಡೆ
ನಡುಬೀದಿಯೊಳಗೆ ನಲಿಯೋಳ
ನಡುಬೀದಿಯೊಳಗೆ ನಲಿಯೋಳ—ಎಲೆ ಹೆಣ್ಣೆ
ಬೆಡಗ ನೋಡಿ ನಾನು ಬೆರಗಾದೆ

ಗೌಡ : ಲೇ ಸಾಕು ನಿಲ್ಸಲಾ. ನಿನ್ನ ಪದಕೊಟು ಬೆಂಕಿ ಬಿತ್ತು. [ಹಾಡು ನಿಲ್ಲುವದು] ನಂಗೆ ಹೊಟ್ಟೆ ಹಸಿದು ತಾಳ ಹಾಕೈತೆ,

ಇವನು ರಾಗ ತಗದು ಕೂಗಾಡ್ತವನೆ. ನೋಡಲಾ, ಹಂಗೆ ವಸಿ ಬೇಲಿಗಂಟ ಹೋಗಿ ಹಿಟ್ಟು ತರ್ರ್ತೀನಿ ಅಂದವಳು ಈಟೊತ್ತಾದರೂ ಬರ್ನಿಲ್ಲ.

ಸಣ್ಣಮಲ್ಲ : ಬರ್ತಾರೆ ಬಿಡ್ರಪ್ಪ, ಹಂಗೆಲ್ಲ ತಡಾಮಾಡೋರಲ್ಲ ಅವರು,

ಗೌಡತಿ : [ಪ್ರವೇಶಿಸಿ] ಬರ್ದಿದ್ದರೆ ಬಿಡಬೇಕಲ್ಲಪ್ಪ ನಿಮ್ಮ ಗೌಡ್ರು. ಮೊದಲೇ ಈರಭದ್ರನ ಅವತಾರ.

ಗೌಡ : ಸಾಕು ಸಾಕು, ಮೊದ್ಲು ಉಣ್ಣಾಕಿಕ್ಕು. ಅಮ್ಯಾಲೆ ಮಾತಾಡುವಂತೆ. ಹೋಗ್ಲಾ ಸಣ್ಣಮಲ್ಲ. ನಾಲ್ಕು ಹಳ್ಳಿಲೆ ಕೊಯ್ಕಂಬಾ. ಹಂಗೆ ಗಿಣಿಮಾವಿನಕಾಯಂತೆ ನೋಡು. ನಿಮ್ಮ ಸಿದ್ದವ್ವನಿಗೆ ಬಯಕೆ.

ಗೌಡತಿ : ಬ್ಯಾಡ ಕಣ ಮಗ. ನಿಮಗೆ ಉಣ್ಣಾಕಿಟ್ಟು ನಾನೇ ಓಗಿ ಕೊಯ್ಕಂಬತ್ತೀನಿ. ಒರೇ ಹಳ್ಳಿಲೆ ತಾ ಸಾಕು

[ಸಿದ್ದಮರಿ ಹರಳೆಲೆ ತರುತ್ತಾನೆ. ಸಿದ್ದವ್ವ ಊಟಕ್ಕಿಡುತ್ತಾಳೆ]

ಮೇಳ : ಸಂಪೀಗೆ ಮರದ ಕೆಳಗೇ—ತಂದನ್ನ ತಾನ
ತಂಪಾದ ನೆರಳಾಗೆ—ತಂದನ್ನ ತಾನ
ಗೌಡನಿಗೆ ಉಣ್ಣಾಕಿಕ್ಕಿ—ತಂದನ್ನ ತಾನ
ಸಿದ್ದಮರಿಗೆ ಉಣ್ಣಾಕಿಕ್ಕಿ—ತಂದನ್ನ ತಾನ
ಸಿದ್ದವ್ವ ತಾಯಿಯು—ಶಿವ ಶಂಭು ಮಹದೇವ
ಆಡ್ಯಾಡಿ ಬರುತಾಳೆ—ಶಿವ ಶಂಭು ಮಹದೇವ
ಗಿಣಿಮಾವ ಕೊಯ್ದಾಳೆ—ಶಿವ ಶಂಭು ಮಹದೇವ
ಕಾಕಿ ಹಣ್ಣ ಮೆದ್ದಾಳೆ—ಶಿವ ಶಂಭು ಮಹದೇವ

ಶಿಷ್ಯ : ಮತ್ತೇನ ಮಾಡ್ತಾಳಪ್ಪ ?

ಗುರು : ಮನೇಗಂತ ಕಾಯಿಸೊಪ್ಪು ಕೊಯ್ಕಂಡು, ತಟ್ಟೇಲಿ ತುಂಬಿ ಕೊಂಡು, ಗಂಡನಿಗೆ ಹೇಳಿ ಮನೆಕಡೆ ಹೊರಟಾಳೇ....

ಮೇಳ : ಗೌಡರ ಸಿದ್ದವ್ವ—ಕಲ್ಯಾಣದಯ್ಯ
ತಲೆಮ್ಯಾಲೆ ತಟ್ಟಿ ಹೊತ್ತು—ಕಲ್ಯಾಣದಯ್ಯ
ಹೊರಡೂವ ಹೊತ್ತಿಗೆ—ಕಲ್ಯಾಣದಯ್ಯ
ಹೊತ್ತು ನೆತ್ತಿಯ ವ್ಯಾಲೆ—ಕಲ್ಯಾಣದಯ್ಯ

ಗುರು : ತವ್ಮಾ,

ಶಿಷ್ಯ : ಗುರುವೇ,

ಗುರು : ಆ ಉರಿಬಿಸಿಲಾಗೆ ಸಿದ್ದವ್ವ ಬಿರಬಿರನೆ ನಡೀತಾ ಅರ್ಧದಾರಿ ಬಂದವಳೇ.

ಶಿಷ್ಯ : ಆಹಾ,

ಗುರು : ಪಾಪ ಬಿಮ್ಮನಿಸಿ, ಸುಡು ಬಿಸಲು ತಡೀಲಾರದೆ ಬವಳಿ ಬಂದಂಗಾತು,

ಶಿಷ್ಯ : ಆಮ್ಯಾಲೆ ?

ಮೇಳ : ದಾರಿಗುಂಟ ನಡೆದಾಳ ಹರ ನನ್ನ ಮಹದೇವ.
ಗ್ಯಾರಮರಡಿಗೆ ಬಂದು—ಹರ ನನ್ನ ಮಹದೇವ.
ಮೂರು ತಿಂಗಳ ಬಸುರಿ—ಹರ ನನ್ನ ಮಹದೇವ.
ಬಾಯಾರಿದಂಗಾತು—ಹರ ನನ್ನ ಮಹದೇವ.

ಶಿಷ್ಯ : ಆವಾಗ

ಗುರು : ಗ್ಯಾರ ಮರಡಿ ದಿಬ್ಬದ ಹತ್ತಿರಕ್ಕೆ ಬಂದು ಅಲ್ಲಿದ್ದ ಬಂಡೆ ಕಲ್ಲಿನ ನೆರಳಾಗೆ ಒಂದು ಚಣ ಕುಂತು, ಹೋಗಾನ ಅಂತ ಯೋಚ್ನೇ ಮಾಡಿದಳು ಸಿದ್ದವ್ವ.

ಶಿಷ್ಯ : ತಲೆ ವ್ಯಾಲಿನ ಬುಟ್ಟಿ ?

ಗುರು : ಅದನ್ನ ಇಳಿಸಾಕೆ ಯಾರಾದ್ರೂ ಅದಾರೋ ಅಂತ ಸುತ್ತ ಮುತ್ತ ನೋಡತಾಳೆ.

ಶಿಷ್ಯ : ಯಾರೂ ಇದ್ದಿಲ್ಲ.

ಗುರು : ಇಲ್ಲ. ಅಲ್ಲೇ ಆಸಾದಿ ಸಣ್ಣಜ್ಜ ಕುಂತಿದ್ದ...

4

ಸಿದ್ದವ್ವ : ಓಯ್ ಸಣ್ಣಜ್ಜ, ಒಸಿ ಈ ತಟ್ಟಿ ಇಳಿಸೀಯು ?

ಸಣ್ಣಜ್ಜ : ಅವ್ವಾ, ಒಂದೇ [ತಟ್ಟಿ ಇಳಿಸುತ್ತಾ] ಇಂತ ಉರಿಬಿಸಿಲಾಗೆ ನೀವ್ಯಾಕ್ರವ್ವ ತ್ವಾಟಕ್ಕೆ ಹೋಗಿದ್ರಿ ? ಅದ್ರಾಗೂ ಈ ಹೊರೆ ಹೊತ್ಕಂಡು ಬಂಡೇಕಲ ದಾರಿ ನಡೆಯೋದೂಂದ್ರೆ ಸಾಮಾನ್ಯವಾ ? ತ್ವಾಟದಾಗ ಹೆಂಗೂ ಸಿದ್ದಮರಿ ಇದ್ದ, ಬೋಗಿನಾಗ ಬರ್ತಾ ತರ್ತಿದ್ದ.

ಸಿದ್ದವ್ವ : ಏನ ಮಾಡಾನ ಸಣ್ಣಜ್ಜ, ಮನ್ಯಾಗೆ ಕುಂತು ಬ್ಯಾಸರಾ ಗಿತ್ತು, ನಾನೇ ತ್ವಾಟಕೆ ಹಿಟ್ಟ ತಗೊಂಡೋಗಿದ್ದೆ. ಬರಿ ಕೈಲಿ ಹೆಂಗೆ ಬರಾದೂ ಅಂತ ಒಂದೀಟು ಕಾಯಿಸೊಪ್ಪು ಕೊಯ್ಕಂಡ ಬಂದೆ. ಯಾಕೋ ಬವಳಿ ಬಂದಂಗಾತು. ಒಂದು ಚಣ ನೆಳ್ಳಾಗೆ ಕುಂತು ಹೋಗಾನ ಅಂತ ನಿನ್ನ ಕರೆದೆ...

ಸಣ್ಣಜ್ಜ : ಒಳ್ಳೇದಾತು. ಹಂಗೇ ಮಾಡ್ರವ್ವ, ಅತ್ಲಾಗೆ ಕೂತ್ಕಳಿ ನೆಳ್ಳು ಒಯಕ್ಕಾಗೈತೆ.

ಸಿದ್ದವ್ವ : [ಕುಳಿತುಕೊಳ್ಳುತ್ತಾ]ನೀನೂ ಎಲ್ಲೋ ಹೊರಟಂಗೆ ಕಾಣ್ತೈತೆ.

ಸಣ್ಣಜ್ಜ : ಹೂ ಕಣ್ರವ್ವ. ಇಲ್ಲೆ ಬೇಗೂರಿಗೆ ಹೋಗಿ ಬರ್ಬೇಕು. ಅಂತರಗಟ್ಟೆ ತೇರ ಹತ್ರ ಬಂತಲ್ಲ. ಸಾಲ್ಗಾಕಿ ಬರಬೇಕು.

ಸಿದ್ದವ್ವ : ಯಾವಾಗ ತೇರು?

ಸಣ್ಣಜ್ಜ : ಬರೋ ಹುಣ್ಣಿಮೆಗೆ ಕಣ್ರವ್ವ. ಗೌಡ್ರು ಈ ಸರಿ ತೇರಿಗೆ ಪಾನಕದ ಗಾಡಿ ಹೂಡ್ತಾರಂತೆ. ಅದರಾಗೆ ಈ ವರ್ಸ ಬಿಟ್ಟಾರ ?

ಸಿದ್ದವ್ವ : ಇರ್ಲಿ ಸಣ್ಣಜ್ಜ. ನಿನ್ನ ಬಾಯಾಗೆ ಅಂತರಗಟ್ಟೆ ಮಾರಮ್ಮನ ಪದ ಕೇಳಿ ಏಸ ದಿನಾ ಆತು ಅಂತಿಯಾ ? ಹಂಗೆ ನಾಕು ಸೊಲ್ಲು ಅಂದೀಯಾ ?

ಸಣ್ಣಜ್ಜ : ಅದ್ಕೇನ್ರವ್ವ ? ಕೇಳೋ ಪುಣ್ಯಾತ್ಮರಿದ್ರೆ ಹೇಳಾಕೇನು ?

[ಹೆಗಲ ಮೇಲಿದ್ದ ಹಲಗೆಯನ್ನು ಕೈಗೆ ತೆಗೆದು ಕೊಂಡು ಬಡಿಯುತ್ತಾ ಹಾಡತೊಡಗುವನು]

ಅರಸಿ ಮಾರವ್ವಗೆ, ಗೆರೆಸಿಲಿ ಹೂ ಬಂದು
ವರುಷಕ್ಕೆ ಮೂರು ಮರಿ ಬಂದು
ವರುಷಕ್ಕೆ ಮೂರು ಮರಿ ಬಂದು—ಮಾರವ್ವ
ಅರಸಿ ನಿನ್ನ ಹಬ್ಬಾವ ಮಾಡೇವು.

ಅಕ್ಕಿ ಮಾಡೋ ಬೀದಿ—ಮಕ್ಕಳಾಡೋ ಬೀದಿ
ಅಕ್ಕ ಮಾರಮ್ಮ ಬರುವಂತ
ಅಕ್ಕ ಮಾರಮ್ಮ ಬರುವಂತ—ಬೀದೀಲಿ
ಅಕ್ಕಿ ಹೊಂಬಾಳೆ ಉದರ್ಯಾವೋ.

ಕೈಯ ಕಂಕಣದವಳೆ ಮೈಯ ಭೂಷಣದವಳೇ
ವೈಯ್ಯಾರಿ ಸಣ್ಣ ದನಿಯೋಳೆ
ವೈಯ್ಯಾರಿ ಸಣ್ಣ ದನಿಯೋಳೆ—ಮಾರಮ್ಮ
ಉಯ್ಯಾಲೆ ಬಿಟ್ಟು ದಯವಾಗೇ.

[ಸಿದ್ದವ್ವನಿಗೆ ನಿದ್ದೆಯ ಜೋಂಪು ಹತ್ತಿದೆ]

ಸಣ್ಣಜ್ಜ : ಅವ್ವ, ನಿಮಗೆ ಕಣ್ ಎಳೀತಿರಂಗೆ ಕಾಣ್ತೈತೆ. ಏಳ್ರೀ, ಈಗ್ಲೋದೀಟು ಮಾತಾಡಬೋದಂಗದೇ. ಬ್ಯಾಗ ಮನಿಗೆ

ಹೋಗಿ ಸಂಧಾರಿಸಿಕೊಳ್ಳಿ. ಈ ತಟ್ಟೀನಾ ನಾನು ತಂದು ಕೊಟ್ಟು ಆಮ್ಯಾಗೆ ಬೇಗೂರಿಗೆ ಹೋಗ್ತೀನಿ.

ಸಿದ್ದವ್ವ : ಬ್ಯಾಡ ಸಣ್ಣಜ್ಜ. ನಾನೇ ತಗೊಂಡ್ಹೋಗ್ತೀನಿ. ಈಗೊಂದೀಟು ಹಗುರಾದಂಗಾತು ಮೈಗೆ. ಒಸಿ ಹೊರ್ಸಿ ಬಿಡು ಸಾಕು.

5

ಮೇಳ : ಹಂಗೇ ಮಾಡವ್ವ ಅಂತ—ಕಲ್ಯಾಣದಯ್ಯ
ಅಸಾದಿ ನಿಂಗಣ್ಣ—ಕಲ್ಯಾಣದಯ್ಯ
ತಟ್ಟೀಯ ಹೊರಿಸಾಕೆ—ಕಲ್ಯಾಣದಯ್ಯ
ಹತ್ತಿರಕೆ ಬಂದಾನ—ಕಲ್ಯಾಣದಯ್ಯ
ತಟ್ಟೀಯ ಆ ಕಡಿಕೆ—ಶಿವ ಶಂಭು ಮಹದೇವ
ಗೌಡರ ಸಿದ್ದವ್ವ—ಶಿವ ಶಂಭು ಮಹದೇವ
ತಟ್ಟೀಯ ಈ ಕಡಿಕೆ—ಶಿವ ಶಂಭು ಮಹದೇವ,
ಅಸಾದಿ ನಿಂಗಣ್ಣ—ಶಿವ ಶಂಭು ಮಹದೇವ

ಗುರು : ತಮ್ಮ-ಅಸಾದಿ ಸಣ್ಣಜ್ಜ.

ಶಿಷ್ಯ : ಸಿದ್ದವ್ವನಿಗೆ ತಲೆಮೇಲೆ ತಟ್ಟಿ ಹೊರಿಸಿದ,

ಗುರು : ಇಲ್ಲ ಮರಿ ಕೇಳಿಲ್ಲಿ. ಶಿವನಾಟ ಏನೂ ಅಂಬೋದು ನರಮಾನ್ಯವರಿಗೆ ತಿಳೀದು.

ಶಿಷ್ಯ : ಹೌದಲ್ಲವೇ ?

ಗುರು : ನರಮನುಷ್ಯನ ಮನಸಿನಾಗೆ ಯಾವ ಗಳಿಗೇಲಿ ಏನು ಹೋಳಿತೈತೋ ಅಂತಹೇಳಂಗಿಲ್ಲ. ಮನುಸ್ಸು ಮರ್ಕಟ ಅಂತ ಶರಣರು ಹೇಳಿದ್ದಾರೆ.

ಶಿಷ್ಯ : ಹೌದು, ಈಗೇನಾತಪ್ಪ ಗುರುವೆ ?

ಮೇಳ : ಹೇ ಸಿದ್ದವ್ವ ನೀ ಕೇಳು—ತಂದನ್ನ ತಾನ
ಗೌಡತಿ ನೀ ಕೇಳು—ತಂದನ್ನ ತಾನ
ತಟ್ಟೀನ ಹೊರಿಸೇನು—ತಂದನ್ನ ತಾನ
ಎನ್ನುತಾನೆ ಸಣ್ಣಜ್ಜ—ತಂದನ್ನ ತಾನ
ನಂದೊಂದು ಮಾತೈತೆ—ತಂದನ್ನ ತಾನ
ಹೂ ಅಂದ್ರ ಹೊರಿಸೇನು—ತಂದನ್ನ ತಾನ

ಶಿಷ್ಯ : ಏನು ಮಾತಪ್ಪ ಅದು ?

ಗುರು : ಸಣ್ಣಜ್ಜನ ತಲೆಯಲ್ಲಿ ಏನೋ ಹೊಳದು ಸಿದ್ದವ್ವನ ಮುಕ ನೋಡುತಾನೇ....

## 6

ಸಣ್ಣಜ್ಜ : ಅವ್ವಾ, ನಿಮ್ಮ ಮುಕ ಏಟು ಚೆಂದಾಗಿ ಕಾಣಸ್ತೈತೆ ಅಂತೀರಾ.

ಸಿದ್ದವ್ವ : ಸಣ್ಣಜ್ಜ ಏನಿಂಗಂತೀಯ ? ನೀನೇನು ನನ್ನ ಹೊಸ್ತಾಗಿ ನೋಡಿಯ ?

ಸಣ್ಣಜ್ಜ : ಮುಕದ ಮ್ಯಾಲೆ ಈ ಕಳೆ ಯಾಕೆಂತ ನಂಗೇನು ಗೊತ್ತಾಗಲ್ವ? ಆಂತರಗಟ್ಟವ್ವ ನಂಗೆ ಅಷ್ಟು ಬುದ್ಧಿ ಕೊಟ್ಟಿಲ್ವ ?

ಸಿದ್ದವ್ವ : ಸಣ್ಣಜ್ಜ, ನೀನ ಏನ್ಹೇಳ್ತೀಯೋ ನಂಗೆ ತಿಳಿವಲ್ದು. ನಂಗ್ಯಾಕೊ ಹೆದರಿಕೆ ಆಗ್ತೈತೆ,

ಸಣ್ಣಜ್ಜ : ಹೆದರಸಾಕೆ ಇಲ್ಲಿ ಇನ್ಯಾರದಾರವ್ವ ?

ಸಿದ್ದವ್ವ : ಸಣ್ಣಜ್ಜ, ಏನಂಗಂದ್ರ ?

ಸಣ್ಣಜ್ಜ : ಏನಿಲ್ಲ ಕಣ್ರವ್ವ, ನಿಮ್ಮ ಹೊಟ್ಯಾಗೆ ಎಂತ ಚೆಂದುಳ್ಳ ಕೂಸು ಹುಟ್ಟಬೋದು ಅಂತ ಅಂಗಂದೆ.

ಸಿದ್ದವ್ವ : [ನಿಟ್ಟುಸಿರು ಬಿಟ್ಟು] ಆಯ್ಯೋ ಮಾರಾಯ ಏನೇನೋ ಮಾತಾಡಿ ಹೆದರಿಸಿಬಿಟ್ಯಲ್ಲಪ್ಪ. ಇರ್‍ಲಿ, ತಟ್ಟಿ ಹೊರ್‍ಸು.

ಸಣ್ಣಜ್ಜ : ಸಿದ್ದವ್ವ.

ಸಿದ್ದವ್ವ : ಹೂಂ,

ಸಣ್ಣಜ್ಜ : ತಟ್ಟಿನೇನೋ ಹೊರಿಸ್ತೀನಿ. ಆದ್ರೆ ನನಗೆ ನೀವೊಂದು ಮಾತು ಕೊಡಬೇಕು.

ಸಿದ್ದವ್ವ : ನಾನೇನು ಮಾತು ಕೊಡಾದು ? ಏನಾರ ಇದ್ರೆ ಗೌಡ್ರ ಕೇಳು. ಏಟೇ ಆದ್ರು ನಾನು ಹೆಣ್ಣು ಹೆಂಗ್ಸು. ನಂತಾವೇನು ಮಾತು,

ಸಣ್ಣಜ್ಜ : ಹಂಗಲ್ಲ ಕಣ್ರವ್ವ. ನೀವೇ ಮಾತು ಕೊಡಬೇಕು.

ಸಿದ್ದವ್ವ : ಏ ತೆರೀ ಸಣ್ಣಜ್ಜ, ಹೊತ್ತಾತು, ಹೊರ್‍ಸು ತಟ್ಟೀನ,

ಸಣ್ಣಜ್ಜ : ಹೊರಿಸ್ತೀನಿ ಕಣ್ರವ್ವ. ಆದ್ರೆ ಮಾತು ಮುಗಿದ ಮ್ಯಾಲೆ

ಸಿದ್ದವ್ವ : ಅದೇನು ಹೇಳ್ಬಾರ್ದ ?

ಸಣ್ಣಜ್ಜ : ನೀವು ಆಗಲಿ ಅಂತಂದ್ರೆ ಹೇಳ್ತೀನಿ,

ಸಿದ್ದವ್ವ : ಆಯ್ಯೋ ನಿಂದೊಳ್ಳೆ ಕತೆಯಾಯ್ತಲ್ಲ. ಹೂಂ ಆಗಲಿ. ಆದೇನ್ಹೇಳಪ್ಪ.

ಸಣ್ಣಜ್ಜ : ಅವ್ವ, ಇದೇ ಮಾತು. ನಾಳೆ ನಾಕು ಜನ ಅನ್ನಬಾರದು.

ಸಿದ್ದವ್ವ : ನೀನು ಹೇಳಾದೇ ನಂಗೆ ತಿಳೀವಲ್ದು.

ಸಣ್ಣಜ್ಜ : ಗಂಗವ್ವ. ಇದು ಯಾಕೆ ನನ್ನ ತಲೆಯಾಗೆ ಬಂತೋ ಏನೋ. ನೀವೇನ ತಿಳ್ಕಂತಿರೋ ಏನೋ, ಆದ್ರೂ ಮನಸ್ಸಿಗೆ ಬಂದೈತೆ. ನಂಗೂ ವಯಸ್ಸಾತು,

JNANA SIMHASAN JNANAMANDIR
LIBRARY
Jangamawadi Math, Varanasi
Acc. No. ......618......



ಸಿದ್ದವ್ವ : ಸಣ್ಣಜ್ಜ—ನೀನೇನೋ ಮಾತಾಡ್ತೀಯಪ್ಪ.

ಸಣ್ಣಜ್ಜ : ಏನಿಲ್ಲ ಕಣವ್ವ. ಹೆಂಗೂ ಹೂಂ ಅಂತ ಮಾತು ಕೊಟ್ಟಿದೀರಿ ಹೇಳೇ ಬಿಡ್ತೀನಿ, ಅವ್ವಾ.

ಸಿದ್ದವ್ವ : ಹೂಂ,

ಸಣ್ಣಜ್ಜ : ಅಂತರಗಟ್ಟವ್ವನ ದಯದಿಂದ ನಿಮ್ಮ ಹೊಟ್ಯಾಗೆ ಹೆಣ್ಣಾದ್ರೆ.

ಸಿದ್ದವ್ವ : ಆದ್ರೆ...

ಸಣ್ಣಜ್ಜ : ಆ ಮಗೀನ ನನ್ನ ಮಗನಿಗೆ ಕೊಟ್ಟು ಮದುವೆ ಮಾಡಬೇಕು.

ಸಿದ್ದವ್ವ : [ನಕ್ಕು] ಒಳ್ಳೆ ಸಣ್ಣಜ್ಜ ! ನೆರೆ ಬಂದ್ರೂ ನಗೆಚಾಟಿಕೆ ಬಿಡ್ಲಿಲ್ಲ. ಹೂಂ ಹೊರಸು ತಟ್ಟೀನ.

ಸಣ್ಣಜ್ಜ : ಇದೇ ಮಾತು ಕಣವ್ವ. ಕೊಟ್ಟ ಮಾತು ಬಿಟ್ಟಬಾಣ—ಎರಡೂ ಒಂದೇ ತಗಳ್ರಿ. [ತಟ್ಟೆ ಹೊರಿಸುತ್ತಾನೆ]

[ಸಿದ್ದವ್ವ ನಸುನಗುತ್ತ ತಟ್ಟೆ ಹೊತ್ತು ಹೊರಡುವಳು, ಅಸಾದಿ ಇನ್ನೊಂದು ದಿಕ್ಕಿನಲ್ಲಿ ನಿರ್ಗಮಿಸುತ್ತಾನೆ].

ಮೇಳ : ಆಗೋಗದ ಮಾತಿಗೆ—ಕಲ್ಯಾಣದಯ್ಯ.
ಆರಿದಾರಿ ನಡೆದ್ಹಾಂಗೆ—ಕಲ್ಯಾಣದಯ್ಯ,
ಗೌಡರ ಸಿದ್ದವ್ವ—ಕಲ್ಯಾಣದಯ್ಯ,
ಆಡೀದ ಮಾತನ್ನ—ಕಲ್ಯಾಣದಯ್ಯ,
ಅಸಾದಿ ಸಣ್ಣಜ್ಜ—ಕಲ್ಯಾಣದಯ್ಯ.
ಮನಸಿನಾಗೆ ಇಟ್ಟುಕೊಂಡು—ಕಲ್ಯಾಣದಯ್ಯ

ಗುರು : ತಮ್ಮ.

ಶಿಷ್ಯ : ಹ್ಞಾಗುರುವೇ.

ಗುರು : ಆಡಾಡ್ತಾ ಗೌಡ ಅವರೇಕಾಯಿ ಕೊಯ್ದ ಅಂದಂಗೆ,

ಶಿಷ್ಯ : ಹೌದೋ.

ಗುರು : ದಿನದ ಮ್ಯಾಲೆ ದಿನ ತುಂಬಿ ಗಂಗವ್ವ ಹೆಣ್ಣ ಹಡೆದಾಳೇ....

ಮೇಳ : ಗಂಗವ್ವ ಮಾತಾಯಿ – ಮಾದೇವಿ ಅವಳು—ಹೆಣ್ಣನ್ನ
ಹಡೆದಾಳು ದೇವೀ ನೀ ದಯಮಾಡೆ—
ಮಾದೇವಿ ನೀನು · ದೇವೀ ನೀ ದಯಮಾಡೇ
ಗಂಡಾಗದಿದ್ದರೂ—ಮಾದೇವಿ ಅವಳು—ಚಿಂತಿಲ್ಲವೆಂದ್ಹೇಳಿ
ದೇವೀ ನೀ ದಯಮಾಡೆ—
ಮಾದೇವಿ—ನೀನು—ದೇವೀ ನೀ ದಯಮಾಡೆ
ಚಿನ್ನದಂತ ಕೂಸ-ಮಾದೇವಿ ಅವಳು—
ಚನ್ನವ್ವಾಂತ ಕರೆದಾಳ, ದೇವೀ ನೀ ದಯಮಾಡೇ-
ಮಾದೇವಿ ನೀನು—ದೇವೀ ನೀ ದಯಮಾಡೇ.

ಗುರು : ಅಪರೂಪಕ್ಕೆ ಹುಟ್ಟಿದ ಕೂಸನ್ನು ಮುದ್ದಿನಿಂದ ಬೆಳೆಸ್ತಾರೆ

ಶಿಷ್ಯ : ಹೌದೂ.

ಗುರು : ಆ ಕೂಸನ್ನು ತೊಟ್ಟಿಲಲ್ಲಿಟ್ಟು ಹ್ಯಾಂಗೆ ತೂಗ್ತಾರಪ್ಪ ಅಂದ್ರೆ.

ಮೇಳ : ಕೂಸಿದ್ದ ಮನೆಗೆ—ಬೀಸಣಿಗೆ ಯಾತಕ
ಕೂಸು ಕಂದಮ್ಮ ಒಳಹೊರಗ – ಆಡಿದರ
ಸುತ್ತಲು ಗಾಳಿ ಸುಳಿಗಾಳಿ
ನನ್ನ ಹೊಟ್ಟೀಲೊಂದು ಚಿನ್ನಾ ಹುಟ್ಟಿತು ತಾಯಿ
ನಿನ್ನೂರಿಗೊಮ್ಮೆ ಕರೆದೊಯ್ಯೆ— ಹಡದವ್ವ
ರಾಮಸಾಲ್ಯಾಗೆ ಬರೆಹಾಕ.

ಗುರು : ತಮ್ಮಾ.

ಶಿಷ್ಯ : ದೇವರೂ....

ಗುರು : ಹಿಂಗೇ ವರುಸದ ಮ್ಯಾಲೆ ವರುಸ ಕಳೆದ್ಹೋಯ್ತು

ಶಿಷ್ಯ : ಆಹಾ,

ಗುರು : ಚೆನ್ನವ್ವ ಸೇರಿ ಉಡಾಂಗಾಗ್ಯವಳೆ. ಆ ಊರು ಗೌಡ. ಈ ಊರು ಗೌಡ ಅಂತ ಮುದ್ದೇಗೌಡನ ಮನೀಗೆ ಹೆಣ್ಣಿಗೆ ಬರೋರಿಗೆ ಲೆಕ್ಕವಿಲ್ಲ.

ಶಿಷ್ಯ : ಬರಬೇಕಾದ್ದೆ–ಹೆಣ್ಣಿದ್ದ ಮನೆಗೆ ನೆಂಟರು. ಹಣ್ಣಿದ್ದ ಮರಕ್ಕೆ ಪಕ್ಷಿ ಬರಬೇಕಾದ್ದೆ.

ಗುರು : ಹೌದು ತಮ್ಮ, ಅನುಭವದ ಮಾತು ಹೇಳ್ದೆ.

ಶಿಷ್ಯ : ಆಮ್ಯಾಲೆ ಗುರುವೆ?

ಗುರು : ಒಳ್ಳೆ ಮನೆತನಸ್ಥರ ಮನೆಗೆ ಮಗಳ ಕೊಡಬೇಕೂಂತ ಮುದ್ದೇ ಗೌಡನೂ ಯೋಚ್ನೆ ಮಾಡಿದ್ದ.

ಶಿಷ್ಯ : ಅಹಾ,

ಗುರು : ಹಿಂಗೇ ಇರುವಾಗ........

## 7

[ಗೌಡನ ಮನೆ—ಎಲೆ ಅಡಿಕೆ ಮೆಲ್ಲುತ್ತಾ ಜಗುಲಿಯ ಮೇಲೆ ಗೌಡ ಕುಳಿತಿದ್ದಾನೆ. ಅಸಾದಿ ಸಣ್ಣಜ್ಜ ಮೆಲ್ಲಗೆ ಬಂದು ನಿಲ್ಲುತ್ತಾನೆ.]

ಸಣ್ಣಜ್ಜ : ಕೈ ಮುಗಿದೆ ಗೌಡ್ರೆ.

ಗೌಡ : ಓ ಅಸಾದಿ ಸಣ್ಣಜ್ಜ, ಬಾರೋ, ಏಸು ವರ್ಷ ಆತು ನಿನ್ನೋಡಿ, ಈಗೇನೋ ತಿಮ್ಮನಹಳ್ಳಿಗೆ ಇದ್ದೀಯಂತೆ;

ಸಣ್ಣಜ್ಜ : ಹೂ ಕಣಪ್ಪ. ನನ್ನ ಹೆಂಡ್ತಿ ಸತ್ತವಶ್ಯಾಲೆ ಮನ್ಯಾಗೆ ಬೇಸಿಕ್ಕಾರಿಲ್ಲ ಅಂತ ನಮ್ಮ ಹಿರೆ ಹೊಡುಗಿ ಮನೆಗೇ

ಹೋಗಿದ್ಬಿಟ್ಟೆ. ಇರೋನೊಬ್ಬ ಮಗ, ಅವನೂ ಮದುವೆಗೆ ಬಂದವನೆ. ಮದುವೆ ಮಾಡಿ ಇಲ್ಲೇ ಬಂದು ಇದ್ಬಿಡಾನ ಅಂತ.

ಗೌಡ : ಓ—ನಿನ್ನ ಮಗ ಒಬ್ಬವನಲ್ವಾ? ಹೆಂಗವ್ನೆ?

ಸಣ್ಣಜ್ಜ : ಅವನಿಗೇನಪ್ಪ, ಚೆಂದಾಕೇ ಅವನೆ : ಕಲ್ಲಗಳ ಕರ್ಕೆ ಇದ್ದಂಗ. ನಂದೇ ಊರು ದೂರ, ಕಾಡಹತ್ರ ಅಂತದೆ.

ಗೌಡ : ಹೆಣ್ಣೆಲ್ಲಿ ನೋಡಿದಿಯಾ ಮಗನಿಗೆ?

ಸಣ್ಣಜ್ಜ : ಈಗ ಅದ್ಕೇ ಬಂದಿವ್ನಿ.

ಗೌಡ : ಇಲ್ಲಿ ಯಾರ ಮನೇಲಿ, ನಿನ್ನ ತಂಗಿ ಮಗಳದಾಳೇನು?

ಸಣ್ಣಜ್ಜ : ಒಂದ್ಯೆತೆ ಕಣ್ಣಪ್ಪ—ಕೆಪ್ಪಿ.

ಗೌಡ : ಮತ್ತಿನ್ನೆಲ್ಲ ನೋಡಿದೀಯ?

ಸಣ್ಣಜ್ಜ : ಹೆಣ್ಗೇನಪ್ಪ ಬರ ? ಕಾಸಿಗೊಂದು ಕೊಸ್ರಿಗೊಂದವೆ. ಆದ್ರೆ ನಮ್ಮ ಹುಡಗ್ಗೆ ಹೆಣ್ಣು ನಿಶ್ಚಯ ಆಗಿ ಬಾಳ ದಿನಾ ಆತು.

ಗೌಡ : ಅದೆಲ್ಲಪ್ಪ ನಂಗೊತ್ತಿಲ್ಲದ ನಿಶ್ಚಯ—

ಸಣ್ಣಜ್ಜ : ಎಲ್ಲಾರ ಯಾಕೆ ಗೌಡ್ರೆ. ಮನೆಯಾಗೆ ಬೆಣ್ಣೆ ಇಟ್ಕೊಂಗೊಂಡು ತುಪ್ಪಕೆಂಗೆ ಅಂದಂಗೆ.

ಗೌಡ : ಅದ್ಯಾವದಪ್ಪ ಮನೆಯಾಗ್ಲ ಬೆಣ್ಣೆ?

ಸಣ್ಣಜ್ಜ : ಅಂಹ್ಯೋ ಅದು ಬಹಳ ಹಳೆ ಮಾತು ಕಣ್ರಪ್ಪ. ಅವ್ವಾ ಅವರಿಗೆ ಗೊತ್ತು. ಒಂದೀಟು ಕರೀರಿ ಸಿದ್ದವ್ವ ಅವರ್ನ.

ಗೌಡ : ಇವಂದೊಳ್ಳೆ ಕತೆಯಾತಲ್ಲ, ಲೇ ಬಾರೇ ಇಲ್ಲಿ. ಅಸಾದಿ ಮಗನಿಗೆ ಹೆಣ್ಣು ಗೊತ್ತಾಗ್ಯೆತಂತೆ. ಯಾರ ಮನೇನೇ ಅದು? ನೀರಗಂಟ ಕರಿಯನ ಮಗಳಾ?

ಸಿದ್ದವ್ವ : [ಹೊರ ಬಾಗಿಲ ಬಳಿ ನಿಂತು] ಅಯ್ಯ, ಸಂಗೇನು ಗೊತ್ತು? ನಿಂಗಣ್ಣನ ನೋಡದೆ ಹದಿನೈದು ವರ್ಷಾತೋ ಮತ್ತೂ ಆತೋ. ನೀವೇಳಿದಂತೆ ಕರಿಯಣ್ಣನ ಮಗಳು ಇದ್ರೂ ಇರಬೋದು. ಅವತ್ತು ಕರಿಯಣ್ಣನೂ ಹಂಗಂತಿದ್ದ; ನಾನೂ ಆಗ್ಬೋದು ಅಂದೆ.

ಸಣ್ಣಜ್ಜ : ಯಾಕವ್ವ ಅವರಿವರ ಮನೆ ಸುದ್ದಿ? ನಿಮ್ಮ ಮಾತು ಏನಾತು?

ಸಿದ್ದವ್ವ : ಏ ಸಣ್ಣಜ್ಜಾ ಯಾವ ಮಾತು? ಏನು ಕತೆ?

ಸಣ್ಣಜ್ಜ : ಯಾಕವ್ವ, ನಾನು ನಿಮ್ಮೋಟು ಅನ್ನ—ಸೊಪ್ಪಿಗೆ ನ್ಯಾರ ವಾಗಿಲ್ಲಾಂತ್ಲ? ಆದ್ರೆ ಕೊಟ್ಟ ಮಾತು ಕಣವ್ವ.

ಗೌಡ : ಏ ಸಣ್ಣಜ್ಜ, ಏನ ನೀನು ಮಾತಾಡ್ತಿರೋದು?

ಸಣ್ಣಜ್ಜ : ಇಲ್ಲದ್ದನ್ನು ಏನೂ ಹೇಳ್ತಾ ಇಲ್ಲ ಗೌಡ್ರು. ಇಲ್ಲಿಗೆ ಹದಿನೈದು ವರ್ಷ ಮಾತು. ಅವ್ವಾ ಅವರು ಹೂಂ ಆಗಲಿ ಅಂದಿದ್ರು.

ಗೌಡ : ಯಾತಕ್ಕೆ ಆಗ್ಲಿ ಅಂದಿದ್ಲು?

ಸಣ್ಣಜ್ಜ : ನಿಮ್ಮ ಹೊಟ್ಟೇಲಿ ಹೆಣ್ಣು ಕೂಸು ಹುಟ್ಟಿದ್ರೆ. ನನ್ನ ಮಗನಿಗೆ ಕೊಟ್ಟು ಮದುವೆ ಮಾಡಬೇಕು ಅಂದಿದಕ್ಕೆ.

ಗೌಡ : ಏ ಸಣ್ಣಾ, ಮುಚ್ಚುಬಾಯಿ. ಏನೋ ಊರು ಮನೇನೂ ಅಂತ ಮಾತಾಡಿಸಿದ್ದಕ್ಕೆ ಮಾನ ಮರ್ಯಾದಿ ಬಿಟ್ಟು ಮಾತಾಡ್ತಿಯ? ನಿಂದ ಯಾವ ಜಾತಿ? ನಂದ ಯಾವ ಜಾತಿ? ಕಾಗೇನೂ ಕೋಗಿಲೇನೂ ಒಂದೇ ಏನ್ಲ? ತುಸ ಹಲ್ಲಿಡದು ಮಾತಾಡು.

ಸಣ್ಣಜ್ಜ : ಗೌಡ್ರೇ, ಕ್ವಾಪ ಮಾಡ್ಕೊಬ್ಯಾಡ್ರಿ. ಇದು ಆದ ಮಾತು; ಜಾತಿ ಮಾತಲ್ಲ. ಅವ್ವಾವರನ್ನೇ ಕೇಳಿ ಬೇಕಾದರೆ!

ಗೌಡ : ಏನ ಕೇಳೋದಲೇ. ಲೇ ಸಿದ್ದೀ ಏನೇ ಇದು.

ಸಿದ್ದವ್ವ : [ನಡುಗುತ್ತಾ] ನಾನು ನಾನು ಮಾತು ಕೊಟ್ಟೇನಾ? ಸಣ್ಣಜ್ಜ ಏಳಾದು ಸುಳ್ಳು.

ಸಣ್ಣಜ್ಜ : ನಾನು ಯಾಕ್ರವ್ವ ಸುಳ್ಳು ಹೇಳ್ಲಿ ? ನೀವು ಮಾತು ಕೊಟ್ಟಾಗ.

ಗೌಡ : ಯಾವೋಳೋ ನಿಂಗೆ ಮಾತುಕೊಟ್ಕೋಳು? ಮಾರೀ ದೇವರಿಗೆ ತಮಟೇ ಬಡಿಯೋ ತಳವಾರನ ಮಗನಿಗೆ ಮಗಳನ್ನ ಕೊಡ್ತೀನಿ ಅಂತ ಹೇಳಿದ್ಲೋ ನಿಮ್ಮ ಸಿದ್ದವ್ವ? ನಾಲ್ಗೇ ಐತೇ ಅಂತ ಹರಿಬಾಚಬಾರ್ದು ಕಣ್ಲ. ಊಚು—ಕೂಚು ನೋಡಿ ಮಾತಾಡಬೇಕು. ಈಚಲು, ತೆಂಗು ಎಲ್ಲ ಒಂದೇ ಮಾಡಾಕಾಗ್ತದ? ಮುದುಕಾ ಅಂತ ಸುಮ್ನಿವ್ನಿ.

ಸಣ್ಣಜ್ಜ : ಗೌಡ್ರೆ, ದೊಡ್ಡೋರು ನೀವೇ ಹಿಂಗೆ ಕೆಂಡ ಕಾರಿದರೆ ಹೆಂಗೆ? ನಡೆದ ಮಾತು ಅದು. ನನ್ನ ಗುಡಿಸಲಾಗೆ ಉರಿಯೋ ಬೆಂಕಿಗೂ ಹಿಟ್ಟು ಬೆಯ್ತದೆ ಕಣ್ರಪ್ಪ. ಕೊಟ್ಟ ಮಾತು ಹೋಬ್ಬಾರ್ದು. ಇನ್ನೊಂದ್ಸಲ ಅವ್ವಾವರ್ನ ಕೇಳಿ.

ಗೌಡ : ಲೇ, ಸಿದ್ದೀ.

8

ಮೇಳ : ಸಿದ್ದವ್ನ ಕರೆದಾನ—ತಂದನ್ನ ತಾನ
ಕೆಂಡಗಣ್ಣ ಬಿಟ್ಟಾನ— ತಂದನ್ನ ತಾನ
ಏನು ಹೇಳಲೆ ಸಿದ್ದಿ—ತಂದನ್ನ ತಾನ
ಎಂತ ಮಾತಲೆ ಹೆಣ್ಣೆ—ತಂದನ್ನ ತಾನ

ಗುರು : ಹಂಗಂತ ಸಿದ್ದವ್ವನನ್ನ ಗೌಡ ಕೇಳಿದಾಗ

ಶಿಷ್ಯ : ಆಹಾ

ಗುರು : ಅಂತಾ ಮಾತು ಕೊಟ್ಟಿಲ್ಲಾಂತ ಸಿದ್ದವ್ವ ಹೇಳ್ತಾಳೆ

ಮೇಳ : ಗಂಡ ನಂಜೇ ಗೌಡ–ಹರ ನನ್ನ ಮಹದೇವ
ಹೆಂಡ್ತಿ ಮಾತ ಕೇಳುತಾನ–ಹರ ನನ್ನ ಮಹದೇವ
ಆಸಾದಿಗೆ ಹೇಳುತಾನ–ಹರ ನನ್ನ ಮಹದೇವ
ಕೇಳಿದೇನೋ ಅವಳ ಮಾತ–ಹರ ನನ್ನ ಮಹದೇವ
ಹಟ್ಟಿ ಬಿಟ್ಟು ಹೋಗಂತ–ಹರ ನನ್ನ ಮಹದೇವ
ಕ್ಟುತ್ತಿಡಿದು ನೂಕುತಾನ–ಹರ ನನ್ನ ಮಹದೇವ

ಶಿಷ್ಯ : ಶಿವ ಶಿವ

ಗುರು : ಆಗ ಸುತ್ತಮುತ್ತಿನ ಜನರೆಲ್ಲ ಸೇರಿದ್ದಾರೆ. ಅವರಲ್ಲಿ ಬೈರಜ್ಜ ಅಂತ ಒಬ್ಬ ಯಜಮಾನ,

## 9

ಬೈರಜ್ಜ : ಗೌಡ, ಹಂಗೆ ದುಡುಕಬಾರದು, ಸಿಟ್ಟು ಬಂದಾಗ ಹತ್ತು ಎಣಿಸು ಅಂತ ಕೇಳಿಲ್ಲ ? ಕಾದ ಹಾಲು ಆರಿಸಿಕೊಂಡು ಕುಡೀಬೇಕು. ತುಸ ತಾಳಿಕೋ : ನಾನು ಒಸಿ ಇಚಾರಿ ಸ್ತೀನಿ. ಏನು ನಡೀತೂ ಅನ್ನಾದ ನೀನೂ ಹೇಳೀ ಯಂತೆ.

ಗೌಡ : ಏ ಹೇಳೋದು ಬೈರಜ್ಜಾ, ಈ ಅಯೋಗ್ಯನ ಮಗನಿಗೆ ನನ್ನ ಮಗಳ ಕೊಡ್ತಿನಂತೆ. ನನ್ನ ಹೆಂಡ್ತಿ ಮಾತು ಕೊಟ್ಟವ ಳಂತೆ. ಮಾತು, ಹಂಗಂತ ಇವನು ಹೇಳ್ತವನಲ್ಲ. ಎಟು ತೆಗವಿದ್ದಾತು ಇವನ ವೈಯಾಗೆ ?

ಸಿದ್ದವ್ವ : ಅಯ್ಯೋ ದ್ಯಾವರೆ, ನಮ್ಮ ಮನೆ ಮಾನ–ಮರ್ಯಾದೆಲ್ಲ ಬೀದಿಗೆ ಬಂದಂಗಾತಲ್ಲಪ್ಪ (ಅಳುವಳು)

ಬೈರಜ್ಜ : ಯಾರ ಮಾನಾನು ಎಲ್ಲೂ ಹೋಗಲ್ಲ ಸುಮ್ನಿರು ಸಿದ್ದವ್ವ. ಏನ್ಲ ಸಣ್ಣ, ನಿಂಗೆ ಯಾಕಲ ಬಂತು ಇಂತಬುದ್ದಿ? ಎಲ್ಲಾದ್ರೂ ಉಂಟಾ ? ಸಿದ್ದವ್ವ ಇಂತ ಮಾತು ಕೊಡಾಕೆ ಆದಾತ ?

ಸಣ್ಣಜ್ಜ : ನಾನು ಸುಳ್ಳು ಹೇಳ್ತಾ ಇಲ್ಲ ಗೌಡ್ರು. ಈ ಊರಾಗೆ ನಾನು ಏಸ ದಿನದಿಂದ ಬಾಳ್ವೆ ಮಾಡಿಕೊಂಡಿರಲಿಲ್ಲ ? ಅಪ್ಪಜ್ಜನ ಕಾಲದಿಂದ ತಿಪ್ಪೆಗೆ ಸಗಣಿ ಹೊತ್ತೋನು ನಾನು. ನಾನೆಂದಾದರೂ ಸುಳ್ಳು ತಟವಟ ಮಾಡಿದ್ದು ನಿಮಗೆ ನೆಪ್ಪೈತಾ ?

ಸಿದ್ದೇಗೌಡ : ಯಾಕೆ ಹೇಳೀಯ ಸುಳ್ಳ. ಗಿರಾಸ್ತನ ಮೊಮ್ಮಗ ? ಏಟ್ಟು ಹಲ್ಲು ಬಿದವಲೇ ನಿನಗೆ ನೀ ಏನ ಮಾಡ್ತೀಯೆ ? ತಮ್ಮನ ಹಳ್ಳಿ ನೀರು ಹಂಗೆ ಕುಣಿಸ್ತದೆ.

ಬೈರಜ್ಜ : ಏ ಸಿದ್ದಣ್ಣ, ನೀನ್ಯಾಕೆ ಹಿಂಗೆ ದುಡುಕಿ ಮಾತಾಡ್ತೀಯ ? ಅವನೇನು ಹೇಳ್ತಾನೆ ಅನ್ನಾದ ಇಷ್ಟು ಕೇಳಾನ.

ಸಣ್ಣಜ್ಜ : ದೊಡ್ಡ ಗೌಡ್ರು, ಇದು ಈವೊತ್ತಿನ ಮಾತಲ್ಲ. ಹದಿನೈದು ವರ್ಷದ ಹಿಂದಿನ ಮಾತು. ಸಿದ್ದವ್ವ ತ್ವಾಟದಿಂದ ಬರ್ತಾ ಬಿಡೇ ಕಲ್ ದಾರೀಲಿ ಕೊಟ್ಟ ಮಾತು. ಬೇಕಾದರೆ ಅವ್ವಾರ್ನ ಕೇಳಿ.

ಸಿದ್ದೇಗೌಡ : ಏನ ಕೇಳೋದು ? ಜಾತಿ ಜನ್ಮ ಅನ್ನೋದೇನೂ ಇಲ್ವಾ? ಹಂಗಾರೆ ತಿಳ್ಪೇನೂ ಉಪ್ಪರಿಗೇನೂ ಒಂದೇನಾ ?

ಬೈರಜ್ಜ : ಹೌದಪ್ಪ ಸಣ್ಣ, ನೀನೇನೋ ಹೇಳ್ತೀಯ. ಸಿದ್ದವ್ವನೂ ಹೇಳಬೇಕಲ್ಲ.

ಸಣ್ಣಜ್ಜ : ಅದಕ್ಕೇನು ಕೇಳ್ರಿ

ಬೈರಜ್ಜ : ಸಿದ್ದವ್ವ, ಈ ಮಾತು ನಡೆದದ್ದು ದಿಟವಾ ?

ಸಿದ್ದವ್ವ : ಎಲ್ಲಾರ ಉಂಟ ಮಾವ ? ನಂಗೇನು ಜಾತಿ ಕುಲ ಗೊತ್ತಿಲ್ವ ಅಂಗೆ ಮಾತು ಕೊಡಾಕೆ ?

ಸಣ್ಣಜ್ಜ : ಯಾಕವ್ವ ಮಾತಿನ ಮುಂದೆ ಜಾತಿ ನಿಲ್ಲಲ್ಲ ಕಣವ್ವ. ಗೌಡ್ರೆ ಬ್ಯಾಸರ ಮಾಡ್ಕಬ್ಯಾಡ್ರಿ. ನಾಲಗೆ ಉದ್ದ ಮಾಡ್ದ ಅಂತ ತಿಳ್ಕಬ್ಯಾಡ್ರಿ. ನನ್ನ ಮೈ ಜಿಗಟಿದರೆ ರಕ್ತ ಬರಲಲ್ವಾ ? ಅದೇನು ಕೆಂಪಗಿರಲ್ವಾ ?

ಸಿದ್ದೇಗೌಡ : ಅದೆಲ್ಲ ವೇದಾಂತ ನಮಗೆ ಬ್ಯಾಡ. ನೀನೀಗ ಬಾಕಾದ್ದು ಹೇಳಬಹುದು ಆದರೆ, ನಂಬೋರು ಬೇಕಲ್ಲ, ಸಿದ್ದವ್ವ ಮಾತು ಕೊಟ್ಟಿದ್ದು ನಿಜ ಅನ್ನಾಕೆ ಸಾಕ್ಷಿ ಬೇಕಲ್ಲ, ಸಣ್ಣ, ಅದೆಲ್ಲಾ ಸಾಧಿಸಾಕೆ ಹೋಗಬ್ಯಾಡ. ಸುಮ್ಕೆ ತಪ್ಪಾತು ಅಂತ ಪಂಚರ ಮುಂದೆ ಅಡ್ಡ ಬೀಳು.

ಬೈರಜ್ಜ : ಸಿದ್ದೇಗೌಡನ ಮಾತಿನಾಗೆ ಸತ್ಯವೈತೆ. ಯಾವ ವ್ಯವಹಾರವೇ ಆಗಲೀ ಸಾಕ್ಷಿ ಬೇಕು. ನಿಮ್ಮಿಬ್ಬರ ಮಾತುಕತೆ ಎಲ್ಲಿ ನಡೀತು. ಆವಾಗ ಯಾರಿದ್ದರು ಅನ್ನೋದೆಲ್ಲ ಬೇಕಲ್ಲ.

ಸಣ್ಣಜ್ಜ : ಮಾತು ನಡೆದ ಜಾಗ ಗ್ಯಾರಮರಡಿ ದಿಬ್ಬದ ಬಂಡೆಕಲ್ಲಿನ ಹತ್ರ. ಆವಾಗ ನಾನು, ಸಿದ್ದವ್ವ ಬಿಟ್ರೆ ಬ್ಯಾರೆ ಯಾರೂ ಇರ್ಲಿಲ್ಲ. ಇಲ್ಲದ ಸಾಕ್ಷಿ ನಾನೆಲ್ಲಿಂದ ತರ್ಲಿ ?

ಸಿದ್ದೇಗೌಡ : ಹಾಂಗಾದ್ರೆ ನಡೀರಿ ನಾಳಿಕ್ಕೆ ಆ ಬಂಡೆಕಲ್ಲ ಹತ್ರವೇ ಪಂಚಾಯ್ತಿ ಮಾಡಾವ. ಮುಳ್ಳು ನೆಟ್ಟತಾವ್ಲೆ ಬಗಿಬೇಕು. ನಡೆದ ತಾವ್ಲೆ ನ್ಯಾಯ ಬಗೇಹರೀಲಿ ಏನ್ಲಾ ಸಣ್ಣ ಏನಂತೀ ?

ಸಣ್ಣಜ್ಜ : ಆಗಲಿ ಕಣಪ್ಪ, ಆದ್ರೆ ಸಿದ್ದವ್ವಾರೂ ಬರಬೇಕು

ಸಿದ್ದವ್ವ : ಆಗ್ಲಿ ಬರ್ತೀನಿ ನಡಿ ಅದ್ಕೇನು

ಗೌಡ : ಆಗ್ಲಿ ನಡೀರಿ ಅಲ್ಲೇ ಹೋಗಾನ. ನಾಳೆಗೀಳೆ ಬ್ಯಾಡ, ಆಗೋದೆಲ್ಲ ಇವೊತ್ತೇ ಇತ್ಯರ್ಥವಾಗ್ಲಿ. ಸಾಕ್ಷಿ ಕೊಡದೆ ಅದ್ಹೆಂಗೆ ನ್ಯಾಯ ಸಿಗ್ತೈತೆ ನೋಡಾನ.

ಬೈರಜ್ಜ : ಇದಕ್ಕೇನಂತಿರಪ್ಪ ಪುಣ್ಯಾತ್ಮರು?

ಜನ : ಆಗಬೋದು, ಆಗಬೋದು.

## 10

ಮೇಳ : ಅಂಗದ ಮಾತೀಗೆ–ಶಿವ ಶಂಭು ಮಹದೇವ
ಊರೆಲ್ಲ ಒಪ್ಪೀತು–ಶಿವ ಶಂಭು ಮಹದೇವ
ಸಭೆಯೆಲ್ಲ ಒಪ್ಪೀತು–ಶಿವ ಶಂಭು ಮಹದೇವ
ಅಲ್ಲಿಂದಲೆ ಹೊರಟಾರು–ಶಿವ ಶಂಭು ಮಹದೇವ
ಬಂಡೆಕಲ್ಲ ಸೇರ್‍ಯಾರು–ಶಿವ ಶಂಭು ಮಹದೇವ
ಊರೆಲ್ಲ ಸೇರ್‍ಯಾರು–ಶಿವ ಶಂಭು ಮಹದೇವ
ಒಂದು ಕಡೆ ನಂಜೇ ಗೌಡ–ಕಲ್ಯಾಣದಯ್ಯ
ಒಂದು ಕಡೆ ಸಣ್ಣಜ್ಜ–ಕಲ್ಯಾಣದಯ್ಯ
ಪಂಚರು ಎದುರೀಗೆ–ಕಲ್ಯಾಣದಯ್ಯ
ಪ್ರಶ್ನೇಯ ಹಾಕುತಾರೆ–ಕಲ್ಯಾಣದಯ್ಯ

ಗುರು : ಅಪ್ಪಾ ಮರಿದೇವರು.

ಶಿಷ್ಯ : ಸ್ವಾಮಿ ಮಾಗುರುವೇ.

ಗುರು : ಗ್ಯಾರಮರಡಿ ದಿಬ್ಬದ ಬಂಡೇ ಕಲ ಹತ್ರ—

ಶಿಷ್ಯ : ಹೌದ್ರೋ

ಗುರು : ಊರಿಗೂರೇ ಸೇರಿಬಿಟ್ಟಿದೆ.

ಶಿಷ್ಯ : ಆಹಾ

ಗುರು : ಒಂದು ಕಡೆ ನಂಜೇಗೌಡ ಸಿದ್ದವ್ವ. ಮತ್ತೊಂದು ಕಡೆ

ಸಣ್ಣಜ್ಜ. ಎದುರಿಗೆ ಪಂಚ್ಛರು. ಸಣ್ಣಜ್ಜನಿಗೆ ಒಂದೊಂದು ಪ್ರಶ್ನೆ ಕೇಳುತ್ತಾರೇ

## 11

ಬೈರಜ್ಜ : ಹೂಂ. ಆಮ್ಯಾಲೆ

ಸಣ್ಣಜ್ಜ : ಆಮ್ಯಾಗೆ
(ದೃಶ್ಯ ಪುನರಾವರ್ತನ)

ಬೈರಜ್ಜ : ಏನ ಸಿದ್ದವ್ವ, ನೀನು ಏನ ಹೇಳ್ತೀಯು ?

ಸಿದ್ದವ್ವ : ಮಾವ, ಇದೆಲ್ಲ ನಂಗೆ ತಿಳೀದು. ಈ ಸಣ್ಣಜ್ಜ ಎಲ್ಲ ಕತೆ ಕಟ್ಟಿ ಹೇಳ್ತಾವನೆ.

ಸಣ್ಣಜ್ಜ : ಸಿದ್ದವ್ವ

ಸಿದ್ದೇಗೌಡ : ಏ ಸಣ್ಣ, ಸಾಕು ನಿನ್ನ ಪುರಾಣ. ಸಿದ್ದವ್ವನಂತ ಗರತಿ ಮ್ಯಾಲೆ ಸುಳ್ಳು ಅಪವಾದ ಹೊರಸ್ತೀಯಾ ? ನೀನು ಮಾರಿಗುಡಿಗೆ ದಂಡ ಕೊಡಬೇಕಾಗ್ತೈತೆ.

ಸಣ್ಣಜ್ಜ : ಅಂತರಗಟ್ಟೆಮ್ಮನ ಆಣೆಗೂ ನಾನು ಸುಳ್ಳು ಹೇಳಲ್ಲ ಗೌಡ್ರೆ, ನಾನು ಹಂಗೆ ಸುಳ್ಳು ಹೇಳಿದ್ರೆ ನಂಗಿರೋ ಒಬ್ಬ ಮಗನೂ ಸಿಡಿದು ಹೋಗಲಿ,

ಬೈರಜ್ಜ : ಬಿಡ್ತು ಅನ್ನು ಸಣ್ಣ. ಈಗ ವ್ಯವಹಾರದ ಮಾತು. ನೀನು ಸಿದ್ದವ್ವನ ಕೇಳಿರಬಹುದು : ಸಿದ್ದವ್ವನೂ ಹೇಳಿರಬಹುದು. ನೀನು ನಗೆಚಾಟಿಕೆಗೆ ಹೇಳಿರಬಹುದು. ಆಕೆ ಹುಡುಗಾಟಕ್ಕೆ ಹೂಂ ಅಂದಿರಬಹುದು.

ಸಣ್ಣಜ್ಜ : ಅದೆಂಗಾದಾತು ಗೌಡ್ರೆ. ಮಾತು ಮಾತೇ ದೇವರಾಣೆಗೂ,

ಸಿದ್ದೇಗೌಡ : ನೀನು ದೇವರ ಮ್ಯಾಲಾದ್ರೂ ಆಣೆ ಇಡು ; ದೆವ್ವದ ಮ್ಯಾಲಾದ್ರೂ ಇಡು. ಆದ್ರೆ ಮಧ್ಯೆ ಒಬ್ಬರು ಸಾಕ್ಷಿ ಬೇಕಲ್ಲ.

ಬೈರಜ್ಜ : ಅದ್ನಿಜ. ಸಾಕ್ಷಿ ಇಲ್ಲದ ಸಂಗ್ತೀನ ಹೆಂಗೆ ನಂಬಾಕಾದಾತು ? ನ್ಯಾಯ ಹೇಗ್ತೀಂಳ್ಕಾದಾತು ? ನಾಳೆ ಹತ್ತು ಜನ ಏನಂದಾರು ? ಇಕಾ ಸಣ್ಣಜ್ಜ, ನೀನು ಸರಿಯಾದ ಸಾಕ್ಷಿ ಕೊಟ್ಟರೆ, ನಂಜೇಗೌಡನ ಮಗಳನ್ನ ನಿನ್ನ ಮಗನಿಗೆ ಕೊಟ್ಟು ಮದುವೆ ಮಾಡೋದೇ ಸೈ-ಏನಂತೀರಪ್ಪ ಪಂಚರು ?

ಜನ : ಆಗ್ಬೋದು, ಆಗ್ಬೋದು.

## 12

ಮೇಳ : ಸೆಟೆಯೇನು ದಿಟವೇನು-ಕಲ್ಯಾಣದಯ್ಯ
ಸಾಕ್ಷೀಯ ಕೊಡಬೇಕು-ಕಲ್ಯಾಣದಯ್ಯ
ಪಂಚರ ಮಾತೀಗೆ· ಕಲ್ಯಾಣದಯ್ಯ
ಸಭೆಯೆಲ್ಲ ಒಪ್ಪೀತು-ಕಲ್ಯಾಣದಯ್ಯ
ಅಸಾದಿ ಸಣ್ಣಜ್ಜ-ಶಿವ ಶಂಭು ಮಹದೇವ
ಮನದಾಗೆ ಮರುಗ್ಯಾನು-ಶಿವ ಶಂಭು ಮಹದೇವ
ಇಲ್ಲಾದ ಸಾಕ್ಷಿಯು-ಶಿವ ಶಂಭು ಮಹದೇವ
ಎಲ್ಲಿಂದ ತರುವುದು-ಶಿವ ಶಂಭು ಮಹದೇವ

ಗುರು : ತಮ್ಮಾ

ಶಿಷ್ಯ : ಗುರುವೇ

ಗುರು : ಪಂಚರು ಸಾಕ್ಷಿ ಬೇಕೂ ಅಂತ ಕೇಳಿದ್ರು. ಆವಾಗ ಸಣ್ಣಜ್ಜ ಸಪ್ಪಗೆ ಮುಕ ಮಾಡಕ್ಕೊಂಡು ನಿಂತಕಂಡವ್ನೆ.

ಶಿಷ್ಯ : ಯಾಕೆ ಗುರುವೆ ?

ಗುರು : ಯಾಕಂದ್ರೆ. ಸಿದ್ದವ್ವನಿಗೂ ಸಣ್ಣಜ್ಜನಿಗೂ ಮಾತುಕತೆ ಆದಾಗ ಯಾರೂ ಇರ್ಲಿಲ್ಲ.

ಶಿಷ್ಯ : ಮುಂದೇನು ಗತಿ ಹಾಗುರುವೆ ?

ಗುರು ; ನಿಜ, ಮುಂದೇನು ಗತಿಯೆಂತ ಸಣ್ಣಜ್ಜ ಮುಂದೇವರ ನೆನಿತಾನೇ

ಮೇಳ : ಹಂತಿ ಹಂತೀಗೆ ಸುಣ್ಣ–ಶಿವ ಶಂಭು ಮಹದೇವ
ಜಂತೀಗೆ ಕೆಮ್ಮಣ್ಣು–ಶಿವ ಶಂಭು ಮಹದೇವ
ಮಂತ್ರೀಸುಮಾರವ್ವ–ಶಿವ ಶಂಭು ಮಹದೇವ
ಅಂತರದ ಮುಖದವಳೆ–ಶಿವ ಶಂಭು ಮಹದೇವ
ಕಷ್ಟಾವು ಬಂದಾದೆ ಕಲ್ಯಾಣದಯ್ಯ
ಎದ್ನೋಡು ಮಾರಮ್ಮ–ಕಲ್ಯಾಣದಯ್ಯ
ಗುಲಗಂಜಿ ಬಣ್ಣದವಳೆ-ಕಲ್ಯಾಣದಯ್ಯ
ಗುಡುಗಿ ನೋಡಮ್ಮ ತಾಯಿ–ಕಲ್ಯಾಣದಯ್ಯ

ಸಿದ್ದೇಗೌಡ : ಹೂಂ ಏನ ಹೇಳ್ತೀಯಾ ಸಣ್ಣ, ಸಾಕ್ಷಿ ಕೊಡದಿದ್ದರೆ ಮಾತೇ ಉಳಿಯಾಕಿಲ್ಲ. ಯಾರು ಕೊಡ್ತೀಯ ಸಾಕ್ಷೀಗೆ,

ಗೌಡ : ದಿಟ. ಸಾಕ್ಷಿ ಇಲ್ಲದ ಮಾತು ನಂಬೋದೆಂಗ ? ನಾನಂತೂ ಒಪ್ಪಾಕಿಲ್ಲ. ಇವನು ಅಂತ ಮಾನಸ್ಥ ಆದ್ರೆ ಸಾಕ್ಷಿ ಕೊಡಲಿ,

ಸಣ್ಣಜ್ಜ ; ನಾನೆಂಗೆ ಸಾಕ್ಷಿ ತರ್ಲಿ ಗೌಡ್ರೆ. ಮಾತು ನಡೆದಾಗ ಈ ಬಂಡೆ ಕಲ್ಲ ಬಿಟ್ಟರೆ ಇದ್ದೋರು ನಾವಿಬ್ರೆ. ನಾನು–ಸಿದ್ದವ್ವಾರು.

ಸಿದ್ದೇಗೌಡ : ಏನ ಹಂಗಂದ್ರೆ ಏನು ಈ ಕಲ್ಲ ಕೇಳಬೇಕಾಗ್ತೈತಾ

ಬೈರಜ್ಜ : ಮಾತು ಉಳೀಬೇಕೂಂದ್ರೆ ಕಲ್ನಾ ಕೇಳಬೇಕಾಗ್ತೈತೆ, ಏನ ಸಣ್ಣಜ್ಜ ಏನಂತೀಯ ?

ಸಣ್ಣಜ್ಜ : ಏನ್ಮಾಡಲಿ ಗೌಡ್ರೇ, ನನ್ನ ಮಾತ ನೀವ ನಂಬಾದಿಲ್ಲ.

ಬೈರಜ್ಜ : ಇರಲಿ ಸಿದ್ದಣ್ಣ. ಇದೂ ಒಂದು ಪರೀಕ್ಷೆ ಆಗೇಬಿಡ್ಲಿ, ದ್ಯಾವರಿಟ್ಟಂಗಾಗ್ಲಿ. ಕೇಳೇಬಿಡ್ರಿ ಈ ಕಲ್ನ ?

ಗೌಡ : ನೀನೇ ಹೀರೇ ಮನ್ಸಾ. ಕೇಳು ಬೈರಜ್ಜ.

ಸಿದ್ದೇಗೌಡ : ಯಾರ್‍ರ ಯಾಕೆ, ನಾನೇ ಕೇಳ್ತೀನಿ (ತಮಟೆ ದನಿ) ಏನಪ್ಪ ಬಂಡಡೆ ಕಲ್ಲೇ ಸಣ್ಣಜ್ಜ ನನ್ನ ಮಗನಿಗೆ ನಿನ್ನ ಮಗಳು ಕೊಡಬೇಕು ಅಂತ ಸಿದ್ದವ್ವನ್ನ ಕೇಳಿದ್ದು ದಿಟವಾ ?

(ಭಯಂಕರ ಆಸ್ಫೋಟದ ಸದ್ದು. ನಂತರ ದಿಟ ದಿಟ ದಿಟ ಎಂಬ ಧ್ವನಿ ಪ್ರತಿಧ್ವನಿ-ಅದು ಶಾಂತಗೊಂಡ ಮೇಲೆ)

ಸಣ್ಣಜ್ಜನ ಮಾತಿಗೆ ಸಿದ್ದವ್ವ ಹೂಂ ಆಗಲಿ ಅಂತ ಹೇಳಿದ್ದು ದಿಟವಾ ?

(ಮತ್ತೆ ಅದೇ ಭಯಂಕರ ಸದ್ದು- ಬಂಡೆ ಸಿಡಿದೊಡೆಯುತ್ತಿದ್ದಂತೆ ದಿಟ ದಿಟ ದಿಟ ಎಂಬ ಮಾರ್ದನಿ ಮೊಳಗುತ್ತದೆ)

[ವಿವಾಹದ ವ:ಂಗಳ ದನಿ]

ಮೇಳ : ಕಾವೀಯ ಜೋತಾರ-ತಂದನ್ನ ತಾನ
ಕಾಲೀಗೆ ನೇತಾರ-ತಂದನ್ನ ತಾನ
ಬೆಲ್ಲ ಬೇವಿನ ಸೊಪ್ಪು-ತಂದನ್ನ ತಾನ
ಎಲ್ಲಿ ಮಡಗಲಿ ಶಿವನೆ-ತಂದನ್ನ ತಾನ
ವಲ್ಲೀಯ ಹೊದಿಸೇನು-ತಂದನ್ನ ತಾನ

ಮಲ್ಲಿಗೆ ಮುಡಿಸೇನು–ತಂದನ್ನ ತಾನ
ಕಾಣಿಕೆ ಇಟ್ಟೇನು–ತಂದನ್ನ ತಾನ
ಕೈಯು ನಾ ಮುಗಿದೇನು–ತಂದನ್ನ ತಾನ,

(ತೆರೆ)

ಪಾತ್ರಗಳು :

ನಾಣಿ
ಭೀಮ್ಯಾ
ಗೀತಾ
ಜೋಗತಿ
ಫೌಜದಾರ, ಪೊಲೀಸರು
ಹೆಂಗಸರು

## 1

[ಅನೇಕ ಹೆಣ್ಣುಧ್ವನಿಗಳ ನರಳುವಿಕೆಯೊಂದಿಗೆ ತೆರೆ ಸರಿಯುತ್ತದೆ. ಮೇಳವಾಗಿ ಹೂ ಹೂ ಹೂ ಎಂದು ಸಣ್ಣಗೆ ಸುರುವಾಗಿ, ಸ್ಪಷ್ಟ ವಾಗುತ್ತ, ಒಮ್ಮಿಂದೊಮ್ಮೆ ಉದ್ರೇಕಗೊಂಡ ಹೆಣ್ಣು ಧ್ವನಿಯೊಂದು ಚೀರಿ ಅಯ್ಯೋ ಬಿಡ ಸರ್ರ್ಯೋ ಗಂಡ್ಸಾದರ ಅಪ್ಪಾ ಅಂತೇನು, ಹೆಂಗ ಸಾದರ ಅವ್ವಾ ಅಂತೇನು ಬಿಡಸರ್ರ್ಯೋ–ಎಂದು ಆಳಲಾರಂಭಿಸಿದಾಗಲೂ ಉಳಿದ ಧ್ವನಿ ಹಿಮ್ಮೇಳದಂತೆ ಮೊದಲಿನ ಸ್ವರದಲ್ಲಿಯೇ ಮುಂದುವರಿಯುತ್ತದೆ. ರಂಗದ ಮುಂಭಾಗ ದಲ್ಲಿ, ಸ್ಟೂಲಿನ ಮೇಲೆ ಭೀಮ್ಯಾ ಮೊಳಕಾಲಿಗೆ ಕೈ ಸುತ್ತಿ ನಿಶ್ಚಿಂತವಾಗಿ ಕೂತಿದ್ದಾನೆ. ರಂಗದ ಹಿಂಭಾಗದ ಆಳದಲ್ಲಿ ಅಸ್ಪಷ್ಟ ಕತ್ತಲೆಯಿದ್ದು ಆ ಮೂಲಕ ರಂಗ ಇಬ್ಬಾಗವಾದಂತೆ ಕಾಣಿಸ ಬೇಕು. ಆ ಭಾಗದಲ್ಲಿಯೇ ಅಸ್ಪಷ್ಟವಾದ ಸ್ತ್ರೀಯರ ನೆರಳಿನ ಚಲನವಲನ ಕಾಣಿಸುತ್ತಿದೆ. ಕೆಲಹೊತ್ತು ಹೀಗೇ ನಡೆದ ಬಳಿಕ ಬಾಗಿಲು ಹಾಕಿದ ಸಪ್ಪಳವಾಗಿ ನಾಣಿ, ತಲೆಕೆದರಿ, ಅಸ್ತವ್ಯಸ್ತ ಉಡುಪಿನಲ್ಲಿ ನಿಧಾನವಾಗಿ ಬಂದು ಭೀಮ್ಯಾನ ಎದುರಿಗಿರುವ ಕುರ್ಚಿಯಲ್ಲಿ ಉಸ್ಸೆಂದು ಕುಕ್ಕರಿಸಿ ಹೊಕ್ಕಳಿನ ಮೇಲೆ ಕೈಯಾಡಿಸಿಕೊಳ್ಳುತ್ತಾನೆ]

ನಾಣಿ : ಈ ಹೊಕ್ಕಳೊಂದು ಎಷ್ಟು ನೋಯತದ ಅಂದರ, ಇದ ನನ್ನ ಹೊಕ್ಕಳಂತ ನಂಬಾಕಾಗೋದಿಲ್ಲ.

ಭೀಮ್ಯಾ : ವಯಸ್ಸ ಹ್ವಾಧಾಂಗ–ಹ್ವಾಧಾಂಗ ನನಗ ಈಗೀಗ ನೆನಪಾ ಗಾಕ ಹತ್ತೇತಿ – ನೀವ್ ಏರೋ ಕುದುರಿ ಸಿಕ್ಕೀತೇನಾ – ಅಂತ ನಿಮಗ ಬ್ಯಾಸರ ಬರಾಣೆಲ್ರಿ ?

ನಾಣಿ : ಬರದೇನೋ ? ಬ್ಯಾಸರ್ಯಾಕ ಬರೋದಿಲ್ಲಂದಿ ?

ಭೀಮ್ಯಾ : ಇಪ್ಪ ತಲೀ ಕೆಡಿಸಿಕೊಳ್ತೀರಿ – ತಿನ್ನೂದ ಬ್ಯಾರೇ ಅಲ್ಲಾ, ವಿಚಾರ ಮಾಡೂದ ಬ್ಯಾರೇ ಅಲ್ಲಾ : ಒಮ್ಮೊಮ್ಮೆ ತಲೀಲೆ ತಿಂದ ಬಾಯಿಲೆ ವಿಚಾರ ಮಾಡತೇರಿ, ಅದಕ್ಕ ಬ್ಯಾಸರ ಬರಾಣಲ್ಲೇನ್ರಿ ಅನ್ನಿ.

ನಾಣಿ : ಒರತ ಒರತ ನೀ ದುಃಶ್ಚಟಥಾಂಗ ಕಾಣತಿ, ಹಸನ ಅಂಗಿ ಹಾಕೊಬಾರದ ?

ಭೀಮ್ಯಾ : ತಗೊ. ಕೇಳಿ ನೋಡಿದರ ಒಂದು ಮಾತ, ನನಗ ನಿಮಗ ಎಷ್ಟ ಫರಕ ಮಾಡತೈತಿ ನೋಡ್ರಿ. ಸಾಹೇಬರ ನನ್ನ ಎಂದ ಬಿಡತೇರಿ ? ಒಮ್ಮೆ ಹೇಳಿ ಬಿಡ್ರಿ.

ನಾಣಿ : ಅವ ಸಿಕ್ಕಮ್ಯಾಲ ಒಂದು ತಾಸ ಇರಬ್ಯಾಡಂತ ಹೇಳಿಲ್ಲಾ ನಿನಗ ? [ರಂಗದ ಎಡಬದಿಗೆ ಗೀತಾ ಬಂದು ಬಾಗಿಲು ಬಡಿದಂತೆ ಕೈ ಮಾಡಿದಾಗ ಸಪ್ಪಳವಾಗುತ್ತದೆ. ಇಬ್ಬರೂ ಕ್ರಿಯಾಶೀಲರಾಗಿ] ಬಂದಳಂತ ಕಾಣತದ, ಹೋಗು, ಮುರೀಗಿ ನಿಂತಕೋ, ಹೊತ್ತ ನೋಡಿ ಮುಖಾ ಹಾಕ.

ಭೀಮ್ಯಾ : [ಎದ್ದು ಮೈಮುರಿದು]
ಈಗ ಹೋಗಿ ಜೋಗತೀರನರೇ ಕರಕೊಂಬರಲೇನ್ರಿ?

ನಾಣಿ : ಮತ್ತ ಯಾವ ಜೋಗತೀನೊ? ಸುಮ್ಮನ ಹೋಗಬಾರದ?

ಭೀಮ್ಯಾ : [ಹೋಗುತ್ತ]
ನಾ ಕರಕೊಂಬರಾವ ನೋಡ್ರಿ. [ಭೀಮ್ಯಾ ಮಾಯವಾಗುತ್ತಲೂ ನಾಣಿ ಹೋಗಿ ಅವಳೆದುರು ನಿಂತು ಬಾಗಿಲು ತೆಗೆದಂತೆ ನಟಿಸುವನು. ಗೀತಾ ಒಳಬಂದು ಅವಸರದಿಂದ ಬಾಗಿಲು ಹಾಕಿದಂತೆ ಮಾಡಿ ಬೆವರು ಒರೆಸಿಕೊಳ್ಳುತ್ತ]

ಗೀತಾ : ಏನ ಬಿಸಲೂ, ಏನ ಬಿಸಲೂ, ಏನ ಬಿಸಲೂ ಅಂತೀನಿ—

ನಾಣಿ : ಹೌದ, ಹೌದ : ಹೊರಗೆ ನೋಡಬಾರದ ? ಜಗತ್ತೆಲ್ಲಾ

ಬಿಸಲ ಗುದರ್‍ಯಾಗಿ ಕತಕತ ಕುದ್ದಾಂಗ. ನನ್ನಂಥಾ ಸ್ಪೋರ್ಟ್ಸ್ ಮನ ಬಿಡು, ಬಸ್ಸಿಗಿ ಕೂಡಾ ಸಿಗಾಣಿಲ್ಲ.

ಗೀತಾ : ನಿನ್ನ ಸಲುವಾಗಿ. ಏನೆಲ್ಲಾ ಸುಳ್ಳಸುಳ್ಳ ಒಂದಕ ಒಂಬತ್ತ ಹೇಳಿ, ನಮ್ಮತ್ತಿ–ಅದೊಂದು ಎಂದ ಬೆಂಕೀ ಕಾಣತದನೋ [ಅಣಕಿಸುತ್ತ] ಗೀತಾ ಜೋಡೀ ಚಿತ್ರಾನ ಕರಕೊಂಡೋಗು–ಅಂದ್ಲು. ಹಿಂಗ್ಹೋಗಿ ಹಾಂಗ್ಬರಾಕ ಹುಡಿಗೀಸ್ಯಾಕ ಸಾಲೀ ಬಿಡಸ್ತೇರೆಂತ ಅಂದ. ಓಡಿ ಓಡಿ ಬಂದೆ.

ನಾಣಿ : ನನ್ನ ಕುದರೀಮ್ಯಾಲ ಇಷ್ಟ್ಯಾಕ ದುಡ್ಡು ಕಟ್ಟಾಕ ಹೋಗಿದ್ದೆ? ಘಕ್ಕನ ಕಾಲಮುರದರ? ಏನ ಮಾಡತಿ?

ಗೀತಾ : ನಮಗ ದುಃಖಾದರ ನಿಮಗ ಭಾಳ ಸಂತೋಷೇನೋ.

ನಾಣಿ : ಸಣ್ಣದೊಂಡ ನಗಚೇರಿಕಿ ಸುದ್ದಾ ತಡ್ಯಾಣಿಲ್ಲಲ್ಲ ನೀನು?

ಗೀತಾ : ಕಣ್ಣಾಗ ನೀರ್‍ಬರ್‍ತಾವೇನ ನೋಡೂಣ–ಅಂತ ಬೆರಳ ಚುಚ್ಚಿ ಚೇಷ್ಟಾ ಮಾಡಂತದ ಏನೊ.

ನಾಣಿ : ಮಾರಾಯಳ ನವೋ ಅಂತೇನಾಯ್ತು? ಕಿವಿಗೆ ಹಳ್ಳಾ ಹಚ್ಚಿ ಕೊಳ್ಲಾ ? ದೀಡ ನಮಸ್ಕಾರ ಹಾಕಲ್ಯಾ? [ಮಾತು ಮುಗಿಯುತ್ತಿರುವಂತೆ ಸ್ತ್ರೀ ಧ್ವನಿಯೊಂದು ನರಳುತ್ತದೆ. ಗೀತಾ ಹೆದರಿ, ಥಟ್ಟನೆ ಹೋಗಿ ನಾಣಿಯ ರಟ್ಟೆ ಹಿಡಿದುಕೊಂಡು]

ಗೀತಾ : ಯಾರೋ ನರಳಿಧಾಂಗ ಕೇಳತದ, ಯಾರದು?

ನಾಣಿ : ಅದ ?

ಗೀತಾ : ಯಾರದು ?

ನಾಣಿ : ಪಕ್ಕದ ಮನ್ಯಾಗ ಒಬ್ಬ ಎಳೀ ಹುಡುಗ ಇದ್ದಾನ.

ಗೀತಾ : ಯಾರೋ ಹೆಂಗಸರು ನೆರಳಿಧಾಂಗಿತ್ತು.

ನಾಣಿ : ಅರಂದ ಈ ಮನಿ.

ಗೀತಾ : ಹೆಂಗಸರು ನೆರಳಿಧಾಂಗಿತ್ತಂದರ.

ನಾಣಿ : ಘನ ಚೆಲುವಾ. ಒಟ್ಟ ಮುಖಾ, ಚಿಗರ ಮೀಸಿ....

ಗೀತಾ : ಅಯ್ಯ ಹೆಂಗಸ ನೆರಳಿಧಾಂಗಿತ್ತಂದರ....

ನಾಣಿ : ಹೂ ಅನ್ನ, ಅದನ್ನ ಹೇಳತೇನೆ ಅದರಾಗ ಮುಗುಳನಗಿ ಕಲತ್ತಾನಂ: ಎಷ್ಟಂದರೂ ಎಳೀ ಹರೆ. ಮಂಗನ ಹುಳಿಮದಾ ತುಳುಕಿ ಗೊಬ್ಬೀ ತಳಾ ಕಾಣ್ಸಾಣೆಲ್ಲ. ಯೋಳೆಂಟ ಮಂದಿ ಹೆಂತಾ ನೋಡಿದರ ನದರ ಜಾರಬೇಕಂಥಾ ಹುಡಿಗೇರ್ನ ಎಲ್ಲೆಲ್ಲಿವರೋ, ಪೋಲೀಸು ಪೋಜುದಾರ ಹೆಂಡರನ್ನೆಲ್ಲಾ ಓಡಿಸಿಕೊಂಡ ಬಂದ ಇಟ್ಟಕೊಂಡಾನ. ಅವರ ಇಲ್ಲಿ ಬಂದ ಕೂಡ್ಲೆ ಕಣ್ಣ ಕಳಕೊಳ್ತಾರ. ಇನ್ನ ಮುಗೀತ ನಿಮ್ಮ ಮನೀಗಿ ಹೋಗರೆಂದರ ನೀ ಅಂದಾಂಗ ಆಡಿಕೋತ ಇಲ್ಲೇ ಇರತೇವಂತಾರ ಅವರ. ಅವ ಕೊಡದಾಗ ಮುಖ ನೋಡಿ ತಲೀ ಹಿಕ್ಕೋಬೇಕಂದರ, ಇವರ ಅವನ ಸುತ್ತ ಮುತ್ತು ನಿಂತ ಅತ್ತಗೋತ, ಇಲ್ಲಾ ನಕ್ಕೋತ ಅದನ್ನಳಿ ಗ್ಯಾಡಸ್ತಾರ. ಆದಕ್ಕ ಅವರ ಹಗಲ ಸಂಜೀತನಕಾ ನಗತಾರ. ರಾತ್ರಿ ಬೆಳತನಕಾ ಅಳತಾರ. ತಲೀ ಚಿಟ್ಟ ಹಿಡದೈತಿ ನಂದಂತೂ.

ಗೀತಾ : ಪೋಲೀಸರಿಗಿ ಕಂಪ್ಲೇಟ ಯಾಕ ಕೊಡಬಾರದು ?

ನಾಣಿ : ನಾಲ್ಕೈದು ಸಲ ಹೋಗಿದ್ನೆ. ಹ್ವಾದಾಗೊಮ್ಮಿ ಆಫೀಸಿನ್ಯಾಗ ನಿನ್ನ ಗಂಡ ಕುಂತಿರತಾನ ಏನ್ಹೇಳ್ಲಿ ?

ಗೀತಾ : ಅಕ್ಕಪಕ್ಕದವರಿಗಿ ತ್ರಾಸ ಆಗತದ, ಹಿಂಗ ಮಾಡಬ್ಯಾಡ್ರಂತ ಹೇಳಬೇಕು.

ನಾಣಿ : ಅದೂ ಆಯ್ತು. ಒಂದಿನ ಸಿಟ್ಟಿಗೆದ್ದ, ಅಜೂಬಾಜೂ ನೋಡಿ ಗುದಮುರಿಗಿ ಹಾಕಬಾರದ ? ತಲೀ ಎಲ್ಲಿಟ್ಟಿದೇರೋಂತ ಟಬರಲ್ ಹೋಗಿ ನೋಡತೇನು, ಒಬ್ಬರಿಗೂ ತಲೀ ಇಲ್ಲ: ಯೋಳೆಂಟೂ ಮಂದಿ ಸಾಲಕ ನಿಂತ ಸೀರಿ

ಎತ್ತೆತ್ತಿ ನಿಂತಾರಲಾ ಅವರವರ ತಲಿ ಅವರವರ ತೋಡ್ಯಾಗ ನಗತಿದ್ದವು.

ಗೀತಾ : [ಮತ್ತೆ ತಬ್ಬಿಕೊಂಡು]
ಅವಯ್ಯ ಈ ಮನಿ ಯಾಕ ಬಿಡವೊಲ್ಲಿ ?

ನಾಣಿ : ನೀ ಸಿಗೋತನಕ ಇರಲೆಂತ ಸುಮ್ಮಕಿದ್ದೆ.

ಗೀತಾ : ಖರೇನ ?

ನಾಣಿ : ಖರೆ. ನೀ ನನಗ ಸಿಕ್ಕ ದಿನಾ ಈ ಮನ್ಯಾಗ ನಾ ಇರೋದಿಲ್ಲಂತ ಜೋತಿಷ್ಯ ಹೇಳ್ಯಾರ.

ಗೀತಾ : ಅದೆಲ್ಲಾ ಖರೆ. ಸರಕಾರದವರ ನನ್ನ ಗಂಡಗ ಏಳು ಗುಂಡಿನ ಪಿಸ್ತೂಲ ಕೊಟ್ಟಾರ.

ನಾಣಿ : ಅವೇನ ಕೊಲ್ಲತಾನ? ನೆಟ್ಟಗೊಂದ ತಗಣಿ ಒರದ ಗೊತ್ತಿಲ್ಲ.

ಗೀತಾ : ತಗಣೇಗಿ ಬಾಳ ಹೆದರತಾನ ಖರೆ, ಮನ್ಯಾಗಿದ್ದಾಗೆಲ್ಲ ಅದರ ಗುರಿ ನನ್ನ ಕಡೇನ ಮಾಡಿ ಇಟ್ಟಿರತಾನ.

ನಾಣಿ : ಚಿಂತಿ ಮಾಡಬ್ಯಾಡ, ಒಂದ ಒಳಗುಟ್ಟ ಹೇಳಿರತೇನ. ಯಾರ ಮುಂದ ಹೇಳಬ್ಯಾಡ. ಪೋಲೀಸ, ಪೋಜದಾರ ಇವ ರ್ಯಾರಿಗೂ ಗುರಿ ಹಿಡದ ಗೊತ್ತಿಲ್ಲ.

ಗೀತಾ : ಗೊತ್ತಿಲ್ಲಾ ?

ನಾಣಿ : ಗೊತ್ತಿಲ್ಲ. ಈ ಪಕ್ಕದ ಮನಿ ಹುಡುಗ ಇದ್ದಾನಲ್ಲ, ಪೋಜದಾರ ಹೆಂತೀನ ತಂದಾನ.

ಗೀತಾ : ಅವಯ್ಯಾ.

ನಾಣಿ : ಪೋಲೀಸರೆಲ್ಲಾ ಅವನ ತಲಾಸದಾಗ ಅದಾರ. ಅವ ಅಂತ ತಿಳಕೊಂಡ ಇಲ್ಲೀತನಕ ಹತ್ತ ಹದಿನೈದ ಮಂದಿನ; ಪಾಪ ಯಾರ್ಯಾರ್ನೋ ಕೊಂದು ಒಗದರು.

ಗೀತಾ : ಅವಯ್ಯಾ ನನಗಿಲ್ಲಿ ಅಂಜಿಕಿ ಬರ್ತದ. ನಾ ಹೋಗ್ತೇನೆ.

ನಾಣಿ : ಅಷ್ಟ್ಯಾಕ ಅವಸರಾ ಮಾಡ್ತೀನ ? ಓಡಿ ಬಂದೀದಿ, ದಣದ್ದಿ ಅಂತ ತಿಳಕೋ ನೋವ ಗೀವ ಆಗಿದ್ದರ ಹೇಳು ಬ್ಯಾಂಡೇಜ ಕಟ್ಟಿತ್ತೀನೆ. ನನಗ ನೀಕಟ್ಟು ನಿಮ್ಮ ಹಿತ್ತಲದಾಗ ಕದ್ದ ಓಡಾಡಿ ಕಾಲೇಷ್ಟ ನೋಯಿಶ್ತಾವ ಗೊತ್ತದನ ?

ಗೀತಾ : ಹಿತ್ತಲದಾಗ ?

ನಾಣಿ : ಹೂ. ದಿನಾ ಬಂದು ಸಿಳ್ಳ ಹೋಡೀತೇನ, ಕೇಳ್ಸಾಣಿಲ್ಲ?

ಗೀತಾ : ಇಲ್ಲಾ ಯೂ ಮಂಗ್ಗಲಾ ಹಚ್ಚಿದರೂ ನನ್ನ ಗಂಡ ಗೊರಕಿ ಹೊಡಿಯೂದೇ ಕೇಳತದ. ಅಬ್ಬಬ್ಬ. ಎಂಥಾ ಕೆಟ್ಟ ನಿದ್ದೇಂತಿ. ಮದಿವ್ಯಾದಾಗಿಂದ ಅವ ಎಚ್ಚರಿದ್ದಾಗ ಒಮ್ಮೆಯು ಅವನ್ನೋಡೇ ಇಲ್ಲಾನು.

ನಾಣಿ : ಮತ್ತ ರಾತ್ರಿ ಏನ್ಮಾಡ್ತಿ ?

ಗೀತಾ : ಇನ್ನೇನ್ಮಾಡ್ಲಿ ? ಅವರ ಗೊರಕಿ ಜೋಡಿ ಆಟಾ ಆಡಿ ಕೋತ ಮಲಗೋದು.

ನಾಣಿ : ನಾ, ಸಿಳ್ಳಹೊಡದ್ದ ಕೇಳಸಲಿಲ್ಲ ಅನ್ನಬಾರದ?

ಗೀತಾ : ಇಲ್ಲ.

ನಾಣಿ : ನಾ, ಸುಧಾ, ಸುಧಾ, ಸುಧಾ ಅಂತ, ನಾಗಿನ ಸಿನಿಮಾ ಧಾಟಿ ಹಚ್ಚಿ ನಾಕೈದ ಹಾಡಾ ಬರೆದ, ಹಿಂದ ಹಿತ್ತಲಾಗ ಹಾಡ ಕೋತ, ನಡನಡವ ಸಿಳ್ಳಹೊಡೆದ, ಪುಂಗಿ ಮ್ಯೂಸಿಕ ಕೊಟ್ಟು ಹಾಡತಿದ್ದೆ. ಕೇಳಿಸಲಿಲ್ಲಾ ?

ಗೀತಾ : ಸುಧಾ ?

ನಾಣಿ : ಸುಧಾ ಅಲ್ಲ, ಸುಧಾ ಸುಧಾ. ಈಗೊಂದು ಸ್ಯಾಂಪಲ ಹೇಳಲೇನು ? ಗುಡ ಐಡಿಯಾ— [ಎರಡೂ ಕೈ ಪುಂಗಿಯಂತೆ ಮಾಡಿ, ಗಲ್ಲ ಉಬ್ಬಿಸಿ, ನಾಗಿನ ಚಿತ್ರದ ಪುಂಗಿಯ ಧಾಟಿಯಲ್ಲಿ ಸುಧಾ ಸುಧಾ ಸುಧಾ, ಎಂದು ಹೇಳುತ್ತ, ಅವಳ ಮುಖದ ಸುತ್ತ ಅದು ಹಾವಿನ ಹೆಡೆಯೆಂಬಂತೆ ಸುತ್ತುವನು. ಅವಳು ಅವನ ಕೈ ತಿವಿದೀತೆಂದು

ಮುಖ ಅತ್ತಿತ್ತ ತಪ್ಪಿಸಿಕೊಳ್ಳುವಾಗ, ಅದು ಹಾವಿನ ಹೆಡಿಯಂತೇ ಚಲಿಸುವದು. ಅದನ್ನು ನೋಡಿ ಗೆಲುವಿನಿಂದ] ಹೆಂಗ ಬಂದಿ? ಹೆಂಗ ಬಂದಿ? ಕೇಳಿಸ್ತಿಲ್ಲ? ನನ್ನ ಮೈಗಿ ಸಿಂಬಿಸುಂತ್ತಿ ಏರ ಬೇಕನ್ನಸ್ತದಲ್ಲ?

ಗೀತಾ : ನನ್ಹೆಸರ ಸುಧಾ ಅಲ್ಲಾ ಅಂದೆ.

ನಾಣಿ : ಹಿಂಗ್ಯಾಕ ಮುಟ್ಟುವಾಟ ಆಡ್ತೀನ ಸುಧಾ? ಕಾಲೇಜ ಹಿಂದ ಹೊಂಡದ ಹತ್ತರ ನೀ ನಿಂತಾಗ, ನಾ ಹಿಂದಿಂದ ಬಂದ—ನೆಪಐತಿ? ನೀರಿನ್ಯಾಗ ನೋಡಿದ್ರು ಮೈ ತುಂಬ ಹೂ ಬೆಟ್ಟ ತೆರೆಕೊಂಡ ನಿಂತಿದ್ದಿ. ಕೆಟ್ಟಮುಳೀಗಾಳ್ಯಾಗ ಕ್ರಾಪ ಕೆಟ್ಟೈತೇನ ನೋಡಿಕೊಳ್ಳೋಣಂತ ಬಂದರ—ನನ್ನ ಬದಲಿ ನೀ ಕಂಡಿ—ನಾ ಸುಧಾ ಅಂತ ಕರೆದಾಗ ಏನಂದಿ ನೆನಪೈತಿ?

ಗೀತಾ : ಇಲ್ಲ.

ನಾಣಿ : ಯಾಕ ಸುಳ್ಳ ಹೇಳತೀಯೋ ಸುಧಾ—

ಗೀತಾ : ನನ್ನ ಹೆಸರು ಸುಧಾ ಅಲ್ಲಾ, ಅಂದೆ. [ನನ್ನ ಹೆಸರು ಗೀತಾ ಗೀತಾ ಗೀತಾ ಅವ್ವ ಅಪ್ಪಾ ಕರೆದದ್ದು ಗೀತಾ ಅಂತ ನನ್ನ ಗಂಡ ಮದವ್ಯಾಗ ಹೆಸರು ಹೇಳಿದ್ದು 'ಹಗ್ಗಲೆ ಬಡದರ ಮಗ್ಗದಾಗ ಬರತಾಳ ಗೀತಾ' ಅಂತ.

ನಾಣಿ : ಅವ್ವ ಅಪ್ಪಾ ಇಟ್ಟ ಹೆಸರ ಕರ್ಯಾಕ ನಾ ಏನ ಹಾಜರಿ ಬುಕ್ಕೇನೆ? ಮದಿವ್ಯಾದ ಮ್ಯಾಲ ಹುಟ್ಟೆಸರು ಬಿಟ್ಟು ಇನ್ನೊಂದು ಹೆಸರಿಡತಾರ ಗೊತ್ತದಿಲ್ಲೋ? ನಾ ಹೇಳಿದ್ದು ಈ ಹೆಸರು ಸುಧಾ ಅಂತ. ನಿನ್ನ ಗಂಡ ಇನ್ನೂ ಆ ಹಳೇ ಹೆಸರಿನಿಂದ ಕರೀತಾನಂತ ನಿನಗದ ಕೇಳ್ಸಣಿಲ್ಲ ಹೌದು? ಕೇಳಿಸಿದರೂ ಅವ್ವಾ ಅಪ್ಪಾ ಕರಧಾಂಗ ಕೇಳತದ: ನನಗೆ ನಿರಾಸೆ ತಡಕೊಳ್ಳಾಕ ಆಗಾಣಿಲ್ಲ. ಇನ್ನಷ್ಟ ಹೇಳತೆ

ನ್ನೋಡು. ನೀ ಈಗೊಂದ ಸರಳರೂಪ ಲೆಕ್ಕಾ ಕಲೀತೀ ಅಂತ ತಿಳಕೋ. ಅದರ ಸೂತ್ರ 'ಏನಂದರ : ಅಷ್ಟಕ್ಕ ಇಷ್ಟಾದರ ಇಷ್ಟಕ್ಕ ಎಷ್ಟ ? ಹಡದವರಿಗೆ ಮಗಳಾದರ ಗಂಡಗ ಏನಾದ್ಲು ಹೇಂತಿ. ಆದರಂತೆ. ಗಂಡಗ ಹೇಂತ್ಯಾದರ ಹಾದರಕೇನಾದ್ಲು? ಉತ್ತರ: ಸುಧಾ ನಾವೇ ಹಿಂಗ ಬ್ಯಾರೇ ಹೆಸರ ಇಟ್ಟಗೊಳ್ಳದಿದ್ದರ ಊರ ಮಂದಿಗೆಲ್ಲಾ ನಮ್ಮ ಗುಟ್ಟ ಗೊತ್ತ ಆಗಿ ಆಮ್ಯಾಲ ಏನ ಮಾಡ್ತೀ ಹೇಳು ? ಇದನ್ನ ತಿಳಿದ ನಾ ನಿನ್ನ ಬೆನ್ನ ಹತ್ತಿದ ಕೂಡ್ಲೆ ಹೆಸರ ಬದಲಿ ಇಟಗೊಂಡರ : ತಿಳಿತ ?

ಗೀತಾ : ನನ್ನ ಹೆಸರು ಸುಧಾ ಅಲ್ಲಾ ಅಂದೆ.

ನಾಣಿ : ಮತ್ತ ನನ್ನ ಹೆಸರೇನ ನಾಣೀ ಏನ ? ಸುಮ್ಮನ ಹೆಸರ ಇರೋದ್ಯಾಕ ? ಅನುಕೂಲಕ. ಈಗ ಸುಧಾ ಅಂತ ಕರದರ ಅನುಕೂಲಾಗತೈತಿ, ಅದನ್ನ ಕರೀತೇನೆ. ರೆಡಿ ? ಎಲ್ಲಿ ?—ಸುಧಾ ಅಂತ ಕರೀತೇನೆ, ಓ ಅನ್ನಬೇಕು ಹಾ ? ಸುಧಾ.... [ಗೀತಾ ನಗುತ್ತಾ ಓ ಎನ್ನಲು ತುಟಿ ತೆರೆಯುತ್ತಿರುವಂತೇ ಹೆಣ್ಣು ಧ್ವನಿಗಳು ಕಿರುಚಲಾರಂಭಿಸುತ್ತವೆ. ಗೀತಾ ಹೆದರಿ ಓಡ ಬೇಕೆಂದು ನಾಲ್ಕೈದು ಹೆಜ್ಜೆ ಇಟ್ಟಿರುವಷ್ಟರಲ್ಲೇ ಭೀಮ್ಯಾ ಬಾಗಿಲಲ್ಲಿ ನಿಂತಿರುತ್ತಾನೆ. ಗೀತಾ ಅವಸರದಿಂದ ಮತ್ತೆ ನಾಣಿಯನ್ನು ತಬ್ಬಿದಾಗ ಅವನು ಹೆದರಬ್ಯಾಡ ನಾ ಇಲ್ಲಾ ? ಹೆದರಬ್ಯಾಡ ಎಂದು ಸಂತೈಸುತ್ತ ಕುರ್ಚಿಯಲ್ಲಿ ಕುಳ್ಳಿರಿಸುತ್ತಾನೆ] ನೀ ಹಾಂಗೆಲ್ಲಾ ಓಡಿಹೋಗ ಲಾರೆ ಸುಧಾ.

ಭೀಮ್ಯಾ : [ಒಮ್ಮೆಲೆ ಬಾಗಿಲ ಬಳಿ ಕಾಣಿಸಿಕೊಂಡು]

ಸಾಹೇಬರ ಏನ್ರಿ ಕೆಲಸೈತ್ರಿ ?

ನಾಣಿ : ಈಗ ಬಂದ್ಯಾ ಮಗನ ? ಆ ರಂಡೇರ ಸತ್ತರೇನ ನೋಡ.

[ಭೀಮ್ಯಾ — ಒಳಗಡೆ ಹೋಗಿ ಮತ್ತ ಸ್ವಸ್ಥಾನಕ್ಕೆ ಬಂದು]

ಭೀಮ್ಯಾ : ಇನ್ನೂ ಹಾಂಗ ಅದಾರ್ರಿ. .

[ಎನ್ನುತ್ತ ಪಿಸ್ತೂಲ ಗುರಿ ಗೀತಾಳ ಕಡೆಗೇ ಹಿಡಿದು ಬಾಗಿಲಲ್ಲಿ ನಿಲ್ಲುತ್ತಾನೆ]

ನಾಣಿ : ನೀನು ಹಾಂಗೆಲ್ಲಾ ಓಡಿಹೋಗಲಾರೆ ಸಂಧಾ, ಯಾಕ ಗೊತ್ತಾ ?

ಗೀತಾ : ಊಹೂ.

ನಾಣಿ : ಎಷ್ಟು ಬೇಕ ನಿನಗ ಕಾರಣ. ಒಂದು : ನಾನೊಬ್ಬ ಮಹಾ ಆರ್ಟಿಸ್ಟು, ಆರ್ಟಿಸ್ಟು ಪ್ರಪಂಚದ ಕಚ್ಚಾ ವಾಸ್ತವಿಕತೆಯಲ್ಲಿ ಹೊಸ ಹೊಸ ಜೀವಚೇತನಗಳನ್ನು ಸೃಷ್ಟಿಸಿ ಅವುಗಳಿಗೆ ಹೊಸ ಹೆಸರು ಕೊಡತ್ತಾನೆ. ಪ್ರತಿಯಾಗಿ ಅವುಗಳಿಗೆ ತನ್ನ ಹೆಸರು ಕಲಿಸುತ್ತಾನೆ. ತಿಳೀತ ನಿನ್ನ ಬ್ರಹ್ಮನ್ನ ಬಿಟ್ಟ ನೀ ಹೆಂಗ ಹ್ವಾದೀ, ಎಲ್ಲಿ ಹ್ವಾದೀ, ಯಾಕ ಹ್ವಾದೀ ಹೇಳು ? ಎರಡು : ಭೀಮ್ಯಾ.

ಭೀಮ್ಯಾ : ಓರಿ ಸಾಹೇಬರ.

[ನಾಣಿ ಗೀತಾಳನ್ನು ನೋಡುತ್ತಲೇ ಕೈಒಡ್ಡು ವನು, ಭೀಮ್ಯಾ ಅವನ ಕೈಗೆ ಪಿಸ್ತೂಲು ಕೊಟ್ಟು ಸ್ವಸ್ಥಾನಕ್ಕೆ ಹೋಗುವನು]

ನಾಣಿ : ಪಿಸ್ತೂಲಂದರ ಇದ.
[ಅವಳಿಗೇ ಗುರಿ ಹಿಡಿದು] ಓಡಿ ಹೋಗ್ತೀ ?

ಗೀತಾ : ನಾಣಿ, ನಮಂಗಿಂಥಾ ಚೇಷ್ಟ್ಯಾಯೇನ ಸರಿ ಬರಾಣಿಲ್ಲಾ. ಚೆಂದ ಚೆಂದ ಪತ್ರಾ ಬರದ ಕರೀತಿ, ಹಿಂಗೆಲ್ಲಾ ಚುಚ್ಚಿ ಚುಚ್ಚಿ ಮೋಜಾ ನೋಡ್ತಿ.

ನಾಣಿ : ಅದನ್ನ ಬ್ಯಾರೇ ಥರಾ ಹೇಳಬೇಕಂದರ ಈ ಪಿಸ್ತೂಲ ನೀ ತಗೋ, ಹಿಡಕೋ. ಇದ ಅದರ ಕುದುರಿ.

[ಪಿಸ್ತೂಲು ಅವಳ ಕೈಗಿತ್ತು ಅವಳ ಬೆರಳನ್ನು

ಆದರ ಕುದೂರಿಯಲ್ಲಿ ಸೇರಿಸಿ ಆದರ ಗುರಿತೆಸ್ನ ಎದೆಗೆ ಹಿಡಿದುಕೊಂಡು]

ನೀ ನನ್ನ ಕೊಲ್ಲು, ಕುದುರಿ ಹಿಂದ ಜಗ್ಗಿದರಾಯ್ತು, ಗುಂಡ ಹಾರತದ, ಆಯ್ಯೋ ಅಂತ ಸತ್ತ ಬೀಳ್ತೀನ ನಾ. ಎಲ್ಲಿ ಹಾರಸು. [ಗೀತಾ ಪಿಸ್ತೂಲ ಚೆಲ್ಲುವಳು] ಯಾಕ ಕೊಲ್ಲ ಲಿಲ್ಲ ಹೇಳು ? ಯಾಕೆಂದರೇ ನೀ ಓಡಲಾರೆ. ಯಾಕ ಓಡಲಾರೆ ಹೇಳು ಯಾಕಂದರ ನೀನು ನನ್ನ ಸೃಷ್ಟಿ, ಸುಧಾ.

ಗೀತಾ : ನಾಣಿ ನಾ ಹೇಳಲಾ ? ಖರೇನ ನನಗೇನ ಇದ ಚೆಂದ ಕಾಣ್ಸಣಿಲ್ಲ, ತಗಿ. ಜೀವ ಪಣಕ್ಕ ಹಚ್ಚಿ ಬಂದರ ಏನ ಕೇನರ ಹೊಯ್ತ್ಯಾ ತಗೀತಿ. ಮಾಡಿಕೊಂಡ ಹೇಂತಿ ಸುದ್ದಾ ಹೇಳಿಧಾಂಗ ಕೇಳಾಣಿಲ್ಲ. ಶಾಣ್ಯಾ ಅದಿ, ಆ ಶನಿ ಹಾದಿ ಬಿಡಸ, ನಾವ ಹೋಗತೇವ. ಸುಧಾ ಅಂತ. ಹೊಸ ಹೆಸರಂತ, ಆಕಿ ಯಾವಾಕಿ ಸುಧಾ ಸುಧಾ ಅಂತ ಹಾಡ ಕಟ್ಟೇದಿ ಆಕಿ ಬೆನ್ನತ್ತಿ ಹೋಗು. ನಿನ್ನ ಸಹವಾಸ ಸಾಕ್ನ ಮಗ. ಆಷ್ಟಕ್ಕ ಮುಗೀತೇನ, ಅಂದರ ಮತ್ತ ತನ್ನ ಹೆಸರೂ ಬದಲ ಮಾಡಿದಾನಂತ.

ನಾಣಿ : ಮೋಸ ವಂಚನೆ ಇದರಾಗೇನದ ?

ಗೀತಾ : ಅಪ್ಪಾ ಅಂದ ಕಾಲ ಬೀಳತೇನಾಯ್ತು ? ಮೊದಲಿನ್ಹಾಂಗ ನೀ ನಾಣೀ ಆಗಿ ಗೀತಾ ಅಂತ ಬಾ, ಓ ಅಂದೇನ.

ನಾಣಿ : ಮಾರಾಯಳ ಒಂದ ಅಂದರ ಹತ್ತ ಕರಾರ ಹಾಕತಿ.

ಗೀತಾ : ತಣ್ಣಗ ಗೀತಾ ಅಂತಂದರ ಕರಾರ್‍ಯಾಕ ಬೇಕ ನಡುವ ? ಹುಳಾ ಕಡದ ಹಗಣಾ ಮಾಡತಿ, ಅದಕ್ಕ ಕಾಗದ, ಕರಾರ ಪತ್ರ ಬೇಕ,

ನಾಣಿ : ಹೋಗಲಿ, ನಾ ನೀ ಕೂಡಿ ಕಾಲೇಜ ಕಲ್ತದ್ದಾದರೂ ಹೌದ ?

ಗೀತಾ : ಅಲ್ಲಂದಿನಿ ?

ನಾಣಿ : ಕ್ಲಾಸಿನ್ಯಾಗ ಈ ಹುಡುಗನ್ನ ನಾಣಿ ಅಂತ ಕರದಿ ?

ಗೀತಾ : ಇಲ್ಲಾ ?

ನಾಣಿ : ಅಂದ ಸಿನಿಮಾಕ ಹೋಗಿದ್ವಿ. ಎಷ್ಟು ಮಜಾ, ನೋಡಿದರ ಗಲಗುಚ್ಚ ಆಗ್ತದಲ್ಲಾ, ಅಂದಾಗ ನಾಣೀ ಅಂದಿ ?

ಗೀತಾ : ಅನ್ನಲಿಲ್ಲಾ ?

ನಾಣಿ : ರಾಮದೇವ ಗಲ್ಲ್ಯಾಗ, ಟೂಥಪೇಷ್ಟು ಬ್ರುಶ್ಯು ಕೊಂಡಾಗ ನಾಣೀ ಅಂದಿ ?

ಗೀತಾ : ಹೂ, ಹೂ, ಹೂ. ಕ್ಲಾಸಿನ್ಯಾಗ ಹಿಂದಿನ ಬೆಂಚದಾಗ ಕುಂತ ಜಡೀ ಜಗ್ಗತ್ತಿದ್ದಾ, ನಾಣೀ ಅಂದೆ ಸುಮ್ಮನಾದ. ಸೀನೀಮಾ ನೋಡೋವಾಗ ಟೊಂಕದಾಗ ಕೈಯಾಡಸಾಕ ಬಂದ—ನಾಣೀ ಅಂದೆ ಕೈತೆಗೆದ. ಸಿಕ್ಕಸಿಕ್ಕಾಗ ಹಲ್ಲ ಕಿಸೀತಿದ್ದ, ತೊಳಕೊಂಡ ಕಿಸೀಬಾರದ ನಾಣೀ, ಅಂದೆ ಟೂಥ ಪೇಷ್ಟು ಬ್ರಶ್ಯು ಕೊಂಡ, ನಾ ಪತ್ರದಾಗ ಒಂದು ಸಲ ನಾಣೀ ಅಂದರ ಮೂರಸಲ ಉತ್ತರಾ ಕೊಡತಿದ್ದಾ. ಅಬ್ಬಬ್ಬ ಈ ಕೂಡೋಣ ಬಾ. ಕೂಡಸೋಣ ಬಾ. ಸಾಕ ನನಗ, ಪತ್ರದಾಗೆಲ್ಲ ಗೀತಾ ಗೀತಾ ಅಂತ ಹಲಬತಿದ್ದಿ. ನೀ ಒಮ್ಮೆ ಕರದರ ರಾತ್ರಿ ಕನಸಿನಾಗ ಓ ಓ ಓ ಅಂತ ಊಟ್ಟಸೀರಿ ಉಂಗುಟಕ ಸಿಕ್ಕ ಹರದರೂ ಖಬರಿಲ್ಲದ ಕುಣಿತೀದ್ದೆ ಗೊತ್ತಾ ? ಬೆಳಗ್ಗಿ ಎದ್ದ ನೋಡಿದರ ಜಗತ್ತಿನ ತುಂಬ ನನ್ನ ಬಿಟ್ಟ ಉಳಿದವರೆಲ್ಲಾ ಗಂಡರ ಆಗಿ, ರೋಮ ರೋಮಲಾ ಗವೀ ಆಗಿ, ಗವಿಗೊಬ್ಬೊಬ್ಬ ಬ್ರಹ್ಮಚಾರಿ ಕುಂತ ನನಗಾಗೆ ತಪಸ್ಸ ಮಾಡಿಧಾಂಗ ಅನ್ನಸ್ತಿತ್ತು. ನಾಣೀ ಅಂತ ಒಬ್ಬನ ಕರದರ ಎಲ್ಲಾರೂ ಓ ಅಂತಿದ್ದರು........

ನಾಣಿ : ಸುಳ್ಳು.

ಗೀತಾ : ಏನ್ಸ್ಸಳ್ಸ್ಸ ?

ನಾಣಿ : ಆ ಬ್ರಹ್ಮಚಾರಿಗೇ ನೀ ನಾಣೀ ಅಂದದ್ದು ಸುಳ್ಳು.

ಗೀತಾ : ಮತ್ತೇನ ಏ ಅಂದೆ ?

ನಾಣಿ : ಊಹೂ, ನಕಾರದಿಂದ ಸುರುವಾಗಿ ಎರಡನೇ ಅಕ್ಷರಕ ಮುಗೀತದ–ಹೇಳ್ನೋಡೋಣ.

ಗೀತಾ : [ನಗುತ್ತ] ನಮ ನಾಮ ನಕ ನಳ.

ನಾಣಿ : ಊಹೂ. ಮತ್ತೆ ನಕಾರದೊಳಗ ಮುಗೀತದ.

ಗೀತಾ : ನಾ ನೀನೀ ನುನೂ ನೇನೇ.

ನಾಣಿ : ಊಹೂ ನಾ ದಿಂದ ಸುರುವಾಗಿ ನೂ ದಾಗ ಮುಗೀತದನ.

ಗೀತಾ : ನಾ ನಾನೂ ನಾನೂ ?

ನಾಣಿ : ಊಹೂ, ನಾ ದಿಂದ ಸುರುವಾಗಿ ನು ದಾಗ ಮುಗೀತದನ.

ಗೀತಾ : ನಾ ನನಾ ನಾನೂ ?

ನಾಣಿ : ಹಾ ನೋಡ ನನ್ನ ಸುಧಾ ಸುಧಾ ಸುಧಾ. ನನ್ಸುಧಾ, ಏನ್ಚಂದ ಹೇಳತಿ ? ಒಂದ ಸಲ ನಾನೂ ಅಂತ ಕರೀನ ಸುಧಾ.

ಗೀತಾ : ನಾನೂ.

[ಅವಳ ಬಾಯಿ ತೆರೆದು ನಗುತ್ತ ಧ್ವನಿ ಹೊರಡಿಸುವಷ್ಟರಲ್ಲಿ ಧ್ವನಿಗಳು ಕರುಚಲಾರಂಭಿಸುತ್ತವೆ. ನಾಣಿ ತಲೆ ತಲೆ ಚಚ್ಚಿಕೊಂಡು]

ನಾಣಿ : ಏ ಭೀಮ್ಯಾ.

ಭೀಮ್ಯಾ : ಬನ್ರಿ ಧಣೇರ.

ನಾಣಿ : ಹೋಗಿ ಆ ರಂಡೇರ್ನ ಗುಂಡ ಹಾಕಿ ಕೊಂದಬಾರೋ. ಯಾರಾದರೂ ಯಾಕಂದರ, ಸರಕಾರದ ಹೆಸರ್ಹೇಳು ಹೋಗು, ತೊಗೋ ಈ ಪಿಸ್ತೂಲ.

[ನಾಣಿ ಎಸೆದ ಪಿಸ್ತೂಲನ್ನು ಭೀಮ್ಯಾ ಹಿಡಿದು ಕೊಂಡು ಒಳಗೆ ಹೋಗುವನು.]

ಈ ರಂಡೇರೊಂದ ಎಂದ ಸಾಯತಾರೋ, ಯಾಕೊ ? ಹಂಗ ಬಂದಿ ?

[ಭೀಮ್ಯಾ ಹೊರಬಂದು ಸ್ವಸ್ಥಾನಕ್ಕೆ ಹೋಗುತ್ತ]

ಭೀಮ್ಯಾ : ಕೊಲ್ಲಬೇಕಂದರ ಅವರ ನಡುವ ಆ ಹುಡುಗ ಕುಂತಾನ್ರಿ. ಎಲ್ಲರೆ ಗುರಿತಪ್ಪಿ ಅವಗ ತಾಗೀತ ಅಂತೇನ್ನಾ.

ಗೀತಾ : ನಾಣೀ, ಬಂದದಕ್ಕ ಚಂದ ಹೂವ ಏರಿಸಿದಿ, ನಾ ಹೋಗ ತೇನಿನ್ನ. ನಿನಗ ಗೊತ್ತದ. ಆದರೂ ನೆನಪಿರಲೆಂತ ಹೇಳಿರ ತೇನ — ನನ್ನ ಗಂಡಗ ಸರಕಾರದವರು ಹೊಸದಾಗಿ ಏಳ ಗುಂಡಿನ ಪಿಸ್ತೂಲ ಕೊಟ್ಟಾರ. [ಎದ್ದು ಹೊರಡುವಳು]

ಭೀಮ್ಯಾ : ಸಾಹೇಬರ ಹೊರಗ ಪೋಲೀಸರ ನಿಂತಾರ್ರೀ....

ನಾಣಿ : ಪೋಲೀಸರಾ ?

ಗೀತಾ : ಪೋಲೀಸರಾ ?

[ನಡುಗುತ್ತಾ ಗೀತಾ ಅಲ್ಲೆ ನಿಲ್ಲುವಳು]

ನಾಣಿ : ಅವ ಹೆಂತಾವದಾನೋ ?

ಭೀಮ್ಯಾ : ಕ್ವಾರಿಮೀಸಿ, ಲಂಡಚಣ್ಣಾ, ಟೊಂಕದಾಗ ಯೋಳಗುಂಡಿನ ಪಿಸ್ತೂಲೈತಿ. ಎರಡೂ ಕೈಲೆ ಮೂಗ ತಿಕ್ಕೋಂತ ಸುಂಬಳ ಒರಿಸಿಕೊಳ್ಳಾಕ ಹತ್ಯಾನ್ರಿ.

ಗೀತಾ : [ಅಳುತ್ತ ಕುರ್ಚಿಯಲ್ಲಿ ಕೂತು]
ಅಯ್ಯಯ್ಯೋ ಇನ್ಹೆಂಗ ಮಾಡ್ಲಿ ? ಅವರ ನನ್ನ ಯಜ ಮಾನ್ರು. ಬರಬಾರದ ಬಂದ ಶಗಣೀ ತಿನ್ನೂ ಕಾರಭಾರ ಆಯ್ತು ಎವ್ವಾ.

ನಾಣಿ : ನಾ ಇರೋತನಕ ನೀ ಯಾಕಳತಿ? ಸುಮ್ಕಿರ. ನಾನ್ಯಾನ ಹಿಡ್ಯಾಕ ಓಡ್ಯಾಡತಾರ ಅವರ.

ಗೀತಾ : ಯಾ ನಾನ್ಯಾ ?

ನಾಣಿ : ಆದ, ಆ ಪಕ್ಕದ ಮನೀ ಹುಡುಗ. ಪೋಲೀಸ ಪೋಜ ದಾರ. ಹೆಂಡರನ್ನೆಲ್ಲಾ ಓಡಿಸಿಕೊಂಡ ಬಂದಾನಂತ ಹೇಳ್ಳಿಲ್ಲ?

ಗೀತಾ : ಅವನ್ಯಾಕ ಪೋಲೀಸರಿಗಿ ಹಿಡಕೊಡವುಲ್ಲಿ?

ನಾಣಿ : ನೀ ಬ್ಯಾರಿ ಇಲ್ಲಿ ಬಂದೀದಿ. ಹೆಂಗ ಹೋಗಿ ಹೇಳ್ಲೆ?

ಗೀತಾ : ಹಂತಾವನ ಹೆಸರ ಬೇಕಾತ ನಿನಗ ?

ನಾಣಿ : ನಾ ಹೇಳಿಧಾಂಗ ನೀ ಸುಧಾ ಆಗಿದ್ದರ ಎಷ್ಟ ಸರಳ ಆಗ್ತೀ ತ್ತೀಗ ! ರೋಬಾರೋಬ ಅವನ ಮುಂದ ಹಾದಹೋಗಿ ದ್ದರೂ ಗುರತ ಹಿಡೀತಿರಲಿಲ್ಲ.

ಗೀತಾ : ನಾ ಹೆಂಗ ಪಾರಾಗಲಿ ?

ನಾಣಿ : ಎಷ್ಟ ಹೊತ್ತ ನಿಂತಾನ? ಕಾಲಸೋತವಳ್ಯಾಲ ತಾನ ಹೋಗತಾನ.

ಗೀತಾ : ತಡಾಮಾಡಿ ಅತ್ತಿಗೇನಂತ್ತರಾ ಹೇಳ್ಳಿ ?

ನಾಣಿ : ಏನಾರ ಕವನ ಕಟ್ಟಬಹುದಾ ?

ಗೀತಾ : ಅಯ್ಯಯ್ಯೋ ಅತ್ತೀ ಉಗುಳ ದಾಟಿಬನ್ನೇ ಎವ್ವಾ.

ನಾಣಿ : ಅಳೋವಾಗ ಎಷ್ಟ ಚಂದ ಕಾಣತೀನ ಸುಧಾ.

ಗೀತಾ : ಹೌದೌದ, ನಾವಳೋವಾಗ ನಿನಗ ಚಂದ ಕಾಣ್ಸೋದು.

ನಾಣಿ : ಕಣ್ಣೀರಿದ್ದರ ಭಾಳ ಅನುಕೂಲ, ನಿನಗೊತ್ತಿಲ್ಲ. ತುಂಬದ ಸರೋವರಧಾಂಗ ಅಷ್ಟ ದೂರಿಂದ ನೋಡಿದರೂ ಪ್ರತಿ ಬಿಂಬ ಕಾಣತದ. ನಾ ನಕ್ಕರ ಅವನೂ ನಗತಾನ. ನಾ ನಾನೂ ಅಂತ ಕರದರೆ ಅವನೂ ನಾನೂ ಅಂತ ಕರೀತಾನ. ಎಲ್ಲಾ ಡಬ್ಬಲ. ನಿನ್ನ ಮುಂದಂತೆ ಹೇಳತೇನೆ. ದಯ್ಮಾ ಮಾಡಿ ಇನ್ಯಾರ ಮುಂದ ಹೇಳಬ್ಯಾಡ, ಸಣ್ಣದಿರತ ನಾನಾ,

ಅವಾ ಸಾಲೀತಪ್ಪಿಸಿ ಹೋಳಿಗಿ ಯಾರಿಲ್ದಲ್ಲಿ ಇಸ್ಕ್ಯಾಡಾಕ ಹೋಗಿ, ತಿಳೀತಿಲ್ಲ ? ಎಷ್ಟ ಮಜಾ ಮಾಡಿತಿದ್ದುವಂತಿ ? ಒಂದಿನಾ ಹಲ್ಕಟ್ಟ ನನ್ನ ಗಲ್ಲಾ ಕಡದಿದ್ದಾ.

ಗೀತಾ : ಗಲ್ಲಾ.

ನಾಣಿ : ಹಾಂ ಗಲ್ಲಾ [ತೋರಿಸಿ] ಇಲ್ಲೆ ದಾಡೀ ಮಾಡ್ಕೋವಾಗ ಈಗಲೂ ಅಲ್ಲಿ ನೋಯತದ. ಕಡದಿದ್ದಾ ಏನಾಗೆತಲೇ ಗೌಡ ಗಲ್ಲಕ? ಅಂತ ಮಾಸ್ತರ ಜಬರಿಸಿದರು. ಎಡವಿಬಿದ್ದ ಕಟಿಗಿ ಚುಚ್ಚೇತಿರಿ ಮಾಸ್ತರ ಅಂತೇಳಿ ಪಾರಾಗಬೇಕಾದರ ರಗಡ ಗಮ್ಮಾತ. ನಾ ನಾನ್ಯಾನ ಹೆಸರ ಹೇಳತೇನಂತ ಅವ ತಿಳಕೊಂಡಿದ್ದಾ. ನಾ ಹೇಳಿಲ್ಲಾ. ಅವಗ ಒಳ್ಳೆ ಖುಷಿ ಆಗಿ ಮ್ಯಾಲಿಂದ ಮ್ಯಾಲ ಹೋಳೀಗಿ ಜಳಕಕ್ಕ ಕರಕೊಂಡೋಗಿ ಮಜಾ ಮಾಡತಿದ್ದ.

ಗೀತಾ : ಹೂ ಪುರಾ ತಿಳೀತೀಗ. ಈಗೂ ಕರಕೊಂಡ ಹೋಗ ತಾನಿಲ್ಲೊ ?

ನಾಣಿ : ಆ ಮ್ಯಾಲ ಮಖಲ್ಕೀ ಪರೀಕ್ಷೆ ಆಗಿ ಅಗಲಿದ ಮ್ಯಾಲ ಅವಾ ನಾನು ಕೂಡೇ ಇಲ್ಲ.

ಗೀತಾ : ಇಲ್ಲೇ ಪಕ್ಕದ ಮನ್ಯಾಗ ಇದ್ದಾನಂತೀ ಕೂಡಿಲ್ಲಾ ?

ನಾಣಿ : ಆ ರಂಡೇರ ಅವನ್ನ ಬಿಡಾಣಲ್ಲ ಹುಚ್ಚ. ನೋಡಿದಿಲ್ಲೋೀ, ಧೋೀ ಧೋೀ ಜೋಗ ದಬದಬ ಹಾಂಗ ಬೋರ್‍ಯಾಡ ತಾರ.

ಗೀತಾ : ಅವ ನಿನ್ನ ಗೆಣ್ಯಾ ಹೌದಲ್ಲ ?

ಭೀಮ್ಯಾ : ಗೆಣ್ಯಾರ ಅಂದರ ಲಂಗೋಟೀ ಗೆಣೇತಾನ್ರಿ ಮತ್ತ, ನಾ ಸ್ವಥಾ ನೋಡಿದೇನಲ್ಲಾ : ಒಂದರಾಗ ಯಾಡ್ಡಿದ್ದಾಂಗ ಇದ್ದರ ಬಿಡ್ರಿ. ಇಬ್ಬರೂ ಒಂದ ಬಾಯಲೆ ಉಂಡ ಒಂದು ಮುಕಳೀಲೆ ಹೇತವರಂದರ.

ಗೀತಾ : ನೀನು ಇವರ ಜೋಡಿ ಈಸ್ಯಾಡ್ಯಾಕ ಹೋಗತಿದ್ದಿ ?

ಭೀಮ್ಯಾ : ಯಾವಾಗರ ಒಮ್ಮೊಮ್ಮಿ. ಇಬ್ಬರೂ ಆಗಲಿದ ಮ್ಯಾಲ ನನಗ ಈಸ ಕಲಿಸಬೇಕಂತ ನಮ್ಮ ಸಾಹೇಬರ ರಗಡ ಖಟ ಪಟಿ ಮಾಡಿದರ ಖರೆ, ನನ್ನ ಕೈಯ ಕೋಳ್ಳಲಿಲ್ರಿ. ಒಮ್ಮೊಮ್ಮಿ ಮರತ ನನಗ ನಾನೂ ಅಂತ ಕರೀತಾರ್ರಿ.

ನಾಣಿ : ಆ ಧಡ್ಡ ನನಮಗನ ಮಾತೇನ ಕೇಳ್ತೀನ ?

ಗೀತಾ : ತಾತ್ಪರ್ಯ, ನಾ ನಿನಗ ನಾನೂ ಅನ್ನಬೇಕ ಹೌದಲ್ಲೊ ?

ನಾಣಿ : ಹೂಂ ಹೂಂ..

ಗೀತಾ : ನೀ ನನಗ ಸುಧಾ ಅಂತಿ.

ನಾಣಿ : ಹೂ ಹೂ.

ಗೀತಾ : ಆ ಮ್ಯಾಲ ನೀ ನನಗ ನಾನೂ ಅಂತೀ.

ನಾಣಿ : ಹೌದೌದ. ಹೌದಂದೇನ ಹುಡುಗೀ.

ಗೀತಾ : ಆ ಮ್ಯಾಲ ನಾನೂ ನಾನು, ನೀನು ನಾನು.

ನಾಣಿ : ಆಹಾ ಸುಧಾ ಸುಧಾ.

[ಗೆಲುವಿನಿಂದ ಎದೆ ಮುಟ್ಟಿಕೊಂಡು ರಂಗದ ತುಂಬ ಓಡಿಯಾಡಿ ಭೀಮ್ಯಾನ ಹತ್ತಿರ ಬಂದು]

ಭೀಮ್ಯಾ ಭೀಮ್ಯಾ ಕೇಳಿದೇನೋ ಮಗನ ? ನಾನ ಹೇಳಿದ್ದಿಲ್ಲಾ. ಈಕೀ ಓಳಗ ಕನಿಷ್ಟ ಯೋಳ ಕೊಪ್ಪರಿಗಿ ಹೊನ್ನ ತುಂಬೇತಿ ಹೆಡಿ ಆಡಿಸಿ ಅದನ್ನ ಕಾಯುತಾಳಂತ.

ಭೀಮ್ಯಾ : ಸಾಬರ, ಕೊಪ್ಪರಿಗಿ ಮುಚ್ಚಳಾ ಸಾವಕಾಶ ತಗೀರಿ. ಆ ಬಿಕನೇಸಿ ಪೋಲೀಸೊಬ್ಬ ಇಲ್ಲೆ ನಿಂತಾನ.

ನಾಣಿ : ಹೇಳು ಸುಧಾ, ನಾನು ನಾನು. ನೀನೂ ನಾನು.
ಆ ಮ್ಯಾಲ—

ಗೀತಾ : ನಾಣೀ ಮುಂಬೈದಾಗ ನಾನೂ ಅಂತ ಯಾರಿಗಂತಾರ ಗೊತ್ತ ದನ ?

ನಾಣಿ : ಯಾರಿಗಿ ?

ಗೀತಾ : ಪೌನೇ ಆಠಗ್ಗ.

ನಾಣಿ : ಏನಂದಿ ?

ಗೀತಾ : ಅಳಿಯ ಏನ ಮಾಡತಾನ ಗೊತ್ತಾ ?

ಭೀಮ್ಯಾ : ಅವ್ವಗೋಳ. ಏನ ಮಾಡತಾನ್ರಿ ?

ಗೀತಾ : ಪಡ್ಲಿಗಿ ಹೊತ್ತಕೊಂಡ ಜೋಗಾಡತಾನ;

ಭೀಮ್ಯಾ : ಆಡ. ಯಾಕೋ ಜೋಗವ್ವ ಇನ್ನೂ ಬರ್ಲಿಲ್ಲಲ್ಲ.

ನಾಣಿ : ನಾ ಹೇಳಿದ್ದ ಅದಲ್ಲಂದರ.

ಗೀತಾ : ಇನ್ನೇನ ಹೇಳಿದಿ ಹೇಳು ?

ನಾಣಿ : ಹೆಂಗೂ ಹೊರಗೆ ನಿನ್ನ ಗಂಡ ನಿಂತಾನ ಅಲ್ಲೀತನಕ ನಿನ್ನ ಕಣ್ಣೀರ ಒರಸಲೇನಂತ.

ಗೀತಾ : [ದುಃಖದಿಂದ]

ಏನ ತಿಳಿದ ಎಲ್ಲಿಗೆ ಬಂದೆ ಕಾಲೇಜನಾಗಿದ್ದಾಗ ಗೀತಾ ಗೀತಾ ಅಂತ ಹಲಬಿದಿ. ಆದರ ನಿನ್ನ ಮದಿವ್ಯಾಗಬೇಕಂತ ಡಬಲ ಗಾಡೀ ದರಾ ಕೇಳಿ ಬಂದಿದ್ದೆ. ನನ್ನ ಯಜಮಾನರನ್ನ ಮದಿವ್ಯಾಗೋವಾಗ ಒಲ್ಲೆ ಅಂತ ಹಟ ಹಿಡಿದೆ. ಅತ್ತೆ ಕರದೆ, ಮಾಡಿಕೊಳ್ಳು ಚಲುವ ಬಂದು, ಒಂದು ಮಾತ ಕೇಳಲೆ ಅಂತ ತಾಯಿ ಹೇಳಿತು. ನೀ ಎಲ್ಲಿ ಸಿಗತೀ ಆಗೋ ದೆಲ್ಲಾ ಚೆಲೋದಕ ಆಗತದಂತ, ಮತ್ತ ಆಕೀನ ನೊವಿಗಷ್ಟ ಮಂದ್ವಾಕಿ ಕಟ್ಟಿದಳು. ಹೋಯಿತಂತ ಕೈತೊಳಕೊಂಡರ ಮತ ಉರಕೋತ ಬಂದಿ. ಹೋದ ಬಂದಲ್ಲೆಲ್ಲಾ ಬೆನ್ನ ಹತ್ತಿ ಕದ್ದ ಕದ್ದ ಕಾಗದಾ ಕೊಟ್ಟ ಹೋದಿ. ನೊವ ಹಚ್ಚಾಟ ಹಾಸಿಗೆಲ್ಲಾ ಹೊರಳ್ಯಾದಿ, ಗಾದಿ ಸಾಲಾಣೆಲ್ಲಾ

ಇನ್ನೊಂದ ತರಸರೀ ಅಂತ ಗಂಡಗ ತಕರಾರು ಕೊಟ್ಟೆ. ನಿನ್ನ ಹೆಸರಿನಿಂದ ಕಾಡಿಗೀ ಹಚ್ಚಿದ್ದೇನು, ತುರುಬಾ ಬಚಿಚ್ಚಿ ಬಿಚ್ಚಿ ಕಟ್ಟಿದ್ದೇನು. ಉಬ್ಬುಬ್ಬಿ ಎದೀ ಅಳತಿ ಮಾಡಿ ಮಾಡಿಕೊಂಡದ್ದೆನು ಕುದರೀ ಹತ್ತ್ಯಾ ಮದುಮಗಳ್ಹಾಂಗ ಹೂ ಮುಡದದ್ದೇನು, ಒಂದು ದಿನಾ ನೀರಡಕಿ ಜಾಸ್ತಿ ಆಗಿ ಧೈರ್ಯ ಮಾಡಿ ಸುಳ್ಳಹೇಳಿ, ನಿನ್ನ ಅದ್ದೂರಿ ನೋಡಾಗ ಬಂದ್ರ್ಯ–ನೀ ಬಿಸಲಗುದುರಿ :

ಕಣ್ಣ ಹನಿ ಒರೇಕೊಂದು ನಾ ಹೋಗಬೇಕೀಗ [ಏಳುವಳು]

ಭೀಮಕ್ಕಾ : ಸಾಹೇಬರ, ಇನ್ನೂ ಆ ಪೋಲೀಸ ಹಾಂಗ ನಿಂತಾನ್ರಿ.

ಗೀತಾ : ಎಚ್ಚರಿದ್ದಾರ ಅನ್ನೊದಕ್ಕ ಸಾಕಷ್ಟಾಯ್ತು.

ನಾಣಿ : ಹೋಗೋದ ಹೋಗ್ತಿ. ಕಡೀಸಲ ನನ್ನ ಕಡೆ ನೋಡ ಬಾರದ ಸುಧಾ ?

ಗೀತಾ : ಅದೆಲ್ಲಾ ನಂಗೊತ್ತಿಲ್ಲ.

ನಾಣಿ : ದಯಮಾಡಿ ಸುಧಾ ಒಂದ, ಒಂದ ನಿಮಿಷ, ಸ್ವಲ್ಪ ಕಣ್ಣ ತೆರದ ಈ ಕಡೆ ನೋಡು.

[ಹೋಗಿ ಅವಳ ಭುಜ ಹಿಡಿದು ಕುರ್ಚಿಯಲ್ಲಿ ಕೂಡಿಸಿ ಅವಳ ಮುಖವನ್ನು ತನ್ನ ಕಣ್ಣೆದುರಿಗೆ ತರುತ್ತಾನೆ]

ಗೀತಾ ; ಅಬ್ಬಬ್ಬ ಇದ್ಯಾಂಬಾ ಆಯ್ತು.

ನಾಣಿ : ದಯಮಾಡಿ ಸುಧಾ.

ಗೀತಾ : ಕಣ್ಣಾಗ ಬೆರಳ ಚುಚ್ಚೀತಂದರ ?

ನಾಣಿ : ಸುಧಾ ಕೈ ಮುಗೀತೇನೆ, ಕಣ್ಣತಗೀ.

ಗೀತಾ : ಇನ್ನೇನ ದುರಗವ್ವನಾಂಗ ಕಣ್ಣ ಕಿಸಿಬೇಕೇನ ?

ನಾಣಿ : ನನ್ನಕಡೆ.

ಗೀತಾ : ಮತ್ತ ಯಾರ ಕಡೆ ನೋಡ್ತಾ ಇದ್ದೇನೀಗ ?

ನಾಣಿ : ರೆಪ್ಪಿ ಬಡೀಬ್ಯಾಡ.

ಗೀತಾ : ರೆಪ್ಪೀ ಬಡೀದ ಹೆಂಗಿರೋದಿನ್ನ ?

ನಾಣಿ : ಒಂದ ನಿಮಿಷ.

ಗೀತಾ : ಕಣ್ಣ ಕೀಳಬೇಕಂತೀಯೇನ ?

ನಾಣಿ : ಕಾಲಿ ಬೀಳತೇನ ಸುಧಾ.

ಭೀಮ್ಯಾ : ಸಾಹೇಬರ ಚಿನ್ನಾ ಬೆಳ್ಳೀ ನಿಮಗ ನೆಗವದಿದ್ದರ ನನ್ನ ಕರೀರಿ ಇಲ್ಲೆ ಕುಂತಿರತೇನ.

ಗೀತಾ : ಸಾಕಾತ್ನನಗ.

[ಏಳುವಳು. ನಾಣಿ ಅಂಗಲಾಚಿ ಅವಳ ಕಾಲು ಹಿಡಿಯುತ್ತಲೂ ಗೀತಾ ಬೇಸತ್ತು ಕೂತು ಅವನು ಹೇಳಿದಂತೆ ಅವನ ಮುಖಕ್ಕೆ ಮುಖ ತಂದು, ಕಣ್ಣು ಕಿಸಿದು ನೋಡುತ್ತಿರುವಂತೆ ಧ್ವನಿಗಳು ನರಳಲಾರಂಭಿಸುತ್ತವೆ. ಗೀತಾ ಹೆದರಿ ಹಿಂದೆ ಸರಿಯಬೇಕೆನ್ನುವಷ್ಟರಲ್ಲಿ ಅವಳ ಮುಖದ ಗಪ್ಪನೆ ಎರಡು ಕೈಯಿಂದ ಹಿಡಿದು ಕೊಂಡು ಜಗ್ಗಿ ನೋಡಲಾರಂಭಿಸುವನು. ನೊಡನೋಡುತ್ತಿರುವಂತೆ ಧ್ವನಿಗಳು ಕಿರುಚಲಾ ರಂಬಿಸುತ್ತವೆ. ಬರ ಬರುತ್ತ ನಾಣಿಯ ಮುಖ ಗಂಭೀರವಾಗಿ ಕ್ರೂರವಾಗಿ ಅವಳ ಮುಖವನ್ನು ದೇಹದಿಂದ ಕೀಳುವಂತೆ ಎಳೆಯ ತೊಡಗು ತ್ತಾನೆ. ಗೀತಾ ಕುರ್ಚಿಯಿಂದ ಕೆಳಬಿದ್ದು ಅಯ್ಯೋ ಅಯ್ಯೋ ಎಂದು ಚೀರಿದಾಗ ಧ್ವನಿ ಗಳು ಚೀರುವಿಕೆಯಾಗಿ ಬೆರೆಯುತ್ತದೆ. ಗೀತಾ ನಿಸ್ಸಹಾಯಕಳಾಗಿ ಕೈ ಮುಖ ಪರಚಿದರೂ ಕಡೆಗೆ ಅವಳನ್ನುಬಿಟ್ಟೊಡನೆ ಧ್ವನಿಗಳ ಚೀರು ವಿಕೆ ಒಮ್ಮೆಲೆ ಇಲ್ಲವಾಗಿ ಗೀತಾ ನರಳುವದು

ಮಾತ್ರ ಕೇಳುತ್ತದೆ. ಅವಳು ಎದ್ದು ಸೀರೆ ಸರಿಪಡಿಸಿಕೊಳ್ಳುತ್ತ]

ಗೀತಾ : [ಅಳುತ್ತ ಚೀರುತ್ತ] ಗಂಡಿಗ್ಯಾ ಭಾಡ್ಯಾ. ನನ್ನ ಗಂಡಗ ಹೇಳಿ ಹೇಗ ಮಾಡಸ್ತೇನ. ನಿನ್ನ ಚರ್ಮಾ ಸುಲಿಸಿ ಚಪ್ಪಲಿ ಮಾಡಸದಿದ್ದರ ನನ್ನೆಸರ ಗೀತಾ ಅಲ್ಲಂತ ತಿಳೀಯಾ.

ನಾಣಿ : ಶನೀ

ಭೀಮ್ಯಾ : ಓರಿ ಸಾಹೇಬರ.

ನಾಣಿ : ಹೆಣಾ ಹೊತ್ತಹಾಕಬಾ.

ಗೀತಾ : ಹೆಣ್ಣ ಹೆಂಗಸಿನ ಮ್ಯಾಲ ಕೈ ಮಾಡಿ ಭಾಳ ಪುಂಡತನಾ ಮೆರದೀ ನೀ. ನಿನ್ನ ನಿನ್ನ ಎಲ್ಲಿ ಅದಾರವರ ?

[ಹೊರಡುವಳು. ಭಿಮ್ಯಾ ಅಡ್ಡ ಬಂದು ಅವಳ ಕೈಹಿಡಿಯುವನು]

ಭೀಮ್ಯಾ : ಬಾಯ್ಮುಚ್ಚ ಭೋಸಡೆ.

ಗೀತಾ : [ಕೊಸರಿಕೊಳ್ಳುತ್ತ] ಬೋಸಡೆ ?

ಭೀಮ್ಯಾ : ರಂಡೆ, ಹಾದರಗಿತ್ತೆ.

ಗೀತಾ : ಎವ್ವಾ ಎಪ್ಪಾ ಯಾರರೇ ಬಿಡಸಬರ್ರ್ಯೊ. ಗಂಡಸಾದರಅಪ್ಪಾ ಅಂತೇನು ಹೆಂಗಸಾದರ ಅವ್ವಾ ಅಂತೇನು ಬರ್ರ್ಯೊ.

[ಚೀರುತ್ತ ಕೈ ಬಿಡಿಸಿಕೊಂಡು ರಂಗದ ತುಂಬ ಓಡಾಡುವಳು. ಹೋದ ಹೋದಲ್ಲೆಲ್ಲ ನಾಣಿ ಇಲ್ಲವೆ ಭೀಮ್ಯಾ ಅವಳಿಗೆ ಅಡ್ಡ ಬಂದು ಬಲೆಯ ಪ್ರಾಣಿಯ ಹಾಗೆ ಅವಳು ಸಂಕಟ ಪಡುವದನ್ನು ನೋಡಿ ಸಂತೋಷ ಪಡುತ್ತಾರೆ. ಆಮೇಲೆ ಅವಳನ್ನು ಹಿಡಿದು ಭೀಮ್ಯಾ ಕೆನ್ನೆಗೆ ಎರಡೇಟು ಬಿಗಿದು]

ಭಿಮ್ಯಾ : ನೀ ಎಷ್ಟು ಚೀರಿದರೂ ಯಾರೂ ಬರೋದಿಲ್ಲನ್ನೋದ ಖಾತ್ರಿ ಆತಿಲ್ಲ ?

[ಚೀರುತ್ತಿದ್ದರೂ ಅವಳ ಬಾಯಿಗೆ ಬಟ್ಟೆ ಕಟ್ಟಿ ಕೈಹಿಂಭಾಗಕ್ಕೆ ಕಟ್ಟಿ ಕುರ್ಚಿಯಲ್ಲಿ ನೂಕುವರು ಗೀತಾ ನರಳುತ್ತ ಬುಸುಗುಡುತ್ತ ಇರುವಾಗ]

ಭೀಮಶ್ಯಾ : ನಾನ ನಿನ್ನ ಗಂಡಂತ ತಿಳಕೊ.

ನಾಣಿ : ನಾ ನಿನ್ನ ಅತ್ತೆಂತ ತಿಳಕೊ.

[ನಾಣಿ ಮುದುಕಿಯರು ಕೂಡ್ರುವಂತೆ ಕೈ ಮೇಲೆ ಕೆನ್ನೆಯನ್ನೂರಿ ಕೂರುವನು. ಇಬ್ಬರೂ ಈಗ ಧ್ವನಿ ಬದಲಿಸಿ ಮಾತನಾಡುತ್ತಾರೆ]

ಭೀಮಶ್ಯಾ : [ಇಲ್ಲದ ಮೀಸೆ ತಿದ್ದುತ್ತ]
ಅಲ್ಲ ಹಡಸಂ. ಹಿಂಗ ಹೋಗಿ ಹಾಂಗ ಬರತೇನಂತ ಆ ನಾನ್ಯಾನ ಬುಡಂಕ ಬೀಳಾಕ ಹೋಗಿದ್ದಿ?

ನಾಣಿ : ನನ್ನ ಮಗನ ಆ ಬಿದ್ದಾಡಿ ಮಾನಿತನಕ ಬಟ್ಟಾ ಹಚ್ಚಿದಳೋ. ನೀ ಹೆಂತಾದೊ ಊರ ಪೋಲೀಸಂತ ಭಾಡ್ಯಾ, ಸ್ವಂತ ಮನೀದ ಬಿಟ್ಟ ಊರಗಾರಿಕಿ ಆಗ ಹೋಗ್ತೆಲ್ಲಾ ಅಳ್ಳದ ಸುರೀತಿ.

ಭೀಮಶ್ಯಾ : ನೀ ಒಮ್ಮೆರೆ ಹಿಂತಾ ಮಾತ ಹ್ಯಾಂಗಂತ ಹೇಳಿದಿ?

ನಾಣಿ : ಲಡಡೂ, ಮದಿವ್ಯಾದಾಗಿಂದ ನೀ ಎಚ್ಚರಲ್ಲಿ ಆದಿ. ಆಕಳಿಸಿಕೋಂತ ಬರತೀ. ನಿದ್ದಿಗಣ್ಣಾಗ ಹೊಂಟೆದ್ದ ಹೋಗತಿ. ಬೆಳೆದ ಗಂಡಸಾಗಿ, ಹೆಂಗಾ, ಏನಾ ಕೇಳಿದಿ ? ಈ ಹಲವಾರಿಲಿ ಹಾ ಅನ್ನೂದರೊಳಗ ಬೆದೀಗಿ ಬಂದ ಕೋಳಿ— ಯೋಳ ಒಣ ಹಾರ್ಯಾಡಿ ಬರಾತ್ತಾಳ. ಮದಿವ್ಯಾಗೋವಾಗ ನನ್ನ ಮಗನ ಎಟ್ಟಿಂದರೂ ಕಾಲಿಜ ಕಟ್ಟಿ ಏರಿದಾಕಿ. ಇದ ನೀ ಹತಾ ಕುದರಿ ಅಲ್ಲಿಂಥರ್ಲ ಜೋಡ ಪಣಾಲಕ ಮುಟ್ಯಾಗಿ ಮದಿವ್ಯಾದಿ. ಕಾಲೀಜಂ ಹುಡ್ಗುಗೋರೆಲ್ಲಾ ಮಲ್ಲಿಗಿ

ಮಶಾಲೀತಂದ, ತಂದ ಹಿಂದ ಹಿತ್ತಲದಾಗ ದೊಡ್ಡ ಅಡೀ ಬಿದ್ದೈತಿ, ಹರೇದ ಹುಡುಗಾಗಿ ಮನೀ ಹೇಂತಿ, ದಿನ ನಿನಗ ಕೈ ಕೊಡತಾಳೋ ಕಾಲ್ಕೊಡ್ತಾಳೋ ತಿಳೀಬ್ಯಾಡ ?

ಭೀಮ್ಯಾ : ಹೌಂದೇನ ?

ನಾಣಿ : ಆಕಿನೇನ ಕೇಳ್ತಿ ? ಹೇಳವಾಕಿ ನಾ ಮನಿಶಾಳಲ್ಲಾ ? ಹೆಣಾಲ ಹಿಡಕೊಂಡ ಮಶಾಲಾ ಅಂದರ ಸಾಕ್ಕಿನಗ — ಈ ಹುಚಮಾವ ಹಾರಲಿ ಗಗನಕ್ಕೆ ನಮ್ಮ ಧ್ವಜಾ ಅಂತ ಬಾಯ್ತ್ರಗೀತಿ.

ಭೀಮ್ಯಾ : ಹೂ, ಬಂದ ಮಶಾಡ ನಿನ್ನ ಬೀಸೂಕಲ್ಲ. ಈಗ ನನಗೇನ ಮಾಡಂದಿ ?

ನಾಣಿ : ಅದನೂ ನಾನ ಹೇಳಬೇಕೇನ ? ಮೋತಿಗಿ ಮಸೀ ಹಚ್ಚು. ನೆಲಬಾವರದಾಗ ಚೆಲ್ಲಿ ಬಾ. ಬುದ್ದಿ ಬರಲಿ ಹಡನೋಗ.

ಭೀಮ್ಯಾ : ನೆಲಬಾವರದಾಗ ?

ನಾಣಿ : ಮತ್ತೆಲ್ಲಿ ಹೋಗಿ ಮುನಸಿ ಪ್ಯಾಟ್ಯಾಗ ಇಡ. ಹುಡಗೋರ ದಾಯಬ್ತು. ಇನ್ನು ಊರ ಗಂಡಸರದಪ್ಪ ಮಂಡಾಗಲಿ. ಪಕ್ಕಾ ಕಿತ್ತಮಸಾಲೀ ಹಾಕಿ ಸಿವಿಮಶಾಡಿ ತನ್ನೋದ ಬಿಟ್ಟದಿ. ನೀ ತಗೋ, ನೀ ತಗೋ ಅಂತ ಊರ ತುಂಬ ತಿರಗತಿ. ನಿನ್ನ ಕೈಲೆ ಆಗದಿದ್ದರೆ ತತಾ ಇಲ್ಲಿಂದ [ಎದ್ದು ಗೀತಾಳನ್ನು ಹೊತ್ತುಕೊಂಡು ರಂಗದ ಹಿಂಭಾಗಕ್ಕೆ ಕತ್ತಲಿರುವಲ್ಲಿಗೆ ಸ್ತ್ರೀಯರ ನೆರಳುಗಳ ಚಲನವಲನವಿರುವಲ್ಲಿಗೆ ಒಯ್ಯುತ್ತಾನೆ. ಅವರೂ ನೆರಳಾಗುತ್ತಾರೆ. ಇಳಿಸಿ ಅಲ್ಲಿಯೇ ಇದ್ದ ಕುರ್ಚಿಯಲ್ಲಿ ಕೂತಾಗ ನೆರಳುಗಳೆಲ್ಲ ಅವನ ಸುತ್ತ ನೆರೆದು ಹೊಕ್ಕಳಿನ ಮೇಲೆ ತಮ್ಮ ತಲೆಗೂದಲನ್ನು ಆಡಿಸತೊಡಗುತ್ತವೆ. ಬಹಳ ಸಣ್ಣಾಗಿ ನರಳುವಿಕೆಯೂ ಕೇಳಿಸುತ್ತದೆ. ಇತ್ತ ಬೆಳಕಿನ ಭಾಗದಲ್ಲಿ ಭೀಮ್ಯಾ ಸ್ಟೂಲಿನ ಮೇಲೆ ಮತ್ತೆ ಕೈಕಟ್ಟಿ ಕುಳಿತು ಕೊಳ್ಳುತ್ತಿರುವಂತೆ ಬಾಗಿಲ ಕಡೆಯಿಂದ ರಂಗದ ಮೇಲೆ ಬಂಡಾರ ಹಾರುತ್ತದೆ, ಭೀಮ್ಯಾ ಹಾಗೇ ನೋಡುತ್ತ ಕುಳಿತಾಗ ಇನ್ನೊಮ್ಮೆ ಹಾರುತ್ತದೆ. ಎದ್ದು ಬಂದು ಬಾಗಿಲಲ್ಲಿ ನೋಡುತ್ತಿರುವಂತೆ

ಇನ್ನೊಮ್ಮೆ ಬಂಡಾರ ಹಾರಿ, ಯಾಕುಂದ ಜೋಗಬಾ ಎಂದು ಪಡ್ಲಿಗಿ ಹೊತ್ತ, ಕೈಯಲ್ಲಿ ದೀವಟಿಗೆ ಹಿಡಿದ, ಕೊರಳ ಬಂಡಾರ ಚೀಲದ ಜೋಗತಿ ಹಾಜರಾಗುತ್ತಾಳೆ. ಭೀಮ್ಯಾ ಬಾರವಾ ಜೋಗವ್ವಾ ಎಷ್ಟ ಹಾದೀ ಕಾಯಬೇಕ, ಬಗತರನ ಮರೀಬ್ಯಾಡ್ವಾ ಅಂದ್ನಿ ಎಂದು ಹೇಳುತ್ತ ಅವಳ ಕೈಯ ದೀವಟಿಗೆ ಇಸಿದುಕೊಂಡು ಒಂದು ಮೂಲೆಗೆ ಚುಚ್ಚುತ್ತಾನೆ. ಅಷ್ಟರಲ್ಲಿ ಜೋಗತಿ ಪಡ್ಲಿಗಿಯನ್ನು ಸ್ಟೂಲಿನ ಮೇಲಿಟ್ಟು ನಿವಳ ಒಯ್ಯಾರ ಮಾಡುತ್ತ ನಿರಿಗೆ ಹೊಡೆದು ಕೂಡ್ರು ತಾಳೆ. ಭೀಮ್ಯಾ ದೇವರಿಗೆ ನಮಸ್ಕರಿಸಿ ಜೋಗತಿಯ ಅನತಿ ದೂರ ದಲ್ಲಿ ಕೂಡ್ರುತ್ತ]

ಭೀಮ್ಯಾ ; ಭಗತರನ್ನ ಮರೀಬ್ಯಾಡವಾ ಅಂದ್ನಿ.

ಜೋಗತಿ : [ಉಟ್ಟರದಲ್ಲಿಯ ಸಣ್ಣ ಅತ್ತರೆಣ್ಣಿ ಬಾಲಿ ತೆಗೆದು ಮೈಗೆ ಹಚ್ಚಿ ಕೊಳ್ಳುತ] ಬೇಬರಿಸಿ ಇದೇನ ಪ್ಯಾಟಿ ಅವ್ವಾ ಅನ್ಯಾಕ ?

ಭೀಮ್ಯಾ : ಎಲೀ ಇದರ.

ಜೋಗತಿ : ಅಯ್ಯ ನೋಡಿ ಕಣ್ಣ ಕಿಸ್ಯಾಕ ಕರಕೊಂಬಂದೇನ ?

ಭೀಮ್ಯಾ : ಛೇ ಹೋಗು ನಿನ್, ನಿಂದೂ ಘನ ಕೆಟ್ಟ ದರಾನ.

ಜೋಗತಿ : ಗಂಡಸ ತೂಗಿ ಮಾತಾಡ. ಮಲಗಿ ಎದ್ದ ಮ್ಯಾಲ ಏಂಟ ದಿನಾ ಮೈ ನಾರಿದರ ರೊಕ್ಕ ಕೊಡ.

ಭೀಮ್ಯಾ : ಕೊಳತ ?

ಜೋಗತಿ : ಯಾಕಾಲಾ ಲಡುದು? ನನ್ನ ಚಪ್ಪಲಿ ಬಟ್ಲಾಗ ಎದ್ದದ್ದಿ ದೊಡ್ಡ ದೊಡ್ಡ ಮಂದಿ ಸೆರೇ ಕುಡೀತಾರೂ. ಕುರಸ್ಯಾಲಾ ಬಂದ ಕೊಳತ ನಾರತತಿ ಅಂತಿ.

ಭೀಮ್ಯಾ : ಇದ ಒಳೆ ಹುದಲಾ ಬೆತ್ತಲೆ.

ಜೋಗತಿ : ಅದಕ್ಕ ಹಿರೇರ ಹೇಳತಾರ : ಕಿಸಗಣ್ಣಲೆ ಹೋಳಿ ಹಾಯು ಬಾರದಂತ,

ಭೀಮ್ಯಾ : [ಚಪ್ಪನೆ ನೆಲ ಬಡಿದು]
ಹಾ ನನಗೀಗ ನೆನಪಾತ ನೋಡ. ನಾ ಮರಿವಿನಾ ವನ್ನೋದ.

ಜೋಗತಿ : ಏನಲ್ಲಾ ಮರಿತಿದ್ದಿ ?

ಭೀಮ್ಯಾ : ನಮ್ಮ ಸಾಹೇಬರ, ಜಳಕಾ ಮಾಡೂದ ಬಿಟ್ಟ ಭಾಳ ದಿನಾ ಆತ.

ಜೋಗತಿ : ನಡುವ ಸಾಂಬಂಡ್ಯಾಕ ನೆನಪಾತ ?

ಭೀಮ್ಯಾ : ಅಡ, ಅದನೂ ಹೇಳಲಿಲ್ಲಲ್ಲಾ ನಿನಗ ? ದೌಳಕ್ಕಿ, ಹೂ ಅಂದೇ ನಂದರ ಉಸರ ತೆಗೋಳಾಕ ಬಿಡುವುಲ್ಲ. ಇನ್ನ ಸಾಬರ ಕತಿ ಏನ್ಹೇಳ್ಲಿ ?

ಜೋಗತಿ : ಸಾಬರ ಕತೀ ಹೇಳಾಕ ಕರದಿ ?

ಭೀಮ್ಯಾ : ಮತ್ತ ಕುದರಿ ಏರಿದಿ ಹೌಂದಲ್ಲ ? ನೀ ಇಂದ ಹುಸೀ ಖಾರಾಗೀರಾ ತಿಂದಬಂದೀ ಏನ ? ಕೇಳಿಲ್ಲೆ. ಇಂದ ನಾ ಅಲ್ಲ. ನಮ್ಮ ಸಾಹೇಬರ ಪೂಜಿ ಮಾಡತಾರ.

ಜೋಗತಿ : ಅಯ ಭಾಡಕೌ ಮೊದಲ ಯಾಕ್ಹೇಳಲಿಲ್ಲ ? ಅವ ಬಂದ ಮ್ಯಾಲನಾರೂ ಎಣ್ಣಿ ಹಚ್ಚಿಕೋತಿದ್ನಿ.

ಭೀಮ್ಯಾ : ಎಂಟೆಂಟ ದಿನಾ ಹಾಂಗ ನಾರತತಿ ಅಂತ.

ಜೋಗತಿ : ಹಾಂಗಂಗ ಆದಕೇನ ಎಳೆಹೊತ್ತಾ ಇಲ್ಲಾ ?

ಭೀಮ್ಯಾ : ಬಾಳ ತುಟ್ಟೀದ ಕಾಣತತಿ.

ಜೋಗತಿ : ನಾತ ಬತ್ತ ?

ಭೀಮ್ಯಾ : ಗೊಮ್ಮಂತ ಗ್ರೊಮಾಡಸಾಕ ಹತ್ತೀತಿ, ಒಂದಳತಿ.

[ಮುಂಗೈ ಒಡ್ಡಿ]

ನಂಗಟ ಹಚ್ಚ ನೋಡೋಣ.

ಜೋಗತಿ : ರೊಕ್ಕ ಬಿದ್ದಾವ.

ಭೀಮ್ಯಾ : ನಮ್ಮ ಸಾಹೇಬರ ಸಂಸ್ಥಾನಕ ಬಡತಾನೇನ ತತಾರ.

ಜೋಗತಿ : [ಸ್ವಲ್ಪವ್ಹೇ ಮುಂಗೈಗೆ ಹಚ್ಚಿ]

ಹೇಳ್ನಿಮ್ಮ ಸಾಬನ ಕತೀ ಏನಾ ?

ಭೀಮ್ಯಾ : [ಮೂಸಿ]
ಇದಕ್ಕ ಕುರುವ ಸಾಯತಾವು ?

ಜೋಗತಿ : ಹೆಂಗ ಹುರದ ಹುರದ ಬೀಳತಾವ.

ಭೀಮ್ಯಾ : ಇಂದೊಂದ ಪಾಡಾತ ಬಿಡತ್ತ. ನಮ್ಮ ಸಾಹೇಬರ ಹೊಕ್ಕಳ ವ್ಯಾಲೊಂದ ಕುರುವಾಗೇತಿ. ಎಂಥಾ ಸಭಾದಾಗ ಕುಂತರೂ, ಪರಾ ಪರಾ ಪರಾ ಅದರಸುತ್ತ ತುರಿಸಿಕೊಂಡ ತುರಿಸಿಕೋತಾರ.

ಜೋಗತಿ : ಈ ಎಣ್ಣಿಗಿ ಹುಚ್ಚ ನಾಯಿ ಸಾಯ್ತಾವು, ಇನ್ನ ಕುರುವಿನ ಸುದ್ದಿ ಏನ್ಹೇಳ್ತೀಯೋ ?

ಭೀಮ್ಯಾ : ಹುಚ್ಚ ನಾಯಿ ?

ಜೋಗತಿ : ಹೂ ಹೂ, ಹುಚ್ಚನಾಯಿ ಬೆಳಗಾಂವಿ ಸಾಬರ ನಾಯಿಗಿ ಹುಚ್ಚಹತ್ತಿ ಕೊಂದ ಬಿಡರೀ ಆ ನಾಯಿ ಅಂದರ ಅದನ್ನ ತೆಕ್ಕಿಹಾದ ಆಳಾಕ ಸುರುವಮಾಡತಿದ್ದರು. ಮೊದಲ ಹುಚ್ಚ ನಾಯಿ ಕೇಳಿತು ? ಅವರ್ಹೇಂತೀನ ಕಡದ. ಆಕಿ ನಾಯಿ ಹಾಂಗ ಒದರ್ಯಾಡಿದರೂ ಸಾಬರ ನಾಯಿ ಬಿಡುವೊಲ್ಲರೇನ ಮಾಡ್ತಿ ? ಕಡೀಕಂದ್ರ ಅವರ ಕಳಬಳ್ಳಿ ನನ್ನ ಹಂತ್ಯಾಕ ಬಂದರು. ಎಣ್ಣೀ ಕೊಟ್ನಿ. ಹೀಂಗ ಹುಚ್ಚ್ಯಾದರಾಗ ಹಾಂಗ ಸತ್ತಹೋತ.

ಭೀಮ್ಯಾ : ಅಡಡಡಡಡ :

ಜೋಗತಿ : ಕರೀ ನಿನ್ನ ಕುರುವಿನ ಸಾಬನ, ಯಾ ಕಚೇರ್ಯಾಗ ಬರಕೋ ತಾನ ಅವ ?

ಭೀಮ್ಯಾ : ಕಚೇರ್ಯಾಗ ಬರಕೋಳಾಕ ಅವರಿಗೇನ ಕಡೀಮ್ಯಾಗೇತೆ ? ಅವರ ಬಿಟ್ಟ ಬೂಟ ಮ್ಯಾರೆ, ಎಷ್ಟ ಮಂದಿ ದೊಡ್ಡ ದೊಡ್ಡ ಬಂಗಲೆ ಕಟ್ಟಿಸಿದಾರ. ಯಾರ ಮುಂದ ಹೇಳ ಬ್ಯಾಡ. ನೀ ನನಗಟ ಎಣ್ಣ ಹಚ್ಚೀದಿ ಅಂತ ಹೇಳತೇನು ನಮ್ಮ ಸಾಹೇಬರ ಮುನ್ಯಾಗ ಯೋಳಕೊಪ್ಪರಗಿ ಚಿನ್ನ ಐತಿ.

ಜೋಗತಿ : ಹಾ.

ಭೀಮವ್ವಾ : ಹಾಂಗ ಬಾಯ್ತೆಗೀಬ್ಯಾಡ, ನೋಡಾ ಭಾಳೆಲ್ಲಿ.

ಜೋಗತಿ : ಎಲ್ಲಿ ಸಿಕ್ಕಿತ, ಹೆಂಗ ಸಿಕ್ಕಿತ, ಯಾವಾಗ ಸಿಕ್ಕಿತ ?

ಭೀಮವ್ವಾ : ಒಂದಿನಾ.

ಜೋಗತಿ : ಹೂಂ.

ಭೀಮವ್ವಾ : ಅಯ್ತಾರವಾಸಿ.

ಜೋಗತಿ : ಹೂಂ.

ಭೀಮವ್ವಾ : ಸೋಮಳಿ, ಭರಸರ್ವತ್ತಿನ್ಯಾಗ ಯಾರೋ ಬಂದ ಬರತೇನ ಬರತೇನ ಅಂಧಾಂಗಾತ.

ಜೋಗತಿ : ಅವ್ವ ನನ್ನ ಶಿವನ.

ಭೀಮವ್ವಾ : ನನ್ನ ಧೋತರ ತೋಯ್ತು. ಎಷ್ಟಂದರೂ ನಮ್ಮ ಸಾಬರ
ಧೈರ್ಯ– ಎದ್ದ.
ಯಾವಾಕ್ಕೆ ಹುಚ್ಚ ಭೋಸಡೆ ? ಅಂದರು
ಹುಚ್ಚಲ್ಲಾ, ಭೋಸಡೆಲ್ಲಾ
ಭಾಗ್ಯ ಬಂದು ಬಾಲದಾಗ ನಿಂತೇನ;
ಕದಾ ತಗೀಯೋ ಮಾವಾ,
ಅಂತದೂ. ಗೆಜ್ಜಿ ಸಪ್ಪಳಾ ಮಾಡಾಕ ಹತ್ತಿತ. ಸಾಹೇಬರ್ನ ಕೇಳಬೇಕ ?
ಹೆಸರಿಲ್ಲಾ ದಶಿಯಿಲ್ಲಾ
ಹಾದರಿಗಿತ್ತೇರಿಗೆಲ್ಲಾ ಕದಾ ತಗ್ಯಾಕ.
ಇದೇನ ಧರಮಸಾಲೆಲ್ಲಾ, ಹೊಂಟೋಗ ಅಂದರು
ನೀ ಕರದ ಹೆಸರಿಗೆ ಓ ಅಂದ
ಹೇಳಿಧಾಂಗ ಕುಣೀತೇವ
ಕದಾ ತೆಗೀಯೋ ಕರಚಿಲುವಾ ಅಂದರು

ನಮ್ಮ ಸಾಹೇಬರ ಯೋಳಬಾರಿನ ಪಿಸ್ತೂಲ ತಗೊಂಡ್ರು ನನ್ನ
ನಡಕ ಹುಟ್ಟಿತ.

ಜೋಗತಿ : ಅಯ್ಯ ನಿಂದೇನ ಮಾಡ್ತಿ, ಮುಂದ ಹೇಳ.

ಭೀಮ್ಯಾ : ಬಾಲಾ ತಗದರ.

ಜೋಗತಿ : ಹೂಂ.

ಭೀಮ್ಯಾ : ತಗ್ಯಾನ ತೆಗೆದರ ಜೋಗವ್ವಾ ನಿನ್ನ ಮಬಂದ ಹೇಳತೇನು. ಒಂದು ಬಿಟ್ಟ ಯೋಳ ಮಂದಿ ಹೆಂಗಸರ, ಹೆಂತಾ ಚೆಲೀವೇ ರಂದರ ಹಂತಾ ಚಲಿವೇರ, ಥಳಾ ಥಳಾ ಬ್ಯಾಂಗಡಿ ಹಾಂಗ ಹೋಳಿತಿದ್ದರ ಹಂಗ. ಕಾಲಾಗ ಬಂಗಾರ ಜೆಜ್ಜೀನ, ಉಟ್ಟ ಪೀತಾಂಬರೇನ, ತೊಟ್ಟ ದಾಗೀನೇನ. ಎಲ್ಲಾರ ಕಣ್ಣಾಗ ಎಡ್ಡೆಡ್ಡ ಬಂಗಾರ ಕೊಡಾ. ಝುಣ ಝುಣಣ್ಣಂತ ಬಂದವರ ಸಾಬರ ಸುತ್ತ ಕುಣ್ಯಾಕ ಹತ್ತಿದರು. ಧೈರ್ಯಮಾಡಿ, ಸಾಹೇಬರ ಒಬ್ಬೊಬ್ಬಾಕೀನ ಮುರದ ತೊಡ್ಯಾಗ ಹಿಡ ಕೊಂಡ ಕೊಡದ ಕಂಟದಾಗ ಹಣಿಕಿ ನೋಡಿದರ ನೆರಳ ಕಾಣು ವಾತ. ಘಾತಾ ಮಾಡಿದರಂದವರ, ಪಿಸ್ತೂಲ ಹಿಡಕೊಂಡ ಹೊರಬೀಳ್ತೀರೋ ಇಲ್ಲೋ? ಅಂದರು. ಹೊರಗ ಹಾಕ ಬ್ಯಾಡೋ ನಿನ್ನ ಕುರುವ ತುರಿಸಿಕೋತ ಇಲ್ಲೆ ಇರ್ತೀ ವಂತಾರು. ಸಾಹೇಬರ ಎಚ್ಚರಿದ್ದಾಗೆಲ್ಲಾ ಅವರ ಕೈ ಉಗ ರಾಗಿ, ಕುರುವಿನ ಪಶ್ಯಾಲ ಕೈಯಾಡಸ್ತಾರ. ಅವರು ಕೈ ಯಾಡಿಸುವಾಗಲೆಲ್ಲಾ ಇವರು ಎಚ್ಚರಿರತಾರ. ಇಲ್ಲೆ ಅದಾರ.

ಜೋಗತಿ : ಅವ, ಅವ, ಅವ ಇನ್ನೇನ ಮಾಡಲೆ ?

ಭೀಮ್ಯಾ : ಈಗ ಬರತಾರ.

ಜೋಗತಿ : ಅಯ್ ನನ ಶಿವನ ಇನ್ನೇನ ಮಾಡಲೆ ?

ಭೀಮ್ಯಾ : ಹೂವಾ ಕಾಯೀ ತರಾಕ ಹೋಗ್ಯಾರ.

ಜೋಗತಿ : ಅವ ಹಂತಾವಿದ್ದಾನ ನಿನ್ನ ಸಾಬ?

ಭೀಮ್ಯಾ : ಬಟ್ಟಮುಖಾ, ಮುಗಳನಗಿ, ಬ್ಯಾರಿ ಕಲತ್ಯಾನು. ತಾಜಾ ಹರೆ ತುಂಬಿ ತುಂಬಿ ಯೋಳ ಹೊರಸಿನ ನುಲೀಗಿ ನೆಲಿ ಸಿಗಾಣೆಲ್ಲ.

ಜೋಗತಿ : ಅವ್ವ ಅವ ಹೆಂಗ ಸಿಕ್ಯಾನ ?

ಭೀಮ್ಯಾ : ಬರತಾರ ಬರತಾರ.

ಜೋಗತಿ : ಅವ ಎಂದ ಸಿಕ್ಕಾನ ?

ಭೀಮ್ಯಾ : ಎಲ್ಲೀ ಇದರ ನಿಂದೂ ಘನ ಕೆಟ್ಟ ಸೇಲೀನ.

ಜೋಗತಿ : ಸೆಲೀ ಅಲ್ಲೊ ಮಗನ ಹುಕ್ಕೇರಿ ಕಾರಂಜಿ.

ಭೀಮ್ಯಾ : ಸಾಹೇಬರೂ ಮಂಗನ ಅಂತಾರು. ನೀನೂ ಅಂತಿ ಎವ್ವ ನಿನ್ನ ಹೆಸರೇನಾ ?

ಜೋಗತಿ : ಹಳೀ ಹೆಸರೇನ ಮಾಡ್ತಿ? ನೀನ ಒಂದು ಚೆಂದಾಂದ ಆರಿಸಿ ಇದ.

ಭೀಮ್ಯಾ : ಸಾಹೇಬರ, ಸಾಹೇಬರ ಲಗುಬರ್ರಿ. ಎಲ್ಲಿ ಹ್ವಾದರೋ ಸಾಹೇಬರ? ಅಂಥಾಂಗ ಎವ್ವ, ನಿನ್ನ ಮನೀ ಕೀಲಿಗಿ ಎಷ್ಟ ಕೈ ಅದಾವು ?

ಜೋಗತಿ : ಎಷ್ಟಿದ್ದರೇನ? ಮಲೀಗಿ ಎದ್ದಮ್ಯಾಲ ಧೂಳಜಾಡಿಸಿದ ಜೋಗತಿ, ಮುತ್ತೈದೇರಿಗಿಂತ ಹೆಚ್ಚಂತ ತಿಳಿ. ಅವ ಬಂದ ಆಡಬೇಕಂದರ ಅಂಗಳ ಹೆಂಗಿರಬೇಕ ?

ಭೀಮ್ಯಾ : [ಸಮೀಪಕ್ಕೆ ಸರಿದು] ಯಾವ, ಅವ?

ಜೋಗತಿ : ಹೌಂದೌಂದ ಅವ.

ಭೀಮ್ಯಾ : ನಿನ್ನ ಮೈಯಾಗ ಅವ ಆಡತಾನ ಹೌಂದಲ್ಲ?

ಜೋಗತಿ : ಹೂ ಹೂ ಯಾಕ?

ಭೀಮ್ಯಾ : ಆಗಾಗ ಸಾಹೇಬರೂ ನನ್ನ ಮೈಯಾಗ ಆಡತಾರ.

ಜೋಗತಿ : ಅಯ ಲಡುದೂ, ನಿನ್ನ ಸಾಬ ಜೀವಂತ ಆದಾನೆಂತ ಹೇಳಿದೆಲ್ಲ.

ಭೀಮ್ಯಾ : ಅವನೂ ಸತ್ತಾನೇನ ಹಂಗಾರ?

ಜೋಗತಿ : [ಧ್ವನಿ ನಡುಗಿತ್ತು] ಅವ್ನೆಂಗ ಸಾಯತಾನ? ಹುಟ್ಟಿಲ್ಲ, ಸಾವಿಲ್ಲ ಇಲ್ಲೆದಾನ ಇಲಿಲ್ಲ. ಸರವ ಲೋಕಕ್ಕೆಲ್ಲಾ ಇರಿವಂಭು ಇರಿವೀ ಹಿಡಕೊಂಡ ಆನೆಂಬೊ ಅನಿಗೆಲ್ಲಾ ಆಧಾರಾದಾವ. ಅವನಾಟ ಏನ್ಕೇಳ್ತೀ ಮಗನ ?

ಭೀಮ್ಯಾ : ನೀ ಅವನ ನೋಡಿದಿ?

ಜೋಗತಿ : ಏನ ಮಾತೋ ತಿಳಿಗೇಡಿ, ಬಾಲಖಾ? ಬಂದ ಬಲ್ಕ ತುಂತ ಮದಿವ್ಯಾಧಾವ. ಮೈಗಿ ಭಂಡಾರ ಹಚ್ಚಿ ಮುತ್ತ ಕಟ್ಟಿಧಾವ. ದಿನ ಬೆಳಗಾದರ ಈ ಸರೇರದಾಗ ಸರಚೆಂದ ಆಟ ಆಡ್ತಾವ. ಆ ಸ್ವಾದರ ಮಾವನ್ನ ನೋಡೀದೀ ಏನಂಥೀಯಲೊ್ಲ ?

ಭೀಮ್ಯಾ : ಏನ ವಯ್ಸಾ ಅವಂದ ? ಹೆಂಗದಾನು ?

ಜೋಗತಿ : ಖಾಯಂ ಪಂಚವೀಸ ವರಸದ ಹರೆ. ನಿನ್ನ ಸಾಬನ ತಾಜಾ ಹರೆದನೆಲಿ. ಯೋಳ ಹೊರಸಿನ ನೂಲೀಗಿ ಸಿಕ್ಕಿಲ್ಲಾದರ, ಅವನ ಹರೇದ ನೆಲಿ ಈ ಜಗತ ಕಟ್ಟಿದ ಉಪ್ಪಾರಗ ಸಿಕ್ಕಿಲ್ಲ. ಸರವಲೋಕೆಲ್ಲಾ ಬಂದ ವರ ತುಂಬಿ ತುಂಬಿಕೊಂಡ, ವ್ಯಾಲ ನಳಾ ಹಚ್ಚಿ ಎಳದರೂ ಒಂದ ಹನಿ ಕಮು ಬಂದಿಲ್ಲ. ಇಷ್ಟಾದರೂ ಒಂದ ಯಾಕಂಥಾನೇನ? ಒಂದ ಏನಂಥಾನೇನ?

ಭೀಮ್ಯಾ : [ಗಪ್ಪನೆ ಕಾಲು ಹಿಡಿದು] ತಾಯೀ ಎಷ್ಟ ಕಾಡಿದಿ ಏನಾ ಓಡ್ಯಾಡಿದಿ? ನಿನ್ನ ಹೆಸರಿನ್ಯಾಗ ಗುಡಿ ಅಂತಿಳದ ಗಟಾರದಾಗೆಲ್ಲಾ ಹೊಳ್ಯಾಡಿ ಹೇಸಿ ಹೇಸಿ ಎಬರೇಸಿ ಹುಡಿದ್ಯಾಡತೇನು. ಕಂಡ

ಕಾಣವಲ್ಲಿ ನೀ ನಮ್ಮ ಸಾಹೇಬರಿಗಿ ಅವನ್ನ ತೋರಸಾಕ ಬೇಕ.

ಜೋಗತಿ : ಕರೀ ನಿನ್ನ ಸಾಬನ ಜೀವಂತದಾನು?

ಭೀಮ್ಯಾ : ಏ ನಾ ಕರದರ ಓ ಅನ್ನಲಿಲ್ಲ; ನಿನ್ನ ಕರ್‍ಯಾಕ ಬೇಕ.

ಜೋಗತಿ : ನಾನಾದರೂ ಕರ್‍ಯಾಕ ಬೇಕ ?

ಭೀಮ್ಯಾ : ಹೌಂದ ನೀನಾದರೂ ಕರ್‍ಯಾಕ ಬೇಕ.

ಜೋಗತಿ : ಹುಡಿಕ್ಯಾಡು ಹುಡುಗಾ. ನೀ ಹುಡುಕೋದ ಹಿಡಕೊಂಡ ಬಂದ, ಬಾಲಲಾಗ ನಿಂತೇನ. ತಗೊಂಡ ಹೋಗ. [ಇಬ್ಬರೂ ಸ್ವಲ್ಪ ಸಮಯ ಕಾಯುವರು. ಭೀಮ್ಯಾ ಎದ್ದು ನೆರಳುಗಳ ಕಡೆಗೆ ಹೋಗಿ ಹುಬ್ಬಗೈ ಹಚ್ಚಿ ನೋಡಿ ಬಂದು ಕುಳಿತುಕೊಳ್ಳುತ್ತಾ]

ಭೀಮ್ಯಾ : ಇನ್ನೂ ಅವರಿಗಿ ನಿನ್ನ ಗುರುತ ಹತ್ತಿಲ್ಲೇನವಾ. ಅವರ ಯಾವತ್ತೂ ಹಾಂಗ. ಒಮ್ಮೊಮ್ಮಿ ನನ್ನ ಗುರುತಾನ ಹಿಡ್ಯಾಣೆಲ್ಲಂದರ.

ಜೋಗತಿ : ಹಂತಾದೇನ ಆಗೇತೆವಗ ?

ಭೀಮ್ಯಾ : ಏನೇಳ್ಲಿ ಜೋಗವಾ? ಆ ಕೊಪ್ಪರಿಗಿ ಮುತ್ತೋದೇರ ಅಂತ ನಾ ಹೇಳ್ಲಿಲ್ಲ ?

ಜೋಗತಿ : ಹೂ ಹೂಂ.

ಭೀಮ್ಯಾ : ಅವರ ಇಷ್ಟ ಧಡ್ನರಧಾರಲ್ಲಾ. ನಮ್ಮ ಸಾಹೇಬರ, ಒಂದ ಮಾತ ತಿಳ್ಯಾಣೆಲ್ಲವರಿಗಿ. ಅವರ ಮಾತ ಇವರಿಗಿ ತಿಳ್ಯಾಣೆಲ್ಲ. ತಿಳೀಲಾರಕ ಬೈದಾಡಾಕ ಸುರು, ನೀ ಹೊಲಸ ನೀ ಹೊಲಸ. ಕಡೀಕ ಬ್ಯಾಸತ್ತ ನಾನ, ಏ ಹುಚ್ಚಗೋಳ್ರಾ. ಕೂಡಿ ಇರೂದ ಹಿಂಗಲ್ಲಾ. ಹೂ ಹೂ ಅಂದರ ಕೂಡಿದಾಂಗ ಅಂತ ಬುದ್ಧೀ ಹೇಳಿ ಬಂದ್ನಿ. ಈ ತೆಗೊಳ್ಳವಾ? ನೀನೂ ಹೂ, ನಾನೂ ಹೂ, ಹೂ ಹೂ ಹೂ. ತಲೀ ಚಿಟ್ಟ ಹಿಡದ ಮನೀಗಿ ಮನೀನ ನೆಳ್ಳಿಧಾಂಗ ಕೇಳತತಿ. ಏನ ಮಾಡತಿ ?

ಜೋಗತಿ : ಹಿಂತಾ ಮಂದಿ ನನ್ನ ಹಂತ್ಯಾಕ ಸಾಲಗಟ್ಟಿ ಬರತಾರ. ನನಗ ತಿಳೀಧೇನೋ ತಿಳಿಗೇಡಿ ಬಾಲಖಾ ?

ಭೀಮ್ಯಾ : ಕೆಲಸ ಕೆಟ್ಟಿತ.

ಜೋಗತಿ : ಹಂತಾದೇನಾತ ?

ಭೀಮ್ಯಾ : ಸಾಹೇಬರ ಮನೀ ಚಾಕರೀ ಬಿಟ್ಟು ಬಿಡಬೇಕಂತ ವಾಟಾಗಟಿ ಹಾಕ್ಕೊಳ್ಕಂಡ ನಾ ಕುಂತೇನು. ಇವರ್ನ ಬಿಟ್ಟರ ಇನ್ನೊಬ್ಬ ಇವ ಗಂಟಬಿದ್ದರೇನ್ಮಾಡ್ಲಿ?

ಜೋಗತಿ : ಚಿಂತೀ ಮಾಡಬ್ಯಾಡ ನಿನಗ ಪೋಲೀಸ ಕೆಲಸ ಸಿಗತೈತಿ.

ಭೀಮ್ಯಾ : ಖರೆ.

ಜೋಗತಿ : ನನ್ನ ವಾಕ್ಯ ಹುಸೀ ಹೋಗಾಣಲ್ಲ. ನಾಲಿಗ್ಯಾಗ ಕರೀಮಚ್ಚೆ ಕೊಟ್ಟಿದಾನ ಅವ.

[ನಾಲಿಗೆ ತೆಗೆದು ತೋರುತ್ತಾಳೆ]

ಭೀಮ್ಯಾ : ಆದ ನಾಲಗ್ಯಾಗ ಇದೊಂದ ಹೇಳ. ನಮ ಸಾಹೇಬರಿಗಿ ಅವ ಸಿಗತಾನ?

ಜೋಗತಿ : ಅವನ್ನ ಮುಂಗೈಯಾಗ ಹಿಂಗಿಡದ, ನಿನ್ನ ಸಾಬನ ಅಂಗೈ ಯಾಗ ಇಟ್ಟರಾತಿಲ್ಲೊ ?

ಭೀಮ್ಯಾ : [ಗಪ್ಪನೆ ಕಾಲು ಹಿಡಿದು] ಅಷ್ಟ ಮಾಡ ಹಡದವ್ವಾ, ನಿನ ಪಾದ ತೊಳದ ನೀರ ಕುಡಿತೇನು. ಎಳ ಒಳಗ ಹೋಗೋಣು.

ಜೋಗತಿ : ಯಾಕ?

ಭೀಮ್ಯಾ : ಸಾಹೇಬರ್ನ ಎಬ್ಬಿಸಿಕೊಂಡ ಬರಾಕ.

ಜೋಗತಿ : ಎಳವ್ಯಲ್ಲರಂತೀ.

ಭೀಮ್ಯಾ : ನೆನಪಾತೇಳನೀ [ಏಳುವರು. ಇಬ್ಬರೂ ನಿಧಾನವಾಗಿ ಮಾತನಾಡು ತ್ತಲೇ ರಂಗದ ಪ್ರದಕ್ಷಿಣೆ ಹಾಕುತ್ತ] ಸಾಹೇಬರ ಕುರುವಿನ ಮ್ಯಾಲ ಕೈಯಾಡಿಸಿದರ ಅವರಿಗೆ ಎಚ್ಚರಾಗೆತೈತಿ. ಮೆತ್ತಗ ತುರುಸ

ಬೇಕ ಮತ್ತು ಆ ರಂಡೇರ ತುರಿಸಿ ತುರಿಸಿ ಕೀವಾ ರಕ್ತಾ ಬಸೀತೈತಿ.

ಜೋಗತಿ : ಎಲ್ಲಾ ಬಿಟ್ಟ ಅಲ್ಲೇ ಯಾಕಾಗೇತಿ ?

ಭೀಮ್ಯಾ : ನಿನ್ನ ಮೈಯಾಗ ಬರ‍್ತಾನಲ್ಲಾ ಅವಾ ಇವ ಒಂದ?

ಜೋಗತಿ : ಒಂದ.

ಭೀಮ್ಯಾ : ನನಗೇನ ಅದರಾಗ ಸಂಶೇನ ಇಲ್ಲ.

ಜೋಗತಿ : [ಕೈ ಮುಗಿದು ನಿಂತು] ಅದೆಂಗಾದೀತ ?

ಭೀಮ್ಯಾ : ಅದೆಂಗ ಅಂದರ ಸಣ್ಣಂದಿರತ. ಇಬ್ಬರೂ ಒಂದಲ್ಲೆ ಹುಟ್ಟಿ ಒಂದಲ್ಲೆ ಬೆಳೆದ ಒಂದ್ಕ ಸಾಲಿ ಬರದವರು. ಅವಗ ಖುಷೀ ಆದರ ಇವರ ನಗಬೇಕು, ಇವರಿಗಿ ನೋವಾದರ ಅವ ಅಳ ಬೇಕು. ಒಟ್ಟ ಇಬ್ಬರೂ ಒಂದ ಬಾಯಲೇ ಉಂಡ ಒಂದ ಮುಕಳೀಲೆ ಹೇತವರಂದರ ಇದರ–ಮ್ಯಾಲ ತಿಳೀಯಲ್ಲ. ಇಬ್ಬರದೂ ಹೊಕ್ಕಳ ಬಾಲ ಒಂದ. ಕತ್ತರಿಸಬೇಕಂತ ಇಂದ ನಾಳಿ ಇಂದನಾಳಿ ಮುಂದ ಹದಮೂರ ವರಸ ಹಾಂಗ ದಾಟಿತ. ಸಾಹೇಬರ ಮುಲ್ಕೀ ಪರೀಕ್ಷೆಕ ಹೋಗೂದ ಬರಾಣೆ ಕತ್ತರಿಸಿದರು. ಇಬ್ಬರೂ ಅತ್ತು, ಚೀರಿ, ಹೊಕ್ಕಳ ತುಂಬ ರಗತ, ಆ ಗಾಯ ಇನ್ನೂ ಮಾದಿಲ್ಲ. ಅಂದಿನಿಂದ ಅವನ ತಲಾಸದಾಗ ಆದಾರೂ ಅವ ಸಿಕ್ಕ ಇಲ್ಲ.

ಜೋಗತಿ : ಹಂಗಾರ ನಮ್ಮಾವ ನನ್ನ ಮುಂದ್ಯಾಕ ಹೋಳಲಿಲ್ಲ ?

ಭಿಮ್ಯಾ : ನೀ ಕೇಳಿಲ್ಲಾ ಅವ ಹೇಳಿಲ್ಲಾ

[ಎನ್ನುತ್ತ ಭೀಮ್ಯಾ ಒಳಗೆ ಹೋಗುತ್ತಲೂ ತಲೆ ಸೆರಗು ತೆಗೆದು ಹೊಕ್ಕಳಿಗೆ ಕುಂಕುಮ ಸವರಿಕೊಂಡು ಸೆರಗನ್ನು ಕಂಕುಳಲ್ಲಿ ಸಿಕ್ಕಿಸಿ ಕೊಳ್ಳುವನು. ಬಂಡಾರ ಹಣೆಗೆ ಬಡಿದು ಕೊಳ್ಳುವಷ್ಟರಲ್ಲಿ ಭೀಮ್ಯಾ ವಾಪಸ್ಸು ಬರು ವನು]

033.2x M3K



ಜೋಗತಿ : ಕರೀ ಅವನ.

ಭೀಮ್ಯಾ : ನೀ ಬರಾಕ ಬೇಕ.

ಜೋಗತಿ : ಕರತಾ ಇಲ್ಲಿ, ಅಂದರ.

ಭೀಮ್ಯಾ : ನಿನ್ಹೆಸರ ಎನ್ಹೇಳಲಿ ?

ಜೋಗತಿ : ಅವಂದೇನ ?

ಭೀಮ್ಯಾ : ನಾನೂ.

ಜೋಗತಿ : ನಂದೂ ನಾನೂ ಹೋಗ.

[ಭೀಮ್ಯಾ ಒಳಗೆ ಹೋಗುತ್ತಲೂ ತುರುಬು ಬಿಚ್ಚಿ ಕೂದಲು ಮೈ ತುಂಬ ಪಸರಿಸಿಕೊಳ್ಳು ತ್ತಾಳೆ. ರಂಗದ ಬೆಳಕು ಕಂದಿ ಹಳದಿಯ ಎಳೆ ಬೆಳಕು ಮಾತ್ರ ರಂಗದ ಮೇಲೆ ಬಿದ್ದು ಉಳಿದೆಡೆ ಯೆಲ್ಲ ಮೊದಲಿನಂತೆ ಕತ್ತಲೆ ಆವರಿಸಿದೆ. ಹೆಣ್ಣಿನ ಧ್ವನಿಗಳು ಅತ್ಯಂತ ಅಸ್ಪಷ್ಟವಾಗಿ ನರಳತೊಡಗಿ, ಒಂದರಲ್ಲಿ ಒಂದು ಸೇರಿ ಹೂ, ಹೂ, ಹೂ, ಹೂ, ಹೂ ಎಂದು ತಾಳಿಗನು ಗುಣವಾಗಿ ಒಂದೇ ಸ್ವರದಲ್ಲಿ ಬರಬರುತ್ತ ಸ್ಪಷ್ಟ ವಾಗುತ್ತ ಬರುತ್ತದೆ. ಭೀಮ್ಯಾ ನಾಣಿಯ ಕೈ ಹಿಡಿದು ರೋಗಿಯನ್ನು ತರುವಂತೆ ಕರೆತಂದು ಕುರ್ಚಿಯಲ್ಲಿ ಕೂರಿಸುತ್ತಲೂ, ನಾಣಿ ಜೋಗತ್ತಿ ಯನ್ನು ಗಮನಿಸದೆ ನರಳುತ್ತ ತಲೆ ಹಿಂದ ಕ್ಕಾನಿಸಿ ಒರಗುತ್ತಾನೆ. ನರಳುವ ಧ್ವನಿ ಈಗ ಬಹಳ ಸ್ಪಷ್ಟವಾಗಿದೆ. ಜೋಗತಿ ತನ್ನ ಹೆಜ್ಜೆಯ ಗೆಜ್ಜೆಗಳನ್ನು ಸ್ಪಷ್ಟವಾಗಿ ಸಪ್ಪಳಿ ಸುತ್ತ ನಾಣಿಯ ಎದುರಿಗೆ ಹೋಗಿ ಹೊಕ್ಕುಳ ತೆರೆದು ತೋರಿ ಠೀವಿಯಲ್ಲಿ ನಿಂತು]

ಜೋಗತಿ : ಸಿಕ್ಕಿತ್ತೇನಪ್ಪಾ ಗುರುತ್ತ?

ನಾಣಿ : [ಗಮನಿಸಿ, ಕೈ ಮುಗಿದ್ದು]

ಶರಣಾ ತಾವ ಯಾರು ?

SRI JAGADGURU VISHWARADHYA
JNANA SIMHASAN JNANAMANDIR
LIBRARY,
Jangamwadi Math, VARANASI.
Acc. No. 3832
1024

ಭೀಮಶ್ಯಾ : ಸಾಹೇಬರ, ಈಕೀನ ಅವನ್ನ ಇಟ್ಟಗೊಂಡಾಕಿ. ಈಕೀ ಸರೀರದಾಗ ದಿನ್ನಾ ಬಂದ ಸರಚೆಂದಾ ಆಟಾ ಅಡಿ ಹೋಗ ತಾನಂತ್ರಿ. ನೀವ ಬೇಕಾದ್ರ ಕೇಳ್ರಿ. ಹೇಳತಾಳ. ಹೆಸರ ಹೇಳಿದರ ಸಾಕು. ಆ ಮನಿಶಾ ಯಾರಿಗಿ ಎಂದ, ಯಾಕ ಹುಟ್ಟಿದಾ ಎಲ್ಲಾ ಹೇಳತಾಳ್ರಿ.

ಜೋಗತಿ : ತಿಳೀತೇನ ?

ನಾಣಿ : ಶರಣಾ ತಾವ ಯಾರು ?

ಭೀಮಶ್ಯಾ : ಭಾಳಂದ್ರ ಭಾಳ ಶಾಣ್ಯಾಳ್ರಿ ಮತ್ತ, ಬೇಕಾದಂಥಾ ಗಂಟ ಅಗ್ಗಂಟ ಕಗ್ಗಂಟೆಲ್ಲಾ ಈಕೀನ್ನೋಡೆ ಬಿಚ್ಚತಾವರಿ.

ಜೋಗತಿ : ಆರವಾತೇನ ?

ನಾಣಿ : ಶರಣಾ ತಾವ ಯಾರು ?

ಭೀಮಶ್ಯಾ : ಸಾಹೇಬರ ಈಕೀ ಪುಸ್ತೇಕದಾಗೂ ರಗಡ ಪಾನ ಅದವ್ರೀ. ನಾಕಮಂದಿ ಧಣೀ ನೆಗವತಾರ ನೋಡ್ರಿ. ಬೇಕಾದ್ದ ಬಾಯಿ ಲೆಕ್ಕಾ ಹೇಳ್ರಿ. ಹಾ ಅನ್ನೂದರಾಗ ಬಿಡಸ್ತಾಳ.

ಜೋಗತಿ : ಈಗರೆ ತಿಳೀತಿಲ್ಲೊ ?

ನಾಣಿ : ತಾವ ಯಾರು ? ಶರಣನಾ.

ಜೋಗತಿ : ಇನ್ನೂ ಯಾರೇನೋ ?

[ಆವೇಶದಿಂದ ಸೆರಗನ್ನು ಇನ್ನಷ್ಟು ಸರಿಯಾಗಿ ಸಿಕ್ಕಿಸಿಕೊಂಡು, ಕುಣಿಯಲು ಅವಕಾಶವಾಗುವಂತೆ ಕಚ್ಚೆ ಹಾಕಿಕೊಳ್ಳುತ್ತಾಳೆ. ನರಳುವ ಧ್ವನಿಗಳು ಇನ್ನೂ ಸ್ಪಷ್ಟವಾಗುತ್ತವೆ. ಜೋಗತಿ ರಭಸದಿಂದ ಕುಣಿಯಲಾರಂಭಿಸಿ ರಂಗವನ್ನು ಮೂರು ಪ್ರದಕ್ಷಿಣೆ ಹಾಕಿ, ಕುಣಿಯುತ್ತಲೇ ಬಳಿಗೆ ಬಂದು ತಲೆಗೂದಲನ್ನು ಮುಖದ ಮೇಲೆ ಬಿಟ್ಟುಕೊಂಡು ನಾಣಯ ಹೊಕ್ಕುಳಿನ ಮೇಲೆ ಕುಡುಗೋಲು ಮಸೆದಂತೆ ಕೂದಲನ್ನು

ಆ ಕಡೆ ಈ ಕಡೆ ಆಡಿಸತೊಡಗುತ್ತಾಳೆ. ಕೆಲ ಹೊತ್ತು ಹೀಗೆ ಮಾಡಿದ ಮೇಲೆ ನಾಣಿ ಸುಮ್ಮನೆ ಅವಾಕ್ಕಾಗಿ ಕೂತಿರುವಾಗ ಜೋರಿನಿಂದ ಅವನ ಹೊಕ್ಕುಳಿಗೆ ಕೂದಲಿನಿಂದ ಕಟಿಯುತ್ತಾಳೆ. ಮತ್ತೆ ಮಸಿದು, ಮತ್ತೆ ಅಪ್ಪಳಿಸಿ ಹೀಗೆ ಮೂರು ಸಲ ಮಾಡಿ ಠೀವಿಯಲ್ಲಿ ನಿಂತು]

ಜೋಗತಿ : ಸಿಕ್ಕಿತೇನ ಗುರುತ !

ನಾಣಿ : ಶರಣಾ ತಾವು ಯಾರು ?

[ನರಳುವ ನೆರಳುಗಳೆಲ್ಲ ಈಗ ಸ್ಪಷ್ಟವಾಗಿ ಕೇಕೆ ಹಾಕಿ ನಗುತ್ತ, ರಂಗದ ಮೂಲೆಮೂಲೆಯಲೆಲ್ಲ ಸ್ತ್ರೀಯರಾಗಿ ಗೋಚರಿಸುತ್ತಾರೆ ಅವರಲ್ಲಿ ಗೀತಾ ಒಬ್ಬಳಿದ್ದಾಳೆ. ಜೋಗತಿ ಚೀರಿ ದೇವರು ತುಂಬಿ ನಡುಗಲಾರಂಭಿಸುತ್ತಾಳೆ. ಉಳಿದ ಸ್ತ್ರೀಯರೆಲ್ಲ ಮಾತಿನ ಮಧ್ಯ ಮಧ್ಯ ಗಹಗಹಿಸಿ ನಕ್ಕು ಓಡಾಡುತ್ತಿದ್ದರೂ ಈ ಮೂವರಿಗೆ ಅವರ ಕಡೆ ಗಮನವಿಲ್ಲ.]

ಜೋಗತಿ : [ ಚೀರುತ್ತ ]
ಒಂಧಲ್ಲೆ ಹುಟ್ಟಿ ಒಂಧಲ್ಲೆ ಬೆಳೆದ ಮತ್ತ ಮರೆತೇನಂತಿ ಯಲೋ—ಏನ್ಹೇಳ್ಲಿ ?

ನಾಣಿ : ಶರಣಾ ಸಿಕ್ಕಿತ ಗುರುತ ?

ಜೋಗತಿ : ಹೇಳ ನಾ ಯಾರು ?

ನಾಣಿ : ಅರಗೊಡ್ಡಿ.
[ಹೆಂಗಸರು ಗಹಗಹಿಸಿ ನಗುತ್ತಾರೆ]

ಜೋಗತಿ : ಯಾರಾ ?

ನಾಣಿ : ಬಯಲಾಟದ ಅರಗೊಡ್ಡಿ. ವಿದೂಷಕ.

ಜೋಗತಿ : ಏನಂದಿ ?

ನಾಣಿ : ದೇವರ ಹತ್ತರ ಹೋಗಿ ದೇವರ್ಹಾಂಗ ನಟನಾ ಮಾಡಾಕ ಕಲತ ಬಂದಿ? ನಿನ್ನ ಬಿಟ್ಟ ಇನ್ನೊಂದರ್ಹಾಂಗ ಆಡಿದರ ಅದೆಲ್ಲಾ ನಟನಾ ಅಲ್ಲೇನ? ನಾಟಕ ಮಾಡಿದರ ನಗೀ ಬರದ ಇನ್ನೇನಾಗತೈತಿ? ಒಂದು ಸಲ ಆದರೂ ಕನ್ನಡೀ ಮುಂದ ಯಾರಿಲ್ಲದಾಗಾದರೂ ಬತ್ತಲಾಗಬಾರದ? ನೋಡಿಕೋಬಾರದ? ಉಟ್ಟ ಉಡುಪ ಯಾರದು? ಅರ ಗೊಡ್ಡಿ ಅಂದರ ಸಿಟ್ಟಿಗಿ ಬರತಿ. ಹೋಗೋಗೆ ನಿನಗ ನೀಡೋದಕ್ಕ ನಮ್ಮಲ್ಲೇನಿಲ್ಲ. ಹೊರಬೀಳು.

ಜೋಗತಿ : [ಚೀರಿ]
ತಿಳಿದ ಮಾತಾಡಲೇ ಮಗನ.

[ನಾಣಿ ಎದ್ದು ನಿಂತು ಪ್ಯಾಂಟಿನ ಜೇಬಿನಿಂದ ಪಿಸ್ತೂಲ ತೆಗೆದೂ ಅವಳಿಗೆ ಗುರಿ ಹಿಡಿದು]

ನಾಣಿ : ಹೊರಬೀಳ.

ಜೋಗತಿ : [ಧ್ವನಿ ಏರಿಸಿ]
ಹುಟ್ಟಹೊಂದಿಲ್ಲದವನನ್ನ ಕೊಂದೇನಂಬೂ ಹುಡುಗಾ, ನೀ ಏನ, ನಿನ್ನ ಪಿಸ್ತೂಲೇನ? ಹಾರಸ್ತು ತಾಕತಿದ್ದರ,

[ರಭಸದಿಂದ ಕುಣಿಯ ತೊಡಗುತ್ತಲೂ ಮೂಲೆಯ ಸ್ತ್ರೀಯರೆಲ್ಲ ಕೇಕೆ ಹಾಕುತ್ತ ಕುಣಿದಾಡುತ್ತಾರೆ]

ನಾಣಿ : ಭೀಮ್ಯಾ.

ಭೀಮ್ಯಾ : ಸಾಹೇಬರ.

ನಾಣಿ : ಹೊರಗಹಾಕ.

ಭೀಮ್ಯಾ : ಶರಣರ ಹೊರಬೀಳ್ರಿ.

ನಾಣಿ : ಹೊರಗ್ಹಾಕ.

ಭೀಮ್ಯಾ : ಶರಣರ ಹೊರಬೀಳ್ರಿ. ಸಾಹೇಬರ ಚೀರಾಪ್ಟೆಟ್ಟ ಯಾಕೊ ಬ್ಯಾರೆ ಕಾಣತತೀ ಹೊರಬೀಳ್ರಿ.

ನಾಣಿ : ಹೊರಗಿನ್ಹಾಕ.

ಭೀಮ್ಯಾ : ಶರಣರ.

[ಎಂದು ಹೇಳುತ್ತಿರುವಂತೆ ಗುಂಡು ಹಾರಿ, ಕುಣಿಯುತ್ತಿದ್ದ ಜೋಗತಿ ಸುಳ್ಳುಬೀಳುತ್ತಾಳೆ. ಸ್ತ್ರೀಯರೆಲ್ಲ ಕಿರುಚುತ್ತ ರಂಗದ ಸುತ್ತ ಚೆಲ್ಲಾ ಪಿಲ್ಲಿಯಾಗಿ ಓಡ್ಯಾಡಿ ಒಬ್ಬೊಬ್ಬರೇ ಓಡಿ ಹೋಗದ ರಂಗ ಒಮ್ಮೆಲೆ ಶಾಂತವಾಗುತ್ತದೆ. ಗುಂಡು ಹಾರಿಸಿದ ಭಂಗಿಯಲ್ಲೇ ನಾಣಿ ದಿಗ್ಭ್ರಮೆಯಿಂದ ನಿಂತಿದ್ದಾನೆ. ಭೀಮ್ಯಾ ಬಾಯಿ ತೆರೆದವನು ತೆರೆದುಕೊಂಡೇ ನಿಂತಿದ್ದಾನೆ. ಅಷ್ಟರಲ್ಲಿ ಪೋಲೀಸರ ಸೀಟಿ ಧ್ವನಿ. ಮೊದಲು ಒಂದು, ಆಮೇಲೆ ಅನೇಕ ಕೇಳಿ ಫೋಜದಾರನೊಬ್ಬ ನಾಲ್ಕೈದು ಜನ ಪೋಲೀಸರನ್ನು ಕೂಡಿಕೊಂಡು ಪಿಸ್ತೂಲ ಹಿಡಿದುಕೊಂಡೇ ಬರುತ್ತಾನೆ. ಭೀಮ್ಯಾ ಹೆದರಿ ನಾಣಿಯನ್ನು ಅಲುಗೂತ್ತಲೂ ಎಚ್ಚರವಾಗಿ ಗಡಬಡಿಸಿ ಓಡಿಬಂದು ಗಪ್ಪನೆ ಫೋಜದಾರನ ಕಾಲು ಹಿಡಿದುಕೊಳ್ಳುತ್ತಾನೆ.]

ನಾಣಿ : ಸಾಹೇಬರ, ಸಾಹೇಬರ ನಾನಲ್ರೀ, ಒಳಗೆ ಓಡಿಹೋದ. ಇಲ್ಲೆ ಮನ್ಯಾಗ ಅಡಗಿರ ಬೇಕ್ರಿ. ಅಲ್ಲೇನೋ ?

ಭೀಮ್ಯಾ : ಹೌಂದ್ಹೌಂದ್ರಿ ಕೈಯಾಗ ಪಿಸ್ತೂಲೈತ್ರಿ.

[ನಾಣಿ ಗಡಬಡಿಸಿ ಪಿಸ್ತೂಲೆಸೆಯುವನು?]

ಗುರಿ ಹಿಂಗೆಂದೂ ಹಿಡಿದಾವಲ್ರಿ.

ನಾಣಿ : ಹೊಡೆದ ಹಾಂಗ ನಿಂತಿದ್ರಿ. ನಿಮ್ಮ ಸೀಟಿ ಕೇಳಿ ಓಡಿಹ್ವಾದ್ರಿ. ಅಲ್ಲೇನೋ ?

ಭೀಮ್ಯಾ : ಹೌಂದ್ಹೌಂದ್ರಿ. ಹೊಕ್ಕಳವ್ಯಾಲ ರಗತ ಇನ್ನೂ ಹತ್ತಿರ ಬೇಕ್ರಿ.

ಫೋಜದಾರ : ಹೆಂಗದಾನವ ?

ಭೀಮ್ಯಾ : ಎರಡ ಕಾಲಾ, ಎರಡ ಕೈಯಾ, ಒಂದ ಮೋತಿ. ಚೆಲು ವಂದರ ಚೆಲುವಂತ, ನಮ್ಮ ಸಾಹೇಬರ ಹೇಳತಿದ್ರುರೀ ?

ನಾಣಿ : ನಿಮ್ಮ ಹೆಂಡರನೆಲ್ಲಾ ಅವ ಓಡಿಸಿಕೊಂಡ ಬಂದಿದ್ದರಿ, ಅಲ್ಲೇನೋ ?

ಭೀಮ್ಯಾ : ಹೌಂದಹೌಂದ್ರಿ. ಇಕ್ಕ, ಈಗ ಅವರೆಲ್ಲಾ ಓಡಿಹ್ವಾದರ್ರಿ.

ಫೋಜದಾರ : ಇಲ್ಲಿ ಯಾಕ ಬಂದಿದ್ದವ ?

ಭೀಮ್ಯಾ : ಸಾಹೇಬರ ಯಾಕ ಬಂದಿದ್ದರೀ ?

ನಾಣಿ : ಅವನ ಮನೀಗೂ ನಮ್ಮ ಮನಿಗೂ ನಡು ಒಂದು ಗ್ವಾಡಿರಿ.

ಫೋಜದಾರ : ಈ ಜೋಗತಿ ಯಾಕೆ ಬಂದಿದ್ದು ?

ಭೀಮ್ಯಾ : ಭೇಟಿ ಆಗಾಕರಿ.

ಫೋಜದಾರ : ಆತೇನ ?

ಭೀಮ್ಯಾ : ಅಷ್ಟರಾಗ ಧಡಂಡುಡಿಕಿ ಆತಲ್ರಿ.

ಫೋಜದಾರ : ಏನವನ ಹೆಸರ ?

ಭೀಮ್ಯಾ : ಸಾಹೇಬರ ಏನ್ರಿ ?

ನಾಣಿ : ಈ ಈ ಈ, ಈಈ ಮುದುಕರು ಅವಗ ದೇವರೂ ದೇವರೂ ಅಂತ ಕರೀತಿದ್ದರ ನೋಡ್ರಿ.

[ಕೂಡಲೇ ಫೋಜದಾರ ಬೇರೆ ಪೋಲೀಸರಿಗೆ ಒಂದೊಂದು ದಿಕ್ಕಿನಲ್ಲಿ ಸಂಶೋಧಿಸುವಂತೆ ಸೂಚಿಸಿ ತಾನೊಂದು ದಿಕ್ಕಿನಲ್ಲಿ ಮಾಯವಾಗು ತ್ತಾನೆ. ಭೀಮ್ಯಾ ಸಹ ಅವರೊಂದಿಗೆ ಹೋದಾಗ ನಾಣಿ ಬಹಳ ಕುತೂಹಲದಿಂದ ಕಾಯುತ್ತಿರುತ್ತಾನೆ. ಕೆಲ ಸಮಯವಾದ ಮೇಲೆ ಫೋಜದಾರ ಎರಡು ಮೂರಡಿ ಎತ್ತ ರದ ಗೊಂಬೆಯೊಂದನ್ನೆತ್ತಿಕೊಂಡು ತರು

ತ್ತಾನೆ. ಅದರ ಪೊಕ್ಕುಳಲ್ಲಿ ಹಸೀ ನೆತ್ತರಿದೆ. ನೋಡಿದೊಡನೆ ನಾಣಿ ಆನಂದಭರಿತನಾಗಿ ಕಸಿದುಕೊಂಡು ತಬ್ಬಿಕೊಳ್ಳುತ್ತಾನೆ. ಕಣ್ಣೀರು ಸುರಿಸುತ್ತ]

ನಾಣಿ : ನಾನೂ ! ನಾನು ! ಇಷ್ಟ ದಿನ ಎಲ್ಲಿದ್ದೆ ! ಎಷ್ಟು ಹುಡಿಕಿದೆ ! ಬೀದಿ ಮನೀ ಮಠ ದೇಶ ಪ್ರದೇಶ ಅಲೆದಾಡಿದೆ ! ಸುದ್ದಿಲ್ಲ. ಪತ್ರ ಇಲ್ಲ. ಹುಡಿಕಿದೆ! ಚಿಂತೀ ಮಾಡಬ್ಯಾಡ. ಒಳ್ಳೊಳ್ಳೆ ಡಾಕ್ಟರದಾಗ ನಾನೂ ನೋಡಿದ್ಯೂಕಡಲೆ ಎಲ್ಲಾರ ಪತ್ತಾ ನೆನಪಾಗತಾವ. ಆ ಪೋಲೀಸರಿಗಿ ಹೇಳಿಬಿಡ. ನಾ ಕೊಂದಿಲ್ಲ ಅಂತ ಹೇಳ.

[ಗೊಂಬೆ ಮಕ್ಕಳ ಧ್ವನಿಯಲ್ಲಿ ವಾವಾ ? ಎಂದು ಹೇಳುತ್ತದೆ]

ಏನಂದಿ ? ವಾವಾ ! ವಾವಾ ! ನೆನಪ ಆಗೋವಲ್ದಲ್ಲ. ಡಿಕ್ಷನರಿ, ಡಿಕ್ಷನರಿ.

[ಗೊಂಬೆಯನ್ನು ಕುರ್ಚಿಯ ಮೇಲೆ ಕೂಡ್ರಿಸಿ, ಒಳಗೋಡಿ, ಡಿಕ್ಷನರಿ ತರುತ್ತಾನೆ. ವಾ ! ವಾ! ವಾ! ವಾ! ಎಂದು ಹೇಳುತ್ತಾ ಹುಡುಕು ತ್ತಾನೆ. ಮತ್ತೆ ಓಡಿಹೋಗಿ ಇನ್ನೊಂದು ತರುತ್ತಾನೆ. ಇನ್ನೊಂದು, ಮತ್ತೊಂದು ಹೀಗೆ ರಾಶಿ ರಾಶಿ ಡಿಕ್ಷನರಿ ತಂದು ಭಾವುಕನಾಗಿ ಹುಡುಕುತ್ತಿರುವಂತೆ ಫೋಜದಾರ ಆ ಗೊಂಬೆ ಯ ಅಂಗಾಂಗಗಳನ್ನು ಕಿತ್ತು ರಂಗದ ಮೂಲೆ ಮೂಲೆಗೆ ಪ್ರೇಕ್ಷಕರಲ್ಲಿ ಎಸೆಯುತ್ತಾನೆ. ಬರೀ ಡದ ಉಳಿದ ಮೇಲೆ ಜೋಗತಿಯ ಶವದ ಮೇಲೆ ಇಟ್ಟು, ಬೇಡಿ ತೆಗೆದು ನಾಣಿ ಚೀರುತ್ತಿ ದ್ದರೂ, 'ಯಾಕರಿ ನಾನಲ್ಲರೀ' ಎನ್ನುತ್ತಿ ದ್ದರೂ ಅವನನ್ನು ಬಂಧಿಸಿ ಹೆಣದ ಎದುರಿಗೆ ಕುರ್ಚಿಯಲ್ಲಿ ಕೂರಿಸಿದಾಗ, ಕರುಣೆ ಬರುವ

ಹಾಗೆ ಅಳುತ್ತಾನೆ. ಅಷ್ಟರಲ್ಲಿ ಭೀಮ್ಯಾ ಗಂಟು ಕಟ್ಟಿ ಹೊರಬರುತ್ತಾನೆ.]

ಪೋಜದಾರ : ನಡೀಲೇ ನಿನಗ ಪೋಲೀಸ ಕೆಲಸಾ ಕೊಡುತೇನೆ.

[ಎಂದು ಹೇಳಿ ಎಲ್ಲರೂ ಹೊರಟಾಗ, ನಾಣಿ ಅಳುತ್ತ ಬೆನ್ನು ಹತ್ತಬೇಕೆನ್ನುತ್ತಾನೆ. ಅಷ್ಟರಲ್ಲಿ ಪೋಜದಾರ ಉಳಿದ ಪೋಲೀಸರಿಗೆ ಕಣ್ಣಸನ್ನೆ ಮಾಡುತ್ತಲೂ ಅವರು ನಾಣಿಯನ್ನು ಮೊದಲಿನ ಭಂಗಿಯಲ್ಲೇ ಕೂರಿಸಿ, ಹಗ್ಗದಿಂದ ಕುರ್ಚಿಗೆ ಬಂಧಿಸುತ್ತಾರೆ. ಅವನು ಒದ್ದಾಡಿ, ಹಣ ನೋಡಿಲಾರದೆ ಕಿರುಚುತ್ತಿದ್ದರೆ ಉಳಿದವರೆಲ್ಲ ಹೋಗುತ್ತಾರೆ. ನಾಣಿ ಒದ್ದಾಡಿ ಅಳುತ್ತ ಚೀರುತ್ತಿರುವಂತೆ ಬೆಳಕು ಕಂದಿ, ಕಂದಿ ತೆರೆ ಬೀಳುತ್ತದೆ]

ಪಾತ್ರಗಳು :

ರಾಮಸ್ವಾಮಿ
ಸೋಮಶೇಖರ
ರಂಗಸ್ವಾಮಿ
ಶಾಸ್ತ್ರಿಗಳು
ಶಾಸ್ತ್ರಿಗಳ ಮಗ
ಡಾಕ್ಟರ ಜಾನಕೀರಾಮ
ರಮಾ
ಇಬ್ಬರು ಪೋಲೀಸನವರು
ಇಬ್ಬರು ವಯಸ್ಸಾದವರು

"For give us for living
while you are dead—"

*JEAN PAREL SARTRE*

[ರಾಮಸ್ವಾಮಿ. ಸೋಮಶೇಖರ – ರಾಮ ಸ್ವಾಮಿಯ ಮನೆಯಲ್ಲಿ. ಇಬ್ಬರ ಮುಖದಲ್ಲೂ ಯಾವುದೋ ಅನಾಹುತವಾಗಿರುವ ಚಿಂತೆ]

ಸೋಮಶೇಖರ : ಯಾತಕ್ಕೆ ಯೋಚ್ನೆ. ಸಾಯಂಕಾಲದೊಳಗೆ ಯಾವ ಗುತರ್ಲೂ ಇಲ್ದೆ ಹಾಗೇ ಮಾಡ್ಬಿಟ್ಟು ಸುಮ್ನೆ ಇದ್ಬಿಟ್ರೆ ಆಗ್ಹೋಯ್ತು.

ರಾಮಸ್ವಾಮಿ: ಅದ್ಸರಿ. ಹೇಗಾದರೂ ಆಗುತ್ತೆ ಅದು. ನನಗದಲ್ಲ ಯೋಚ್ನೆ. ನನಗೆ ನನ್ನ ಬದುಕು ಎಷ್ಟೋ ಅಷ್ಟು ಸಾಕು. ಸತ್ಯವಾಗ್ಲೂ ಹೇಳ್ತೀನಿ. ಹೀಗಾಗ್ಲಿ ಅಂತ ನಂಗೆ ಖಂಡಿತಾ ಮನಸ್ಸಲ್ಲಿರಲಿಲ್ಲ. ಬೇರೆ ಯಾರ ಉಸಿರ್ನೂ, ಆಸೇನೂ ಗೋರೀಲಿ ಹೂತಿಡಬೇಕು ಅಂತ ನಂಗೆ ಖಂಡಿತಾ ಇಷ್ಟ ಇಲ್ಲ. ನಂದೇನೂ ತಪ್ಪಿಲ್ದೆ ಇದ್ರೂ ಎಲ್ಲಾಗರ್ಲೂ ನನ್ಮೇಲೇ ಗುಮಾನಿ ಬರುತ್ತೆ. ಈಗ ನಾನು ಅವರ ದಾರೀಗೆ ಯಾವ ಥರ ಅಡ್ಡವಾಗಿದ್ದೆ ಅಂತ ನಂಗೆ ಖಂಡಿತಾ ಅರ್ಥವಾಗ್ತಿಲ್ಲಪ್ಪ.

ಸೋಮಶೇಖರ: ಈಗ ನಿಮ್ಮನೇಗೆ ವರ್ತಮಾನ ಕೊಡಬೇಕಲ್ಲವ?

ರಾಮಸ್ವಾಮಿ: ಬೇಡ ಬೇಡ ಯಾವ ಗಲಾಟೇನೂ ಇಲ್ದೆ ಎಲ್ಲಾ ಮೆತ್ತಗೆ ಮುಗಿಸಿಬಿಡೋಣ.

ಸೋಮಶೇಖರ: ಯಾರಿಗೆ ತಿಳ್ಸಿದ್ರೆ ಏನಂತೆ ಈಗ. ಇದ್ರಲ್ಲಿ ನಿನ್ನ ತಪ್ಪೇನೂ ಇಲ್ವಲ್ಲ.

ರಾಮಸ್ವಾಮಿ: ನನ್ನ ತಪ್ಪಿಲ್ಲ ಅಂದ್ರೆ ನಮ್ಮನೇವ್ರು ಯಾರೂ ನಂಬೋದೇ ಇಲ್ಲ.

ಸೋಮಶೇಖರ: ಇರೋ ವಿಷಯ ಹೇಳಿದ್ರೆ ಯಾಕೆ ನಂಬಲ್ಲ. ನಾನು ಹೇಳ್ತೀನಿ. ನಂಬ್ತಾರೆ,

ರಾಮಸ್ವಾಮಿ : ನಿನಗೆ ನೂರಾರು ಭ್ರಮೆ ಇದೆ. ಅದ್ರಲ್ಲಿ ಇದೂ ಒಂದು.

ಸೋಮಶೇಖರ : ಯಾಕೆ ?

ರಾಮಸ್ವಾಮಿ : ಯಾಕೇಂದ್ರೆ ! ನಾನು ತಪ್ಪು ಮಾಡ್ತಾ ಇದ್ರೆ ಮಾತ್ರ ಸರಿಯಾಗಿರೋದು, ಅಂತ ಅವರ ನಂಬಿಕೆ. ನಾನು ಯಾವತ್ತಾದ್ರೂ ಏನಾದ್ರೂ ತಪ್ಪು ಮಾಡ್ಲಿಲ್ಲ ಅಂದ್ರೆ ಅವರಿಗೆ ಅನುಮಾನ ಶುರುವಾಗುತ್ತೆ. ನಾನು ರಾಮಸ್ವಾಮಿನೋ ಅಲ್ವೋ ಅಂತ. ನನ್ನ ತಪ್ಪಲ್ಲಿ ತಮ್ಮ ತಪ್ಪನ್ನ ಮುಚ್ಕೋ ಬೌದು ನೋಡು. ಅಂಥಾದ್ರಲ್ಲಿ ಈ ವಿಷ್ಯ ನಂಬ್ತಾರಾ ?

ಸೋಮಶೇಖರ : ಹಾಗಿದ್ರೆ ಯಾರ್ಗೂ ಹೇಳ್ದೇನೇ ಎಲ್ಲಾ ಮುಗ್ಸೋದೀಗ್ಲಿ ಅಂತೀಯಾ ?

ರಾಮಸ್ವಾಮಿ : ಕಣೆ ಕೇಳು.

ಸೋಮಶೇಖರ : ಸರಿ. ಹಾಗಿದ್ರೆ ನೀನು ಈವತ್ತೆ ಮದ್ವೆ ಆಗ್ಬಿಡ್ಬೇಕು.

ರಾಮಸ್ವಾಮಿ : ಈವತ್ತು.

ಸೋಮಶೇಖರ : ಈವತ್ತೇ ಯಾಕೆ. ಮನೇಲಿ ಇಂಥಾದ್ದು ನಡಿದಿರೋವಾಗ ಮದುವೆ ಆಗೋಕೆ Guilt ಅನ್ಸುತ್ತಾ ?

ರಾಮಸ್ವಾಮಿ : ನನ್ನ ಜನ್ಮದಲ್ಲೇ ಇನ್ಮೇಲೆ Guilt ಬರೋಕೆ ಸಾಧ್ಯ ಇಲ್ಲ. ಮದ್ವೆ ಯಾರ್ನ ?

ಸೋಮಶೇಖರ : ಲಲ್ತನ್ನ.

ರಾಮಸ್ವಾಮಿ : ನಿಂಗೆಲ್ಲೋ ತಲೆ ಕೆಟ್ಟದೆ. ಬುದ್ಧಿ ಇದ್ದೋರು ಮದ್ವೆಗಿದ್ವೆ ಮಾಡ್ಕೊಳ್ತಾರೇನೋ.

ಸೋಮಶೇಖರ : ಆ ವೇದಾಂತ ಎಲ್ಲ ನಂಗೊತ್ತು. ಇವತ್ತು ಸಂದರ್ಭ ಹಾಗೆ ಬಂದಿದೆ, ಇವತ್ತೆ ನಿನ್ನ ಮದ್ವೆ ರಿಜಿಸ್ಟರ ಆಗಬೇಕು.

ರಾಮುಸ್ವಾಮಿ : ಈವತ್ತು ಭಾನುವಾರ, Register ಆಫೀಸು ರಜ.

ಸೋಮಶೇಖರ : ಹೋಗ್ಲಿ. Register ಮದ್ವೇನೇ ಬೇಡ.

ರಾಮುಸ್ವಾಮಿ : ಮತ್ತೆ ಮನೇಲಿ ಗುಟ್ಟಾಗಿ ತಾಳಿ ಕಟ್ಟಿ ಸುಮ್ನೆ ಆಗೋ ಸಾಮ್ರಾಜ್ಯಕ್ಕೆ ತಾಳಿ ತಾನೆ ಯಾಕೆ ಕಟ್ಬೇಕು ?

ಸೋಮಶೇಖರ : ಗುಟ್ಟಾಗಿ ಬೇಡ. ಶಾಸ್ತ್ರೋಕ್ತವಾಗಿ, ವಿಜೃಂಭಣೆ ಯಾಗಿ, ವಾಲಗದ ಸಮೇತ ಸುತ್ತಲ ಹತ್ತು ಜನಕ್ಕೆ ಗೊತ್ತಾಗೋ ಹಾಗೆ.

ರಾಮುಸ್ವಾಮಿ : ಯಾಕೆ ?

ಸೋಮಶೇಖರ : ಮದ್ವೆ ಗಲಾಟೇಲಿ ಆಗಿರೋದೆಲ್ಲಾ ಮುಚೋಗ್ಲಿ ಅಂತ.

ರಾಮುಸ್ವಾಮಿ : ಹೌದಲ್ವ ಸರಿ ಲಲ್ತ ಒಪ್ತಾಳ ?

ಸೋಮಶೇಖರ : . ನಾನು ಒಪ್ಪಿಸ್ತೀನಿ. ಸಂದರ್ಭ ವಿವರಿಸಿದ್ರೆ ತಾನೇ ಒಪ್ತಾಳೆ. ಈಗ ಹೆಚ್ಚು ಟೈಮಿಲ್ಲ. ಮಧ್ಯಾಹ್ನ ಮೂರು ಗಂಟೇಗೆ ಲಲ್ತಾನು ಕರ್ಕೊಂಡು, ಒಂದಷ್ಟು ಜನ ಸ್ನೇಹಿತ ರ್ನೂ ಕರ್ಕೊಂಡು, ವಾಲಗ, ಬ್ಯಾಂಡು ಎಲ್ಲಾ ತಗೊಂಡು ಒಂಬ್ಡಿತ್ತೀನೀ. ಅಷ್ಟು ಹೋತ್ಗೆ ಇಲ್ಲಿ ಎಲ್ಲಾ ಸರಿ ಮಾಡ್ಬಿಟ್ಟಿರು. ಈಗೆಷ್ಟು ಟೈಮು ?

ರಾಮುಸ್ವಾಮಿ : ಏಳು ಗಂಟೆ [ಬಾಗಿಲ ಕಡೆ ನೋಡುತ್ತಾ] ಅರೆ, ತೋರಣ ಯಾರು ಕಟ್ಟಿದ್ರು ?

ಸೋಮಶೇಖರ : ನಾನು ಡಾಕ್ಟ್ರು ಇಬ್ರೂ ಕಟ್ಟಿದ್ವಿ. ನೀನು ಒಳಗಿದ್ದಾಗ. ಅವತ್ತು ಮದ್ವೆ. ಎಲ್ಲಾ ಶಾಸ್ತ್ರೋಕ್ತವಾಗಿ ಆಗ್ಬೇಕು ನೋಡು [ನಗುತ್ತಾನೆ].

ರಾಮುಸ್ವಾಮಿ : ಹೆ ಹೆ ಬುದ್ಧಿವಂತ ಕಣಯ್ಯ ನೀನು, ಪರ್ವಾ ಇಲ್ಲ.

ಸೋಮಶೇಖರ : ಅಯ್ಯೋ ಆ ವಿಷಯ ಯಾಕೆ ಹೇಳ್ತೀಯ, ನಾನು ನೋಡೋಕೆ ಸ್ವಲ್ಪ ಒಂಥರಾ ಇದ್ರೂ ಇನ್ನೂ ತುಂಬಾ

ಬುದ್ಧಿವಂತ. ಈ ಇಡೀ ರಾಷ್ಟ್ರದಲ್ಲೇ ಬುದ್ಧಿಗೆ ನಾನು ಹೆಸರುವಾಸಿ ಇನ್ನು ನಾನು ಬರಲಾ ?

ರಾಮಸ್ವಾಮಿ : ಹೋಗ್ತ ಹಾಗೇ ಡಾಕ್ಟರ ಜಾನಕೀರಾಮನ ಕಳಿಸ್ಬಿಟ್ಟು ಹೋಗು. ಯಾಕೋ ತಿರ್ಗ ಎದೆ ನೋವು ಶುರುವಾಗಿದೆ.

ಸೋಮಶೇಖರ : ಹೂಂ. ಕಳಿಸ್ತೀನಿ. ಹಾಗೇ ಪುರೋಹಿತರಿಗೂ ಹೇಳ್ಬಿಡ್ತೀನಿ. ಇಲ್ಲೇ ಬೇಕುಬೇಕಾದೋರ್ಗೆಲ್ಲ ಹೇಳ್ಬಿಡ್ತೀನಿ.

ರಾಮಸ್ವಾಮಿ : ನಂಗೆ ಎದೆ ನೋವುಂತಾನಾ.

ಸೋಮಶೇಖರ : ಹೂಂ ಮಂದ್ವೇನೂ ಒಂಥರಾ ಎದೆ ನೋವೇ, ನೋಡು ಇಲ್ಲಿನ ಕೆಲ್ಸ ಮುಗ್ಸಿ ಬಿಡೋವಷ್ಟರಲ್ಲಿ ಯಾರಾರ್ಗಾದ್ರೂ ಸಳಿವು ಗಿಳಿವು ಹತ್ತಿದ್ರೆ ಏನೂ ಗೊತ್ತಿಲ್ದೋನ ಥರಾನೇ ನಗ ನಗ್ತಾ ಇದ್ಬಿಡು.

ರಾಮಸ್ವಾಮಿ : ಅಂದಾಗೇ ಆ ಕಾಗ್ದ ನಿನ್ನ ಹತ್ರಾನೇ ಇದೆ ತಾನೆ ?

ಸೋಮಶೇಖರ : [ಜೇಬುಗಳನ್ನು ತಡಕಾಡಿ] ಹೂಂ, ಇಗೋ.

ರಾಮಸ್ವಾಮಿ : ಹುಷಾರು. ಸಮಯಕ್ಕೆ ಬೇಕಾದೀತು.

ಸೋಮಶೇಖರ : ಸಮಯಕ್ಕೆ ಬೇಕಾದೀತು ಅಂತಲೇ ನಾನೂ ಇಟ್ಕೊಂಡಿರೋದು. Right ರೆಡಿಯಾಗಿರು. ಬಂದ್ಬಿಡ್ತೀನಿ 3 ಗಂಟೆಗೆ. ವಾಲಗ, ಲಲ್ತ, ಎಲ್ಲಾ [[Exit] ರಾಮಸ್ವಾಮಿ ಬಾಗಿಲು ಹಾಕಿಕೊಂಡು ಬಂದು ಒಳಗೆ ಹೋಗುತ್ತಾನೆ. 4-5 ಸೆಕೆಂಡುಗಳ ನಂತರ ಬರುತ್ತಾನೆ. ಬಾಗಿಲು ತಟ್ಟುವ ಶಬ್ದ. ಬಾಗಿಲು ತೆರೆಯುತ್ತಾನೆ. ಒಬ್ಬ ಜಬರದಸ್ತಾದ, ಎಲ್ಲೋ ನೋಡಿರಬಹುದಾದ ಆದರೆ ಜ್ಞಾಪಕವಿಲ್ಲದಂಥ ವ್ಯಕ್ತಿ ಒಳಗೆ ನಿದಾನವಾಗಿ ಬರುತ್ತಾನೆ. ಕೈಯಲ್ಲೊಂದು News paper]

ವ್ಯಕ್ತಿ : ನಾನ್ಯಾರೂಂತ ಅನುಮಾನ ಪಡ್ತಿದೀರಿ ಅಂತ ಕಾಣುತ್ತೆ ?

ರಾಮಸ್ವಾಮಿ : ಇಲ್ಲ. ಅನುಮಾನವೇನಿಲ್ಲ, ಎಲ್ಲೋ ನೋಡಿದ್ದಾಗೆ ಜ್ಞಾಪಕ,

ವ್ಯಕ್ತಿ : ಗೊತ್ತಾಗ್ಲಿಲ್ವ ? ನಾನು ರಂಗಸ್ವಾಮಿ ?

ರಾಮಸ್ವಾಮಿ : ಯಾವ ರಂಗಸ್ವಾಮಿ ?

ವ್ಯಕ್ತಿ : ಎಸ್. ರಂಗಸ್ವಾಮಿ.

ರಾಮಸ್ವಾಮಿ : ಎಸ್. ರಂಗಸ್ವಾಮಿ ಯಾರೊ ?

ವ್ಯಕ್ತಿ : ಯಾರೂಂದ್ರೆ, ನಾನೇ. ನಾನೇ ಎಸ್. ರಂಗಸ್ವಾಮಿ.

ರಾಮಸ್ವಾಮಿ : ಸಂತೋಷ ನಾನು ರಾಮಸ್ವಾಮೀಂತ. ಇಲ್ಲೆ ಕಾಲೇಜ್ನಲ್ಲಿ ಲೆಕ್ಚರರ ಆಗಿದ್ದೀನಿ.

ರಂಗಸ್ವಾಮಿ : ಗೊತ್ತು. ಗೊತ್ತು. ನಾನು ನಿಮ್ಮನ್ನು ಬೇಕಾದಷ್ಟು ಸಾರಿ ನೋಡಿದ್ದೀನಿ, ನೀವು ನನ್ನ ನೋಡಿದ್ದೀರ ?

ರಾಮಸ್ವಾಮಿ : ಬನ್ನಿ ಬನ್ನಿ ಕೂತ್ಕೊಳ್ಳಿ ಹೌದು, ಹೌದು, ನಾನೂ ನಿಮ್ಮನ್ನು ನೋಡಿದ್ದೀನಿ. ನೀವು "S" ರಂಗಸ್ವಾಮಿ.

ರಂಗಸ್ವಾಮಿ : ಹೌದೌದು,

ರಾಮಸ್ವಾಮಿ : ಆದರೆ ಎಲ್ಲಿ ನೋಡಿದ್ದೀನೀಂತ....

ರಂಗಸ್ವಾಮಿ : ನೀವು ಹುಡುಗ ಆಗಿದ್ದಾಗ, ಮನೇವ್ರು ಜತೆ ಕೋಲಾರ ದಲ್ಲಿದ್ರಲ್ಲ.

ರಾಮಸ್ವಾಮಿ : ಹೂಂ.

ರಂಗಸ್ವಾಮಿ : ನಾನಾಗ ಅದೇ ಬೀದೀಲಿ ಕಡೆ ಮನೇಲಿದ್ದೆ.

ರಾಮಸ್ವಾಮಿ : ಹಾಂ, ಹೌದು, ಹೌದು ನನಗೀಗ ಜ್ಞಾಪಕ ಬಂತು. ತುಂಬಾ ಸಂತೋಷ ಈಗೆಲ್ಲಿ ಇದ್ದೀರ ?

ರಂಗಸ್ವಾಮಿ : ಇಲ್ಲೇ ಇದೇ ಊರಲ್ಲೆ.

ರಾಮಸ್ವಾಮಿ : ನಾನೀ ಮನೇಲಿದ್ದೀನಿಂತ ನಿಮಗ್ಯಾರು ಹೇಳಿದ್ರು ?

ರಂಗಸ್ವಾಮಿ : ಯಾರು ಯಾಕೆ ಹೇಳ್ಬೇಕು. ನಾನು ನಿಮಗೆ ದೂರದ ಬಳಗಾ ಕೂಡ, ನಿಮ್ತಂದೆ ಭಗವಂತರಾಯ್ರು ನನಗೆ ತುಂಬಾ ಸ್ನೇಹಿತ್ರು. ಇಬ್ರೂ ಒಂದೇ ಥರ. ಒಂದೇ ಹಾಸ್ಗೇಲಿ

ಬೆಳೆದವ್ರು. ಯಾವಾಗ಼್್ಲೂ ಜತೇಲೇ ಇರ್ತಿದ್ವಿ. ಇಬ್ರೂ ಒಬ್ರೇನೇನೋ ಅನ್ನೋ ಹಾಗಿದ್ವಿ. ಎಷ್ಟೋ ಸಾರಿ ನಮ್ಮಿಬ್ರಲ್ಲಿ ನಾನು ಯಾರು ಅವ್ರು ಯಾರು ಅಂತ ನಮಗೇ confuse ಆಗ್ಬಿಡ್ತಾ ಇತ್ತು. [ನಗುವನು]

ರಾಮುಸ್ವಾಮಿ : ಹೌದು, ತುಂಬಾ ಸಂತೋಷ.

ರಂಗಸ್ವಾಮಿ : ಆದ್ರೆ ಅವ್ರು ಮದುವೆ ಆಗಬೇಕು ಅಂದ್ಕೊಂಡಿದ್ದ ಹುಡುಗೀಗೆ ನನಗೆ ಮದ್ವೆ ಆಗೋಯ್ತು..

ರಾಮುಸ್ವಾಮಿ : ತುಂಬಾ interesting ಆಗಿದೆ ಆಮೇಲೆ ?

ರಂಗಸ್ವಾಮಿ : ಆಮೇಲೇನು, ಅವ್ರು ಬೇರೆ ಮದ್ವೆ ಆದ್ರು. ಅವರ ಸಂಸಾರ ಅವರ್ದು. ನನ್ನ ಸಂಸಾರ ನಂದು.

ರಾಮುಸ್ವಾಮಿ : ನಿಮಗೆಷ್ಟು ಜನ ಮಕ್ಳು ?

ರಂಗಸ್ವಾಮಿ : ಒಬ್ಬನೇ ಒಬ್ಬ, ನಿಮ್ಮದೇ ವಯಸ್ಸು. ಮೊದ್ದು ಶಿಖಾಮಣಿ ಥರ ಕೂತಿರ್ತಾನೆ, ಇದು ಮಾಡು ಅದು ಮಾಡು ಅಂತ ಪ್ರತಿಯೊಂದಕ್ಕೂ ನಾನೇ ಹೇಳ್ಬೇಕು. ಅವ್ನಾಗಿ ಅವ್ನೇ ಏನೂ ಮಾಡಲ್ಲ.

ರಾಮುಸ್ವಾಮಿ : ಕೆಲವ್ರು ಅದೇ ಥರಾ ಇರ್ತಾರೆ.

ರಂಗಸ್ವಾಮಿ : ಅವ್ನ ಸ್ವಂತ ಏನೂ ಬೇಡ್ಲೇ ಬೇಡ್ವೆ? ಎಲ್ಲಾನೂ ಅಪ್ಪಾನೇ ಹೇಳಬೇಕೂಂದ್ರೆ?

ರಾಮುಸ್ವಾಮಿ : ಸರಿಹೋಗ್ತಾನೆ.

ರಂಗಸ್ವಾಮಿ : ಅಂದ್ಹಾಗೆ ನಿಮ್ಮ ಸ್ನೇಹಿತ್ರು ಸಿಕ್ಕಿದ್ರು ಈಗ.

ರಾಮುಸ್ವಾಮಿ : ಹಾಗಾದ್ರೆ ನನ್ನ ಮದ್ವೆ ವಿಷ್ಯ ಹೇಳಿದ್ನ? ನಾನೂ ನೀವು ಬೇಕಾದೋರು ಅಂತ ಅವ್ನಿಗೆ ಹ್ಯಾಗ್ಗೊತ್ತು ? ಖಂಡಿತಾ ಬರಬೇಕು ಸಾಯಂಕಾಲ.

ರಂಗಸ್ವಾಮಿ : ಓಹೋ ಮದ್ವೇನಾ ನಿಂಗೆ. ನಂಗೆ ಅವ್ರು ಆ ವಿಷ್ಯ ಹೇಳ್ಲೇ ಇಲ್ವಲ್ಲ! ಅದಕ್ಕೆ ಮನೇಲೆಲ್ಲ ತೋರಣಾ ಕಟ್ಟೇದ್ದೀರ, ಸರಿ

ಸರಿ Congratulations. ಆದ್ರೆ ತೋರಣ ಒಳ್ಳೆ ಖೈದಿಗಳನ್ನ ಬಿಗಿಯೋಂಥ ಹಗ್ಗದಲ್ಲಿ ಕಟ್ಟಿದ್ದೀರ. ಸ್ವಲ್ಪ ದಪ್ಪ ಆಗ್ಹೋಯ್ತು.

ರಾಮಸ್ವಾಮಿ : ನನ್ನ ಹೆಂಡ್ತೀನ ನೀವು ನೋಡಿಲ್ವ ?

ರಂಗಸ್ವಾಮಿ : ಅವ್ರು ತುಂಬಾ ದಪ್ಪನಾ ? ಯಾರು ?

ರಾಮಸ್ವಾಮಿ : ಸುಮ್ನೆ ಹೇಳ್ದೆ ಅಷ್ಟೆ. ದಪ್ಪ ಇಲ್ಲ, ಇಲ್ಲೆ ಹಾಸ್ಟೆಲಿನಲ್ಲಿದ್ದಾರೆ. ಲಲ್ತಾಂತ.

ರಂಗಸ್ವಾಮಿ : ಇವತ್ತೇ ಮದ್ವೆ ಅಂದ್ರಿ. ಮತ್ತೆ ಮನೇಲೇನೂ ಗಲಾಟೇನೇ ಕಾಣಲ್ಲ, ನಿಮ್ಮಮ್ಮ, ನಿಮ್ಮಪ್ಪ, ನಿಮ್ತಂಗಿ, ಯಾರೂ ಕಾಣ್ತಲೇ ಇಲ್ಲ.

ರಾಮಸ್ವಾಮಿ : ನನ್ಗೆ ಗಲಾಟೇಂದ್ರೆ ಆಗಲ್ಲ. ಎಲ್ಲ ನಿಶ್ಯಬ್ಧವಾಗಿ ಆಗ್ಬೇಕು. ನಾನೊಂದು ಥರಾ ವಿಚಿತ್ರ. ಗಲಾಟೆ ಕಟ್ಕೊಂಡಷ್ಟೂ ಮನಸ್ನೊಳ್ಗೆ ನಿಶ್ಯಬ್ದ ಜಾಸ್ತಿ ಆಗುತ್ತೆ.

ರಂಗಸ್ವಾಮಿ : ಅದ್ಸರೀ ಅನ್ನಿ. ನಿಮ್ಮ ಸೋಮಶೇಖರ ಇದ್ದಾರಲ್ಲ. ಅವ್ರು ನಿಮ್ಮ ಫ್ರೆಂಡಾ ?

ರಾಮಸ್ವಾಮಿ : ಹೂಂ ಫ್ರೆಂಡೆ. ಯಾಕೆ? ಅದ್ರಲ್ಲೇನು ಅನುಮಾನ?

ರಂಗಸ್ವಾಮಿ : ಅಲ್ಲ ಸ್ವಲ್ಪ ವಯಸ್ಸು ಜಾಸ್ತಿ ಥರ ಕಾಣ್ತಾರೆ. ಅದಕ್ಕೆ ಕೇಳ್ದೆ ಅಷ್ಟೆ. ಏನು ತಿಳ್ಕೋಬೇಡಿ.

ರಾಮಸ್ವಾಮಿ : ಹೌದು, ಸ್ವಲ್ಪ ವಯಸ್ಸು ಜಾಸ್ತಿ. ಆದ್ರೆ ಅವ್ನು ತುಂಬಾ ಜಾಸ್ತಿ ವಯಸ್ಸು ಥರಾ ಕಾಣ್ತಾನೆ.

ರಂಗಸ್ವಾಮಿ : ಹೌದು ತುಂಬಾ ಜಾಸ್ತಿ ಆಗಿರೋ ಥರಾನೇ ಕಾಣ್ತಾರೆ.

ರಾಮಸ್ವಾಮಿ : ನ್ಯಾಯವಾಗಿ ಅವ್ನಿಗೆ ಅಷ್ಟು ಆಗಿಲ್ಲ. ಅವ್ನು ಹಾಗೆ ಕಾಣೋದಕ್ಕೆ ಒಂದು ಕಾರಣ ಇದೆ. ಅವ್ನು ತುಂಬಾ ಒಳ್ಳೆಯ ಸಂಪ್ರದಾಯಸ್ಥ. ಒಬ್ರಿಗೆ ಕೆಟ್ಟದ್ದು ಬಯಸಲ್ಲ. ಒಳ್ಳೆ ಪೂರ್ವಕಾಲದ ಮುದುಕರ ಥರ ಅನ್ನಿ. ಅವ್ನು ಒಳ್ಳೆ

ತನ ನೋಡಿ, ಸಾವು ಫ್ರೆಂಡ್ಸೆಲ್ಲಾ ಅವನ್ನ ದೊಡ್ಡೋನು ದೊಡ್ಡೋನು ಅಂತ ಕೂಗ್ತೀವಿ. ಹೀಗವ್ನು ದೊಡ್ಡೋನಾಗ್ತಾ ಆಗ್ತಾ ನಿಮಿಷ ನಿಮಿಷಕ್ಕೂ ಒಂದೊಂದು ವರ್ಷ ದೊಡ್ಡೋನಾಗ್ತಾ ಇದ್ದಾನೆ. ಇವ್ನು ಹೀಗೇ ನೀತಿವಂತ ದೊಡ್ಡೋನಾಗ್ತಾ ಇದ್ರೆ ಇದೇ ರೇಟಲ್ಲೆ ಇನ್ನೆರಡು ಮೂರು ದಿನದಲ್ಲೆ ವೃದ್ಧಾಪ್ಯದಿಂದ I mean ಮಾನಸಿಕ ವೃದ್ಧಾಪ್ಯದಿಂದ ಗೊಟಕ್ ಅಂದ್ಬಿಡ್ತಾನೆ ಅನ್ಸುತ್ತೆ.

ರಂಗಸ್ವಾಮಿ : ಅವರ್ಗೆ ಕೆಲ್ಸ ?

ರಾಮಸ್ವಾಮಿ : ಸಿಕ್ಕಿಲ್ಲ, ಸಿಕ್ಕಲ್ಲ,

ರಂಗಸ್ವಾಮಿ : ಸಿಕ್ಕಿಲ್ಲ ?

ರಾಮಸ್ವಾಮಿ : ಹೂಂ ರಿಟೈರಾಗೋ ವಯಸ್ಸಾಗಿ ತುಂಬಾ ವರ್ಷ ಆಗ್ಹೋಗಿದೆ ಅದ್ರಿಂದ. [ರಂಗಸ್ವಾಮಿ ನಗುತ್ತಾನೆ]

ರಾಮಸ್ವಾಮಿ : ತುಂಬಾ ಒಳ್ಳೆ ಮನುಷ್ಯ.

ರಂಗಸ್ವಾಮಿ : ಜಾತಿ ?

ರಾಮಸ್ವಾಮಿ : ನಮ್ದೆ. ಆದ್ರೂ ತುಂಬಾ ಒಳ್ಳೆ ಮನುಷ್ಯ. ನಾನು ಸಾಮಾನ್ಯವಾಗಿ ಯಾವ ಸಂಬಂಧಾನೂ ಹಚ್ಕೊಳ್ಳಲ್ಲ. ಆದ್ರೆ ಇವ್ನು ತುಂಬಾ ಒಳ್ಳೆ ಫ್ರೆಂಡು. ನಮಗಿಬ್ರಿಗೂ ತುಂಬಾ ವಿಶ್ವಾಸ. ನನಗವ್ನು ಬಲಗೈ. ಅವ್ನಿಗೆ ನಾನು ಬಲಗೈ. ಆದ್ರೆ ಆ ಕೈಗಳಲ್ಲಿ ಆಗಾಗ ಬೆರಳುಗಳಿರಲ್ಲ ಅಷ್ಟೆ.

ರಂಗಸ್ವಾಮಿ : ಹಹಹ ಚೆನ್ನಾಗಿದೆ ಜೋಕು. ಒಳ್ಳೆ ಖುಷಿಯಾಗಿರ್ತೀರ, ನಿಮಗೆ ವಯಸ್ಸೆಷ್ಟು ?

ರಾಮಸ್ವಾಮಿ : ಇಪ್ಪತ್ತೈದು. ನೀವು ಬೇಕಾದ್ರೆ ಹಾಗಿರಬೌದು.

ರಂಗಸ್ವಾಮಿ : Impossible. ನನಗೆ ತಿಳಿದಿರೋ ಮಟ್ಟಿಗೆ ಒಬ್ರ ಜೀವನದಲ್ಲಿ ಒಂದೇ ಸಾರಿ ಇಪ್ಪತ್ತೈದು ವರ್ಷ ಆಗೋದು. ನನಗದು ಆಗಿ ಆಗ್ಲೇ ಮೂವತ್ತು ವರ್ಷ ಆಯ್ತು.

ರಾಮಸ್ವಾಮಿ : ಅದಲ್ಲ ನಾನು ಹೇಳೋದು ವಯಸ್ಸಲ್ಲ ನೀವು ಖುಷಿಯಾಗಿರೆ ಬಹುದೂಂದೆ.

ರಂಗಸ್ವಾಮಿ : ಓ, ಸರಿ ಸರಿ ಇರೋಣ ಬಿಡಿ ಇನ್ಮೇಲೆ. ನನ್ಗೂ ರಿಟೈರಾಗುತ್ತೆ. ಇನ್ನೇನು ಕೆಲ್ಸ.

ರಾಮಸ್ವಾಮಿ : If you don't mind ನನಗೆಲ್ಲೋ ಸ್ವಲ್ಪ ಕೆಲ್ಸ ಇದೆ.

ರಂಗಸ್ವಾಮಿ : ಹೋಗ್ಬನ್ನಿ. ನಾನಿಲ್ಲೇ ಇರ್ತೀನಿ ನಂಗೂ ಈಗ ಬೇರೆ ಕೆಲ್ಸ ಇಲ್ಲ.

ರಾಮಸ್ವಾಮಿ : ಸರಿ ಬಿಡಿ ಇನ್ನೇನು ಮಾಡೋಕಾಗುತ್ತೆ. ನಾನೂ ಇಲ್ಲೇ ಇದ್ಬಿಡ್ತೀನಿ [ಕೂರುವನು]

[ಮೌನ]

ರಾಮಸ್ವಾಮಿ : ಪಾಪ ಸುಮ್ನೇ ಕೂತಿರೋಕೆ ನಿಮಗೆ ಬೇಜಾರಾಗುತ್ತೆ, ನಾನು ಸೋಮು ಮೇಲೊಂದು ತಮಾಷೆ ಕವನ ಕಟ್ಟಿದ್ದೀನಿ ಹೇಳ್ಲಾ? ಭೀಷ್ಮ ಸಂಸ್ಕೃತಿ ಅಥವಾ, ಎಲ್ಲವು ಸತ್ಯಕ್ಕಾಗಿ ಎಲ್ಲವು ನ್ಯಾಯಕ್ಕಾಗಿ ಅಂತ ಕವನದ ಹೆಸರು.

ಇವನಿಗೆ, ಈ ಭೀಷ್ಮನಿಗೆ.
ಎಲ್ಲಾ ಸುಸಂಸ್ಕೃತವಾಗೇ ಆಗಬೇಕು.
ಎಲ್ಲಾ ಅಂದರೆ ಎಲ್ಲಾ
ಗೊರಕೆ ಹೊಡೆಯುವುದು
ತೇಗುವುದು, ಕೆಮ್ಮುವುದು
ಬಟ್ಟೆ ಬದಲಾಯಿಸುವುದು.
ಈ ವೃದ್ಧ ಅರ್ಧನಾರೀಶ್ವರ.
ತನ್ನ ಸ್ವಂತ ಬಟ್ಟೆ ಕೂಡ ಸುಸಂಸ್ಕೃತವಾಗಿ ಬಿಚ್ಚಬೇಕು
ಬಿಚ್ಚಿದ ಮೇಲೆ ಅಷ್ಟೇ ಸುಸಂಸ್ಕೃತವಾಗಿ ಹಾಕಬೇಕು.
ನೂರಾರು ಬಾರಿ ಸಾಯುವ ವಯಸ್ಸಾದರೂ ಈತ
ಸತ್ಯಕ್ಕಾಗಿ, ನ್ಯಾಯಕ್ಕಾಗಿ ಸಾಯದೆ ಉಳಿದಿದ್ದಾನೆ.

ಸತ್ಯ ಉಳಿಯುವುದಕ್ಕಾಗಿ–ಎಷ್ಟೋ ಬಾರಿ ಸುಳ್ಳು ಹೇಳಬೇಕಾಗುತ್ತದೆ.
ನ್ಯಾಯ ಗೆಲ್ಲುವುದಕ್ಕಾಗಿ ಮೋಸದಿಂದ ಪತ್ರವೆಡೆದು ದುರ್ಬೋಧಿಸಬೇಕಾಗುತ್ತದೆ.
ಸತ್ಯಕ್ಕಾಗಿ ನ್ಯಾಯಕ್ಕಾಗಿ ಎಲ್ಲವನ್ನೂ ಮಾಡುತ್ತಾನೆ,
ಸತ್ಯಕ್ಕಾಗಿ ಹೇಳಿದ ಸುಳ್ಳಿಂದ
ಕೆಟ್ಟ ಹೃದಯ ಕಿತ್ತಿದ್ದಾನೆ.
ನ್ಯಾಯಕ್ಕಾಗಿ ಒಡೆದ ಪತ್ರದಿಂದ
ಎಷ್ಟೋ ಹೃದಯಗಳನ್ನು ಗೆದಿದ್ದಾನೆ.
ಅದೂ ತನ್ನ ಸ್ವಂತ ವಯಸ್ಸಿನಲ್ಲಿ
ಇವನಿಗೆ ಕೈಲಾದರೆ ಬಸ್ಕಿ ಹೊಡೆಯುವುದರಲ್ಲೂ, ಸಂಸ್ಕೃತಿ ಇರಬೇಕು. ಸತ್ಯವಿರಬೇಕು
ನ್ಯಾಯವಿರಬೇಕು.

ರಂಗಸ್ವಾಮಿ : ಚೆನ್ನಾಗಿದೆ.

ರಾಮಸ್ವಾಮಿ : ಅವನ ರೂಂ ಮುಂದೆ ಒಂದು ಬೋರ್ಡು ಹಾಕಬೇಕೂಂತ ಇದ್ದೀವಿ ನಾವೆಲ್ಲಾ ಸೇರಿ.

ರಂಗಸ್ವಾಮಿ : ಏನಂತ ?

ರಾಮಸ್ವಾಮಿ : ಈ ರೂಮಿನಲ್ಲಿ ವಾಸಿಸುವವನೇ ಗಾಂಧೀಜಿ, ಇದಕ್ಕೆ ಯಾರಾದರೂ ತಕರಾರು ತಂಟೆಗಳಿದ್ದಲ್ಲಿ ಲಿಖಿತ ಮೂಲಕ ಇನ್ನು ಹದಿನೈದು ದಿನಗಳೊಳಗೆ ತಿಳಿಸಬೇಕು ಅಂತ. ಎಲ್ಲಾ ತಮಾಷೆಗೆ ಅಷ್ಟೇ ಸಾರ. ನಾವು ಎಷ್ಟು ತಮಾಷೆ ಮಾಡಿದ್ರೂ ತಪ್ಪು ತಿಳ್ಕೊಳ್ಳಲ್ಲ ತುಂಬಾ ಒಳ್ಳೇವ್ನು. ನನ್ನ ಮದ್ವೆಗೆ ನಮ್ಮನೇವ್ರು ವಿರೋಧ ಲೆಕ್ಕಿಸ್ದೆ ಸಹಾಯ ಮಾಡ್ತಿರೋನೇ ಅವ್ನು.

ರಂಗಸ್ವಾಮಿ : By the by ನಾನಿನ್ನೂ ನನ್ನ ಉದ್ಯೋಗ ನಿಮ್ಗೆ ಹೇಳ್ಳೇ ಇಲ್ಲ. ನಾನೀಗ ಸದ್ಯಕ್ಕೆ ಇದೇ ಊರಲ್ಲೇ Police Inspector ಆಗಿದ್ದೀನಿ.

ರಾಮಸ್ವಾಮಿ : ಪೋಲೀಸ ಇನ್‌ಸ್ಪೆಕ್ಟ್ರ ಹೋ ತುಂಬಾ ಸಂತೋಷ.

ರಂಗಸ್ವಾಮಿ : ಅಯ್ಯೋ ಹೆದರಕೊಬೇಡಿ. ನನ್ನ ಕೆಲ್ಸಕ್ಕೂ ನಾನೀಗ ಇಲ್ಲಿ ಬಂದಿರೋದಕ್ಕೂ ಯಾವ ಸಂಬಂಧಾನೂ ಇಲ್ಲ. ಸುಮ್ನೆ ಹಾಗೇ ನೋಡ್ಕೊಂಡು ಹೋಗೋಣಾಂತ ಬಂದೆ. ಅಷ್ಟೇ ಅಂದಾಗೇ ಇವತ್ತಿನ ಪೇಪರ ನೋಡಿದ್ರೇನು ?

ರಾಮಸ್ವಾಮಿ : ಇಲ್ಲ. ಇಲ್ಲ. ನೀವೇನೂ ತಿಳ್ಕೊಳ್ದೆ ಇದ್ರೆ ನನಗೆಲ್ಲೋ ಸ್ವಲ್ಪ ಕೆಲ್ಸ ಇದೆ. ಆಚೆ ಹೋಗ್ಬೇಕು.

ರಂಗಸ್ವಾಮಿ : ಹೇಳಿದ್ನಲ್ಲ. ಹೋಗ್ಬಿಟ್ಟು ಬನ್ನಿ. ನಂಗೇನೂ ಸಂಕೋಚ ಇಲ್ಲ. ಕೂತಿರ್‍ತೀನಿ ಇಲ್ಲೆ.

ರಾಮಸ್ವಾಮಿ : ಅದ್ಸರಿ, ಇಲ್ಲಿ ಒಳಗೂ ಸ್ವಲ್ಪ ಕೆಲ್ಸ ಇದೆ. ಇಲ್ಲೇ ಕೂತಿರಿ.

ರಂಗಸ್ವಾಮಿ : ಅಯ್ಯೋ ನಾನು ಸಹಾಯ ಮಾಡ್ತೀನಿ ಬನ್ನಿ.

ರಾಮಸ್ವಾಮಿ : ಓ ಪರ್ವಾ ಇಲ್ಲ ಬಿಡಿ. ಸ್ವಲ್ಪ ನಿಧಾನಕ್ಕೆ ಮಾಡಿದ್ರೂ ಆಗುತ್ತೆ. [ಕೂರುವನು]

ರಂಗಸ್ವಾಮಿ : ಏನು. ಕಣ್ಣೆಲ್ಲಾ ಕೆಂಪಾಗಿದೆ. ರಾತ್ರಿ ನಿದ್ರೆ ಕೆಟ್ರೇನು ?

ರಾಮಸ್ವಾಮಿ : ಏನಿಲ್ಲ ಸ್ವಲ್ಪ ಎದೆನೋವು. ಅಷ್ಟೆ.

ರಂಗಸ್ವಾಮಿ : ನನ್ನ ಪ್ರಶ್ನೆಗೆ ನೀವು ಉತ್ರ ಹೇಳ್ಳೇ ಇಲ್ಲ. ಇವತ್ತಿನ ಪೇಪರ ನೋಡಿದ್ರಾ ?

ರಾಮಸ್ವಾಮಿ : ಇಲ್ಲ. ನಾನು ಪೇಪರ ನೋಡೋದೇ ಇಲ್ಲ. ಸಾಮಾನ್ಯ ವಾಗಿ, ಪೇಪರಲ್ಲಿ ಈ ನಡುವೆ ಕಿಶೋರ ಕುಮಾರ ಸಮಾ ಚಾರ ಬಿಟ್ಟು ಇನ್ನೇನೂ ಬರಲ್ಲ.

ರಂಗಸ್ವಾಮಿ : ಕಿಶೋರ ಕುಮಾರಗೆ ಈಗ ತುಂಬಾ ಡಿಮ್ಯಾಂಡು. ಒಂದು ಹಾಡು ಹಾಡಿದ್ರೆ 3000 ರೂಪಾಯಿ ಕೊಡ್ತಾರಂತೆ. ದಿವ್ಸಕ್ಕೆ ಎರಡು ಹಾಡು ಹಾಡ್ತಾನಂತೆ.

ರಾಮಸ್ವಾಮಿ : ಹಾಗಿದ್ರೆ ದಿವ್ಸಕ್ಕೆ 6000 ರೂಪಾಯಿ. ಯಾರಿಗುಂಟು ಯಾರಿಗಿಲ್ಲ. ನಾವು ಅದೇ ಉದ್ಯೋಗಾನೇ ಮಾಡ್ಬಿಡೋಣ ಬನ್ನಿ ಸಾರ. ಬೇಕಾದ್ರೆ ದಿವ್ಸಕ್ಕೆ ನಾಲ್ಕು ಹಾಡು ನಾನು ಹಾಡ್ತೀನಿ. ನಾಲಕ ನೀವು ಹಾಡಿ. ಕೈಗೆ ಬಂದ ಲಕ್ಷಾಂತರ ರೂಪಾಯಿ ಯಾಕೆ ಬಿಡೋದು. [ತಮಾಷೆ ಎಂಬಂತೆ ನಗುತ್ತಾನೆ]

ರಂಗಸ್ವಾಮಿ : ಬರೀ ಕಿಶೋರ ಕುಮಾರ ಸುದ್ದಿ ಅಲ್ಲ ಸಾರ. ಆಗಾಗ ಕೊಲೆ ಸಮಾಚಾರಾನೂ ಬರುತ್ತೆ. ಇವತ್ತೊಂದು ಬಂದಿದೆ. ಅದನ್ನ ತಮ್ಗೆ ತೋರ್ಸಿ ಹೋಗೋಣಾಂತ ಬಂದೆ.

ರಾಮಸ್ವಾಮಿ : ಕೊಲೆ ವಿಷ್ಯ ! ಅಯ್ಯೋ! I am not very much interested.

ರಂಗಸ್ವಾಮಿ : ನಿಮಗೆ ಸಂಬಂಧಿಸಿರೋ ಸಮಾಚಾರ, ನಿಮಗೇ ಇಂಟರೆಸ್ಟ ಇಲ್ಲ ಅಂದ್ರೆ ?

ರಾಮಸ್ವಾಮಿ : ನನಗೆ ಸಂಬಂಧಿಸಿರೋ ಸಮಾಚಾರ!

ರಂಗಸ್ವಾಮಿ : ಹೂಂ! ಓದ್ತೀನಿ ಕೇಳಿ ಬೇಕಾದ್ರೆ. ಇಗೋ.

[ಓದುತ್ತಾನೆ]

'ಧರ್ಮಪುರ, ಆಗಸ್ಟ 12. ಇದೇ ಊರಿನಲ್ಲಿ ಕಾಲೇಜಿನಲ್ಲಿ ಲೆಕ್ಚರರ ಆಗಿರುವ ರಾಮಸ್ವಾಮಿ ಎಂಬುವರ ಮನೆಯಲ್ಲಿ ಭಗವಂತರಾವ ಎಂಬುವರ ಶವ ಪತ್ತೆಯಾಗಿದೆ. ಸದರಿ ಭಗವಂತರಾಯರು ರಾಮಸ್ವಾಮಿಯವರ ತಂದೆಯವರು. ಯಾವುದೋ ವೈಯಕ್ತಿಕ ಕಾರಣಗಳಿಗಾಗಿ ರಾಮಸ್ವಾಮಿ ಯವರೇ ತಮ್ಮ ತಂದೆಯವರನ್ನು ಕೊಂದಿರಬಹುದೆಂದು ಶಂಕಿಸಲಾಗಿದೆ.. ಧರ್ಮಪುರದ ಪೋಲೀಸರು ಆಪಾದಿತರ

ಕಡೆ ಸೇರಿ ತರದೂದು ನಡೆಸಲು ವಿಳಂಬ ಮಾಡುತ್ತಿದ್ದಾರೆ ಎಂದು ಬಲ್ಲ ವಲಯುಗಳು ತಿಳಿಸಿವೆ'.

ರಾಮಸ್ವಾಮಿ : No, No, Impossible.

ರಂಗಸ್ವಾಮಿ : ನಾನೇನ ಮಾಡ್ಲಿ ? ನೀವೇ ಓದಿ ಬೇಕಾದ್ರೆ.

ರಾಮಸ್ವಾಮಿ : [ಓದಿ] Nonsense ಎಲ್ಲಾ ಸುಳ್ಳು ಸಾರ.

ರಂಗಸ್ವಾಮಿ : ನನಗೂ ಗೊತ್ತು ಸಾರ ಸುಳ್ಳೂಂತ. ಅವರ ಶವ ಈ ಊರಲ್ಲಿ ಪತ್ತೆ ಆಗೋಕೆ. ಅವರು ಇಲ್ಲೆಲ್ಲಿದಾರೆ ? ಅವರು ಕೋಲಾರದಲ್ಲಿದ್ದಾರೆ. ಅಲ್ವೆ ?

ರಾಮಸ್ವಾಮಿ : ಮತ್ತೆ! ನಾನು ಅವರ ಮುಖ ಸರಿಯಾಗಿ ನೋಡಿ ಮೂರು ವರ್ಷ ಆಯ್ತು.

ರಂಗಸ್ವಾಮಿ : ಪುಣ್ಯವಂತ್ರು.

ರಾಮಸ್ವಾಮಿ : ಯಾರು ?

ರಂಗಸ್ವಾಮಿ : ಇಬ್ರು. ಅದೂ ಅಲ್ದೆ ನೀವು ಗಣ್ಯವ್ಯಕ್ತಿಗಳು, ಸಂಭಾವಿತರು.

ರಾಮಸ್ವಾಮಿ : ಮತ್ತೆ! ಅಂಥ ನಾನು, ಖಾಸಾ ನಮ್ಮಪ್ಪನ ಕೊಲ್ಲೋದೂಂದ್ರೆ ಏನ್ಸಾರ. ಅದೂ ಅಲ್ದೆ ಹಾಗೇನಾದ್ರೂ ನಮ್ಮ ತಂದೆ ಸತ್ತಿದ್ದರೆ ಇವತ್ತು ನನ್ನ ಮದ್ವೆ ಆಗ್ತಿತ್ತೆ ಸಾರ. ಎಲ್ಲ ಸುಳ್ಳು.

ರಂಗಸ್ವಾಮಿ : ನಂಗೂ ಗೊತ್ತು ಅದು. ಕೊಂದ ಸಮಾಚಾರ ಅಂದ್ರೆ ಇಷ್ಟು ತಣ್ಣಗಿರ್ತಾ ಇತ್ತೆ. ಈ ಊರು, ಈ ಬೀದಿ ಎಲ್ಲಾ. ಯಾರೋ ಕಿಡಿಗೇಡಿ News ಕೊಟ್ಟಿದ್ದಾನೆ ಸುಮ್ಮಸುಮ್ನೆ. ಅವ್ರು ಹಾಕಿದ್ದಾರೆ. ಎಲ್ಲಾ ಬೆಪ್ಪು ನನ್ನ ಮಕ್ಳ ರಾಜ್ಯ. ನೋಡಿ, ನಮ್ಮ ಮೇಲೆಲ್ಲಾ ಸಂಶಯ ಬರೋ ಹಾಗೆ ಬರೆದಿದ್ದಾನೆ. ನಾನೇನೂ Enquiry ಮಾಡಿಲ್ಲ ಅಂತ ಮೇಲಿಂದ ನಂಗೆ ಗುಂದ್ತಾರೆ. ನನ್ನ duty ನಾನು ಮಾಡೋಣ. ವಿಷ್ಯ

clarify ಮಾಡ್ಕೊಳ್ಳೋಣ ಅಂತ ಬಂದೆ ಅಷ್ಟೆ. ಹಾಗಿದ್ರೆ ಅಂಥದ್ದೇನಿಲ್ವಲ್ಲ ಗಲಾಟೆ ?

ರಾಮಸ್ವಾಮಿ : ನೀವೇ ನೋಡಿ ಸಾರ್. ಏನೂ ಇಲ್ಲ.

ರಂಗಸ್ವಾಮಿ : ಇದ್ರಲ್ಲಿ ನಿಜಾಂಶ ಏನೂ ಇಲ್ಲಾಂತ Report ಮಾಡ್ಬಿಡ್ಲೆ ?

ರಾಮಸ್ವಾಮಿ : Oh, yes, please, see you.

ರಂಗಸ್ವಾಮಿ : ಬರ್ಲಾ ? [ಏಳುತ್ತಾನೆ]

ರಾಮಸ್ವಾಮಿ : ಸಾಯಂಕಾಲ ತಪ್ದೆ ಮದ್ವೆಗೆ ಬರ್ಬೇಕು ಸಾರ.

ರಂಗಸ್ವಾಮಿ : Right ಬರ್ತೀನಿ. ಮದ್ವೆಗೆ ಪೋಲೀಸ ಸಹಾಯ ಏನಾದ್ರೂ ಬೇಕ ?

ರಾಮಸ್ವಾಮಿ : ಪೋಲೀಸ ಸಹಾಯ ?

ರಂಗಸ್ವಾಮಿ : ಜನ ಜಾಸ್ತಿ ಆಗಿ ಬಂದೋಬಸ್ತ ಗಿಂದೋಬಸ್ತ ?

ರಾಮಸ್ವಾಮಿ : ಜಾಸ್ತಿ ಇರಲ್ಲ ಸಾರ ಜನ. ಹೋಗ್ಲಿ ಒಂದಿಬ್ರನ್ನ ಕಳ್ಸಿರಿ.

ರಂಗಸ್ವಾಮಿ : [ಹೊರಡುತ್ತಾನೆ] ನಾನಿನ್ನು ಬರ್ತೀನಿ.

[ಅಷ್ಟರಲ್ಲಿ ಆಚೆಯಿಂದ ಯಾರೋ ಬಂದಂತೆ. ಶಾಸ್ತ್ರಿಗಳು ಮತ್ತು ಅವರ ಮಗ ಒಳಕ್ಕೆ ಬರುತ್ತಾರೆ. ಕೈಯಲ್ಲಿ ದರ್ಭೆ, ಪೌರೋಹಿತ್ಯದ ಸಾಮಾನುಗಳು]

ಶಾಸ್ತ್ರಿಗಳು : [ರಾಮಸ್ವಾಮಿಯನ್ನು ನೋಡುತ್ತಾ] ರಾಮಸ್ವಾಮಿ, ಅಲ್ಲೇನಯ್ಯ ?

ರಾಮಸ್ವಾಮಿ : ಹೂಂ.

ಶಾಸ್ತ್ರಿಗಳು : ನಿಮ್ತಂದೆ ಭಗವಂತರಾಯ್ರು ನಂಗೆ ಚೆನ್ನಾಗಿ ಗೊತ್ತಯ್ಯ.

ರಾಮಸ್ವಾಮಿ : ಸರಿ ಸಾರ. ಮದ್ವೆ ಇನ್ನೂ ಸಾಯಂಕಾಲಕ್ಕೆ.

ಶಾಸ್ತ್ರಿಗಳು : ಇವರ್ಯಾರು ಗೊತ್ತಾಗ್ಲಿಲ್ವಲ್ಲ ?

ರಂಗಸ್ವಾಮಿ : ನಾನು ರಂಗಸ್ವಾಮಿ ಅಂತ.

ಶಾಸ್ತ್ರಿಗಳು : ಯಾವ ರಂಗಸ್ವಾಮಿ:ಕುಂಟು ಹಿರಣ್ಣನ ಮಗ್ನೇ ?

ರಂಗಸ್ವಾಮಿ : ಅಲ್ಲ.

ಶಾಸ್ತ್ರಿಗಳು : ಹಾಗಿದ್ರೆ ಕುಂಟು ಹಿರಣ್ಣ ನಿಮ್ಮಪ್ಪ ಅಲ್ವಾ?

ರಂಗಸ್ವಾಮಿ : ಅಲ್ಲ ಅಲ್ಲ.

ಶಾಸ್ತ್ರಿಗಳು : ಇನ್ಯಾರು ?

ರಂಗಸ್ವಾಮಿ : ನಾನು ಬೇರೆ.

ಶಾಸ್ತ್ರಿಗಳು : ಅಂತೂ ಯಾರೋ ಒಬ್ರು ರಂಗಸ್ವಾಮಿ ಅನ್ನಿ.

ರಂಗಸ್ವಾಮಿ : ಅಲ್ಲಾ ಇದೇನು ಶಾಸ್ತ್ರಿಗ್ಳೆ. ಮದ್ವೆ ಸಾಯಂಕಾಲಕ್ಕೆ ಅಂತ ಸೋಮು ಹೇಳ್ಳಿಲ್ವ ?

ಶಾಸ್ತ್ರಿಗಳು : ಸೋಮು ? ಯಾರು ? ನಿನ್ಜತೆ ಒಬ್ಬ ಮುಂದಿ ಬ್ರಹ್ಮಚಾರಿ ಓಡಾಡ್ತನಲ್ಲ ಅವ್ನ?

ರಾಮಸ್ವಾಮಿ : ಹೂಂ.

ಶಾಸ್ತ್ರಿಗಳು : ಮದ್ವೆ ಸಮಾಚಾರ ಹೇಳ್ಳಿ ಇಲ್ವಲ್ಲ ಯಾರೂ, ಯಾರಿಗೆ ಮದ್ವೆ ?

ರಾಮಸ್ವಾಮಿ : ನಂಗೆ.

ಶಾಸ್ತ್ರಿಗಳು : ಬಿಡ್ಕೊತನ್ನು. ಮನೇಲಿ ಇಂಥಾ ಕೆಲ್ಸ ಮಾಡ್ಕೊಂಡಿದ್ದೀಯಾ. ಮದ್ವೆ ಅಂತೀಯಲ್ಲ. ಅಲ್ಲಯ್ಯಾ ಏನದು ? ದಾರೀಲೆಲ್ಲಾ ಏನೇನೋ ಸಮಾಚಾರ ಕಿವೀಗೆ ಬಿತ್ತು. ನಿನ್ನ ಅಲ್ಲ ಮದುವೆ ಅಂತಾನೂ ಯಾರೋ ಹೇಳಿದ್ರು. ಯಾವುದು ನಿಜ್ವೋ, ಯಾವುದು ಸುಳ್ಳೋ ಗೊತ್ತಾಗಿಲ್ಲ. ಇವತ್ತು ಏಕಾದಶಿ ನೋಡು. ಪುಣ್ಯದಿನ. ಆಹಾರ ಪದಾರ್ಥದ ವಾಸ್ನೆ ಕೂಡ ನೋಡಬಾರ್ದು. ಇವ್ನಿಗೆ ತೇಗಬಾರ್ದು ಅಂತ ಗೊತ್ತಿಲ್ಲ. ಅಂಥಾದ್ರಲ್ಲಿ ಎದ್ದೋನೇ ಬೀದಿಗೆಲ್ಲಾ ಕೇಳೋ ಹಾಗೆ ತೇಗ್ಬಿಟ್ಟ. ಸರಿ ಪ್ರಾಯಶ್ಚಿತ್ತವಾಗಿ ಹೋಗ್ಲಿ ಅಂತ ದೇವಸ್ಥಾನಕ್ಕೆ ಕರ್ಕೊಂಡು ಹೊರಟೆ. ದಾರೀಲಿ

ನೋಡ್ತೀನಿ ಕೇಳಿದ ವರ್ತಮಾನಕ್ಕೆ ಸರಿಯಾಗಿ ನಿಮ್ಮನೆ ಮುಂದೆ ಬೆಂಕಿ ಬೇರೆ ಹಾಕಿದ್ರು.

ರಾಮಸ್ವಾಮಿ : ಏನಂದ್ರಿ ಬೆಂಕಿ ಬೆಂಕಿ ಯಾರು ಹಾಕಿದ್ರು ?

ಶಾಸ್ತ್ರಿಗಳು : ಶಾಸ್ತ್ರ ಪ್ರಕಾರ ಯಾರೋ ದಾಯಾದಿಗ್ಳೇ ಹಾಕಿರ್ಬೇಕು.

ರಂಗಸ್ವಾಮಿ : [Curious] ದಾರೀಲಿ ಏನೇನು ವರ್ತಮಾನ ಕೇಳಿದ್ರಿ ಶಾಸ್ತ್ರಿಗಳೆ ?

ಶಾಸ್ತ್ರಿಗಳು : ಅದೇ ಹೀಗೀಗೆ. ಭಗವಂತರಾಯನ್ನ ಅವರ ಮಗ ಕೊಂದ್ಹಾಕಿ ಬಿಟ್ಟಿದಾನೆ ಅಂತ ಒಂದ್ಕಡೆ. ಅವರ ಮಗ ರಾಮಸ್ವಾಮಿ ಮದ್ವೆ ಅಂತ ಇನ್ನೊಂದ್ಕಡೆ. ಏನಂತ ತಿಳ್ಕೋಬೇಕು. ಹ್ಯಾಗಾದ್ರೂ ಆಗ್ಲಿ. ಅಪ್ಪನ ಶವ ಕ್ಕಾದ್ರೂ ಆಗ್ಲಿ, ಮಗನ ಮದ್ವೆಗಾದ್ರು ಆಗ್ಲಿ ಅಂತ ನಾಲಕ ದರ್ಭೆ ಕೈಯಲ್ಲೆ ಹಿಡ್ಕೊಂಡು ಬಂದೆ.

ರಂಗಸ್ವಾಮಿ : ನೋಡಿದರ್ರಾ ಮಿ. ರಾಮಸ್ವಾಮಿ. ಸಂಗೆ ಪೇಪರ್ರನಲ್ಲಿ ನೋಡಿದಾಗ್ಲೆ ಅನುಮಾನ ಬಂದಿತ್ತು.

ಶಾಸ್ತ್ರಿಗಳು : ಅಲ್ಲ, ಯಾಕಯ್ಯ ಹೀಗೆ ಮಾಡ್ದೆ. ಶಾಸ್ತ್ರ ಗೊತ್ತಿಲ್ವೇ ನಮ್ಮ್. ಅಪ್ಪನ ಹತ್ಯೆ ಮಾಡಿದ್ರೆ ಸತ್ತ ಅಪ್ಪನ್ಗೆ ಸ್ವರ್ಗ; ಉಳಿದ ಮಗ್ನಿಗೆ ನರಕ ಅಂತ.

ರಾಮಸ್ವಾಮಿ : ಶಾಸ್ತ್ರಿಗಳೆ, ಸುಮ ಸುಮ್ನೆ ಹೀಗೆ ಮಾತಾಡಬೇಡಿ ಯಾರೇಳಿದ್ರು ನಿಮಗೆ.

ಶಾಸ್ತ್ರಿಗಳು : ಯಾರು ಯಾಕಯ್ಯ ಹೇಳ್ತಾರೆ. ಊರಿಗೇ ಊರೇ ಡಂಗುರ ಹೊಡೀತಾ ಇದೆ. ಹೀಗಾಗಬಾರದು ಅಂತ ಮೂರು ತಿಂಗ್ಳ ಹಿಂದೇನೇ ಹೇಳಿದ್ನಿ ನಿನ್ತಂಗಿ.

ರಾಮಸ್ವಾಮಿ : ಹೂಂ ನನ್ತಂಗಿ ಹೇಳ್ತಾಳೆ. ಅವಳನ್ನ ನೀವು ನೋಡೇ ಇಲ್ಲ, ಡೊಂಗಿ ಹೊಡೀಬೇಡಿ.

ಶಾಸ್ತ್ರಿಗಳು : ಸರಿ. ನಿನ್ಹತ್ರ ಬಡ್ಕೊ. ಮೂರು ತಿಂಗ್ಳ ಹಿಂದೆ ಇದೇ ನಿಮ್ಮ ಸೋಮಶೇಖರನ ಜೊತೆ ನಮ್ಮನೇಗೆ ಬಂದಿದ್ನಲ್ಲ. ಆಗ ಎಲ್ಲಾ ಹೇಳಿದ್ನ. ನಿಮ್ಮಪ್ಪ ಬೇಡಾ ಅಂದಿದ್ದೆಲ್ಲಾ ನೀನು ಮಾಡೋದು, ಜೂಜಾಡೋದು, ರೇಸಿಗೆ ಹೋಗೋದು, ಕುಡಿಯೋದು, ಕಂಡ ಕಂಡ ಹೆಂಗಸರ ಜತೆ ತಿರುಗೋದು, ಸಿನಿಮಾ, ನಾಟಕಾ, ಭಾಷಣ ಅಂದ್ಕೊಳ್ತ ಮನೇ ಮಾನಾ ತಗ್ಯೋದು, ಎಲ್ಲಾ ಹೇಳಿ ಕಣ್ಣಲ್ಲಿ ನೀರು ಹಾಕ್ಕೊಂಡ್ನು.

ರಾಮಸ್ವಾಮಿ : ಸುಳ್ಳು ಸುಳ್ಳು ಸಿಗರೇಟ ಕೂಡ ಸೇದಲ್ಲ ನಾನು.

ಶಾಸ್ತ್ರಿ ಮಗ : ಇಷ್ಟೆಲ್ಲಾ ಮಾಡೋವಾಗ ಸಿಗರೇಟು ಸೇದೋಕೆ ಬಿಡುವೆಲ್ಲಿ ಸಿಕ್ಬೇಕು ಬಿಡಿ.

ರಾಮಸ್ವಾಮಿ : ನೋಡಿ ಸಾರ. ನೀವೇ ಯೋಚ್ನೆ ಮಾಡ್ಬಿಟ್ಟು ನೋಡಿ. ಇಂಥಾ ಖೂನಿ ಕೆಲ್ಸ ಎಲ್ಲ ನಾನು ಮಾಡೋಕೆ ಸಾಧ್ಯಾನಾ ? ನಮ್ಮಪ್ಪ ನಿಮಗ್ಗೊತ್ತಿರೋ ಹಾಗೆ ಕೋಲಾರದಲ್ಲಿದ್ರು. ಬೇಕಾದ್ರೆ ಕೋಲಾರಕ್ಕೆ ಟ್ರಂಕ ಕಾಲ ಮಾಡಿ.

ರಂಗಸ್ವಾಮಿ : All right ಹಾಗೆ ಆಗ್ಲಿ. [Goes to the Phone] 'Hello Exchange' ಕೋಲಾರದಲ್ಲಿ ಭಗವಂತರಾಯರ ಮನೇಗೇ ಒಂದು ಟ್ರಂಕಾಲ, ಬೇಡ ಬರೀ ನಂಬರ ಕಾಲ ಸಾಕು. Right [Puts back the Receiver]

ರಾಮಸ್ವಾಮಿ : ಆದ್ರೆ ಆದ್ರೆ ನಮ್ಮಪ್ಪಂದೆ ಅಲ್ಲಿಲ್ದೆ ಇರೋದಕ್ಕೂ ಸಾಧ್ಯವಿದೆ. ಅವರು ಯಾವಾಗ್ಲೂ ತೀರ್ಥಯಾತ್ರೆ ಮಾಡ್ತಾ ಇರ್ತಾರೆ. ಅವರು ಅಲ್ಲಿಲ್ದೆ ಇದ್ರೆ ಇಲ್ಲೇ ಇರಬೇಕು ಅಂತ ಅರ್ಥ ಅಲ್ಲ.

ರಂಗಸ್ವಾಮಿ : ನೋಡಿ ಮಿ. ರಾಮಸ್ವಾಮಿ, ನೀವು ಕೊಲೆಗಾರ ಆಗಿರ್ಲೇ ಬೇಕು ಅಂತ ನನ್ನಿಷ್ಟ ಅಲ್ಲ. ಬರೀ ಪೇಪರ ನ್ಯೂಸ ಆದ್ರೆ

ಸುಳ್ಳು ಅಂದ್ಕೊಳ್ಳೇಬೌದು. ಎಲ್ಲರ ಬಾಯಲ್ಲೂ ಇದೆ ಅಂದ್ರೆ ?

ಶಾಸ್ತ್ರಿಗಳು : ಹೂಂ ಹೂಂ, ಆಗಿದ್ದೆಲ್ಲಾ ಆಗ್ಹೋಯ್ತು. ಆಗೋ ಶಾಸ್ತ್ರಗಳೆಲ್ಲ ಆಗೋಗ್ಲಿ. ಒಂದಿಷ್ಟು ಅಕ್ಕಿ ಎಳ್ಳು ತರ್ಸಪ್ಪ ಬೇಗ, ಹೆಣಾನ ತುಂಬಾ ಹೊತ್ತು ಕಾಯಿಸ್ಬಾರ್ದು.

ರಾಮಸ್ವಾಮಿ : ನಂಗೆ ನಗಬೇಕೋ ಅಳಬೇಕೋ ಅರ್ಥವಾಗ್ತಿಲ್ಲ. ಇವತ್ತು ನಂಗೆ ಮದ್ವೆ. ಇಂಥ ದಿವ್ಸ ಹೀಗೆ ಯಾವತ್ತೂ ಬರದೋರು ಬಂದು, ಪೈಪೋಟಿ ಮೇಲೆ ಸುಳ್ಳುಗಳ್ನ ಹೇಳ್ತಾ ಇದ್ರೆ ನಾನೇನ ಮಾಡ್ಲಿ. [ಇಬ್ಬರು ಪೋಲೀಸಿನವರ ಪ್ರವೇಶ. ರಂಗಸ್ವಾಮಿಗೆ ಸೆಲ್ಯೂಟ ಮಾಡುವರು]

ರಂಗಸ್ವಾಮಿ : ನೀವು ಯಾಕೆ ಬಂದ್ರಯ್ಯ ಇಲ್ಲಿ ?

1ನೇ ಪೋಲೀಸ್: ಸೂಪರಿಂಟೆಂಡೆಂಟ ಸಾಹೇಬ್ರು ಫೋನ ಮಾಡಿದ್ರು ಸಾರ. ಇಲ್ಯಾರ್ದೋ ಖೂನಿ ಆಗಿದೆಯಂತೆ. ಭಗವಂತಪ್ಪ ಅನ್ನೋರ್ದು. ಈ ಮನೆಯಿಂದ ಯಾರ್‍ನೂ ಆಚೆ ಬಿಡ್ದ ಹಾಗೆ ಕಾವಲಿರು. ಯಾರ್‍ನೂ ಬಿಡಕೂಡ್ದು. ಆ ಹೆಣಾನೇ ಎದ್ದು ಬಂದ್ರೂ ಬಿಡ ಕೂಡ್ದು ಅಂದ್ರು.

ರಂಗಸ್ವಾಮಿ : ಸರಿ ಹಾಗಾಗಿದ್ರೆ. ಆಚೆ ಕಾವಲಿರಿ.

2ನೇ ಪೋಲೀಸ್: ಇಲ್ಲಾ ಸಾರ. ಮನೇ ಒಳ್ಗೇ ಇರೂ ಅಂತ ಹೇಳಿದ್ರು.

ರಂಗಸ್ವಾಮಿ : ಸರಿ, ಅಲ್ಲೇ ಪಕ್ಕದಲ್ಲೇ ಕೂತ್ಕೊಳ್ಳಿ. ಈಗೇನಂತೀರ ಮಿ. ರಾಮಸ್ವಾಮಿ. ಇನ್ನ ನಿಮ್ಮನ್ನ ಬಿಡೋಕಾಗೊಲ್ಲ. ಬೇರೆ ಯಾವ್ದಾದ್ರೂ ಕೇಸ ಆಗಿದ್ರೆ ನಾವಿಷ್ಟು ಇಂಟ್ರೆಸ್ಟ ತಗೊಳ್ತಾ ಇರ್ಲಿಲ್ಲ. ನನ್ನ ಸ್ನೇಹಿತನ ಕೊಲೆ ಆಗಿದೆ. ಇಂಥಾ ಕೊಲೆ ಆಗಿದ್ರೂ, ನಾನು ಸುಮ್ನೆ ಇದ್ರೆ ನಾನು ಸ್ನೇಹಿತ ಆಗಿದ್ದೂ ಏನು ಸಾರ್ಥಕ ಹೇಳಿ.

ರಾಮಸ್ವಾಮಿ : ನೋಡಿ ಸಾರ, ನನಗಿದೆಲ್ಲಾ ಅರ್ಥ ಆಗ್ತಿಲ್ಲ. ನಾನು ಏನು

ಬೇಕಾದ್ರೂ ಮಾಡ್ತೀನಿ. ಖಂಡಿತಾ ಕೊಲೆ ಮಾಡೋಂಥ ವ್ಯಕ್ತಿ ಅಲ್ಲ. ಬೇಕಾದ್ರೆ ಸೋಮೂನ ಕೇಳಿ. ನಂಜತೇಲಿ ಇದ್ದ. [Phone ರಂಗಸ್ವಾಮಿ ತೆಗೆದು ಕೊಳ್ಳುವನು.]

ರಂಗಸ್ವಾಮಿ : Hello ಕೋಲಾರ ? ಹಾಂ. ಭಗವಂತರಾಯರ ಮನೇನಾ ? ನಾನು ಧರ್ಮಪುರದ ಪೋಲೀಸ ಇನ್ಸಪೆಕ್ಟರ ರಂಗಸ್ವಾಮಿ ಮಾತನಾಡೋದು ಅವರ ಮಗಳಾ ? ಏನೂ ಇಲ್ಲ. ನಿಮ್ಮ Father ಅಲ್ಲಿದ್ದಾರಾ ? ಹಾಂ ಸಮಾಚಾರ ಗೊತ್ತಾಗಿದೆ ಅಂದ್ರಾ ? ಆ ಊರಲ್ಲೆಲ್ಲಾ ಹ್ಯಾಗ್ಗೊತ್ತಾಯ್ತು Proceedings ನಡೆಸ್ತೀನಿ. Right ಬೇಗ ಬನ್ನಿ. I am so sarry ಹಾಗೇ ಆಗಿಲ್ಲ. ನೀವು ಬರೋವರ್ಗೂ ದಫನ ಮಾಡ್ಸಲ್ಲ ಹೂಂ. Thank you [Phone ಇಡುವನು ಡಾ॥ ಜಾನಕೀರಾಮ Enters in a hurry]

ರಂಗಸ್ವಾಮಿ : Oh, Come Doctor

ರಾಮಸ್ವಾಮಿ : ಹಾಂ. ಸಧ್ಯ ದೇವರು ಬಂದ್ಹಾಗೆ ಬಂದ್ರಿ. ನೋಡಿ ಇನ್ಸ ಪೆಕ್ಟರೇ, ಇವರ್ನೇ ಕೇಳಿ. ನನಗೆ ಮೂರು ದಿನದಿಂದ ಮೈ ಸ್ವಸ್ಥ ಇಲ್ಲ. ಇವ್ರು, ಸೋಮೂ ನಿನ್ನೆ ರಾತ್ರಿ ತುಂಬಾ ಹೊತ್ತು ಇಲ್ಲೆ ಇದ್ರು. ಬೆಳಿಗ್ಗೆ ಹೋದ್ರು. ಕೇಳಿ ಬೇಕಾದ್ರೆ ಅವರ್ನೆ. ಈಗ ತಿರ್‍ಗಾ ಎದೆನೋವು ಅಂತ ಸೋಮು ಕೈಲಿ ಹೇಳಿ ಕಳಿಸ್ದೆ. ಬಂದಿದ್ದಾರೆ. ಅಲ್ವ ಡಾಕ್ಟರ.

ಡಾಕ್ಟರ : ಹೌದು, ನಾನು ನಿನ್ನೆ ತುಂಬಾ ಹೊತ್ತು ಇಲ್ಲೇ ಇದ್ದೆ.

ರಾಮಸ್ವಾಮಿ : ನೋಡಿದ್ರಾ ?

ಡಾಕ್ಟರ : ಆದ್ರೆ ನಾನೀಗ ಬಂದಿರೋದು ನಿಮ್ಮ ಎದೆನೋವು ನೋಡೋಕಲ್ಲ. ಪೋಲೀಸ ಸೂಪರಿಂಟೆಂಡೆಂಟರಿಂದ ಫೋನ ಬಂದಿತ್ತು. ಈ ಮನೇಲಿ ಭಗವಂತರಾಯರ ಖೂನಿ ಆಗಿದೆ. Post Martem ಮಾಡ್ಬಿಟ್ಟು Certificate

ಕೊಟ್ಬಿಡಿ ಅಂದ್ರು. ಬಂದೆ. ನಿಮ್ಮ ಎದೆ ನೋವ್ಗೆ ಅದೇ ಮಾತ್ರೆ ತಗೊಳ್ಳಿ.

ರಂಗಸ್ವಾಮಿ : ನೋಡಿ ಮಿ. ರಾಮಸ್ವಾಮಿ. ಹೆಚ್ಚು ಮಾತು ಬೇಡ. ಹಣ ಎಲ್ಲಿದೆ ತೋರಿಸ್ಬಿಡಿ. ಬೇಗ ಬೇಗ ಕೆಲ್ಸ ಮುಗ್ಸೊಂಡ್ಹೋಗ್ಲಿ. [ಪೋಲೀಸಿನವರನ್ನು] ನೋಡ್ರಯ್ಯ. ರಾಯರ ಜೊತೆ ಒಳಗ್ಹೋಗಿ ಹಣ ನೋಡ್ಕಂಬನ್ನಿ. [ರಾಮಸ್ವಾಮಿ ಎದ್ದು ನಿಧಾನವಾಗಿ ಒಳಗೆ ಹೋಗುವನು. ಪೋಲೀಸಿನವರು ಹಿಂಬಾಲಿಸುವರು]

ರಂಗಸ್ವಾಮಿ : [ಡಾಕ್ಟರನ್ನು] ರಾಮಸ್ವಾಮಿ, ನಿಮ್ಗೆ ಚೆನ್ನಾಗ್ಗೊತ್ತ ?

ಡಾಕ್ಟರ : ಓ ಇವರ friend ಸೋಮು ಇದ್ದಾರಲ್ಲ. ಅವ್ರು ನನಗೆ ಸಿಕ್ಕಾಪಟ್ಟೆ ಬೇಕಾದೋರು. ನಾವಿಬ್ರೂ ಒಂದೇ ಉಸ್ರೇ ಆಡೋದು. ಒಂದಿವ್ಸ ಅವ್ರು ಉಸಿರಾಡ್ತಾನೆ ಒಂದಿವ್ಸ ನಾನು ಉಸ್ರಾಡ್ತೀನಿ. ಹೀಗೆ Cooperative basis ಮೇಲೆ ಪರಸ್ಪರವಾಗಿ ಉಸಿರಾಡೋ ಕೆಲಸಾನ ಸುಲಭಾ ಮಾಡ್ಕೊಂಡಿದ್ದೀವಿ, ಹೆ ಹೆ [ನಗುತ್ತಾನೆ] ಜೋಕ್‌ಗೆ ಹೇಳ್ದೆ ಅಷ್ಟೆ. [ಯಾರೂ ನಗುವುದಿಲ್ಲ] ಹೋಗ್ಲಿ ಬಿಡಿ.

ಶಾಸ್ತ್ರಿಗಳು : ಅಲ್ಲಾ ಸ್ವಾಮಿ. ನೀವು ಇನ್ಸಪೆಕ್ಟರೂಂತ ನಂಗೆ ಮೊದಲೇ ಹೇಳ್ಳೇ ಇಲ್ವಲ್ಲ.

ರಂಗಸ್ವಾಮಿ : ನೀವು ಕೇಳ್ಳೇ ಇಲ್ವಲ್ಲ.

ಶಾಸ್ತ್ರಿಗಳು : ಹೆ ಹೆ ನಾನೂ ಈ ಗಲಾಟೇಲಿ ಮರ್ತೇ ಬಿಟ್ಟೆ. ಈಗ ಮಸ್ಲ ಈ ರಾಮಸ್ವಾಮೀನೇ ಖೂನಿ ಮಾಡಿದ್ದೂಂತ ಗ್ಯಾರಂಟಿ ಆಯ್ತೂಂತ ಇಟುಕೊಳ್ಳಿ. ಆಗ ಏನು ಶಿಕ್ಷೆ ?

ರಂಗಸ್ವಾಮಿ : ಇನ್ನೇನು ಫಾಸೀ ಶಿಕ್ಷೆ.

ಶಾಸ್ತ್ರಿ ಮಗ : ಫಾಸೀ ಅಂದ್ರೆ ಕುತ್ತಿಗ್ಗೆ ಹಗ್ಗ, ಕಾಲಿಗೆ ಕಲ್ಲು.

ರಂಗಸ್ವಾಮಿ : ಹೂಂ

ಶಾಸ್ತ್ರಿಮಗ : ಒಂದೇ ನಿಮಿಷಕ್ಕೆ ಪ್ರಾಣ ಹೋಗ್ಬಿಡುತ್ತೆ ಅಲ್ವ ?

ರಂಗಸ್ವಾಮಿ : ಹೂಂ.

ಶಾಸ್ತ್ರಿಗಳು : ಈ ಸರ್ಕಾರೀ ಸಾವು ಸತ್ತ ಹೆಣಕ್ಕೆ ಉತ್ತರಕ್ರಿಯೆ ಮಾಡೋದು ಹ್ಯಾಗೆ ? ಮಾಡೋಕೆ ಬಿಡ್ತಾರಾ ?

ರಂಗಸ್ವಾಮಿ : Oh, yes.

ಶಾಸ್ತ್ರಿಗಳು : ಅದು ಸರ್ಕಾರೀ ಸಾವಾದ್ದರಿಂದ ಉತ್ತರಕ್ರಿಯೆ ಖರ್ಚುಗ್ಳೂ ಸರ್ಕಾರಾನೇ ವಹಿಸ್ಕೋಬೇಕಲ್ವ ?

ರಂಗಸ್ವಾಮಿ : ಇಲ್ಲ, ಸರ್ಕಾರ ವಹಿಸ್ಕೊಳ್ಳಲ್ಲ.

ಶಾಸ್ತ್ರಿಗಳು : ಮತ್ತೆ ಪಾಪ, ಸತ್ತೋರ ಗತಿ : ಒಂದೊಂದು ಹೆಣ ಅಂದ್ರೆ ಖರ್ಚು ಹ್ಯಾಗೋ ತೂಗಿಸ್ಕೊಂಡು ಹೋಗಬಹುದು. ಎರಡೆರಡು ಹೆಣ ಆದ್ರೆ ಹ್ಯಾಗೆ ನಿಭಾಯ್ಸೋದು ರಾಮಸ್ವಾಮಿಗಳು? ಈ ನಡುವೆ ಅಂತೂ ಹೆಣಕ್ಕೆ ವಿಪರೀತ ಖರ್ಚುಗ್ಳು.

ಡಾಕ್ಟರ : ಎರಡು ಯಾವ್ದು ?

ಶಾಸ್ತ್ರಿಗಳು : ತಮ್ಮದೊಂದು, ತಮ್ಮಪ್ಪಂದೊಂದು.

ಶಾಸ್ತ್ರಿ ಮಗ : ತನ್ನ ಮದ್ವೆ ಖರ್ಚಿಗೆ ಇಟ್ಕೊಂಡಿದ್ದಾರಲ್ಲ. ಅದನ್ನೆ ತಮ್ಮ ಉತ್ತರ ಕ್ರಿಯೆಗೆ ಇಟ್ಕೊಳ್ಳಿ ಅಷ್ಟೆ.

ಶಾಸ್ತ್ರಿ : ಹೂಂ. ಘನವಾದ ಆಲೋಚನೆಯೇ. ಅದಕ್ಕೇ ಸ್ವಾಮಿ ನನ್ನ ಮಗನ್ನ ನಾನು ಯಾವಾಗ್ಲೂ ಜತೇಲಿ ಕರ್ಕೊಂಡು ಹೋಗೋದು. ಸಮಯ ಬಿದ್ದು ಇಂಥಾದ್ದೇನಾದ್ರೂ ಧರ್ಮ ಸೂಕ್ಷ್ಮಗ್ಳು ಎದುರು ಬಂದ್ರೆ ತಕ್ಷಣ ಪರಿಹರಿಸಿ ಬಿಡ್ತಾನೆ.

ಶಾಸ್ತ್ರಿಗಳ ಮಗ: ಹಾಗೆ ಎಲ್ಲಾರ ಎದ್ರುಗೆ ನನ್ನ ಹೊಗಳ ಬೇಡಪ್ಪ. ನಾಚ್ಕೆ ಆಗುತ್ತೆ.

ರಂಗಸ್ವಾಮಿ : ತುಂಬಾ ಲೇಟಾಯ್ತು. ಹುಟ್ಟಿದಾಗ್ಲೆ ನಾಚ್ಕೋಬೇಕಾಗಿತ್ತು. ಇಬ್ರಿಗೂ ದೇವರು ಲೇಟಾಗಿ ಬುದ್ಧಿ ಕೊಟ್ಟ. ನಾಚ್ಕೊಳ್ಳಿ.

ಶಾಸ್ತ್ರಿಗಳು : ಸಾರ್ ಇನ್ಸಪೆಕ್ಟ್ರೇ, ಎಲ್ಲಾ ಬೇಗ ಬೇಗ ಮುಗ್ಸಿ ಸಾರ. ಕರ್ಮಗಳಿಗೆ ಹೆಣ ತಂಗಳಾಗಬಾರ್ದು.

ರಂಗಸ್ವಾಮಿ : ಎಲ್ಲಾ ಬಿಟ್ಟು ತನ್ನ ತಂದೇನೇ ಕೊಲ್ಲಬೇಕಾಗಿತ್ತ ಇವ್ರು.

ಶಾಸ್ತ್ರಿಗಳು : ಇವ್ನು ಆಡೋ ಆಟ ನೋಡಿ ನೋಯೋದಕ್ಕಿಂತ, ನೋಡ್ದೇ ಸಾಯೋದು ವಾಸಿ ಬಿಡಿ.

[ರಾಮಸ್ವಾಮಿ ನಿಧಾನವಾಗಿ ತಲೆ ತಗ್ಗಿಸಿ ಕೊಂಡು ಬರುತ್ತಾನೆ. ಅಕ್ಕಪಕ್ಕದಲ್ಲಿ ಪೋಲೀಸರು]

ರಾಮಸ್ವಾಮಿ : ಹೌದು. ನೀವೆಲ್ಲ ಹೇಳಿದ ಹಾಗೆ ನಮ್ತಂದೆ ಆಚೆ ಕಡೆ ರೂಮಿನಲ್ಲಿ ಸತ್ತು ಬಿದ್ದಿರೋದೇನೋ ನಿಜ.

ರಂಗಸ್ವಾಮಿ : ನೋಡಿದ್ರಾ ಅಪ್ಪಿಲ್ದೆ ಇಷ್ಟೆಲ್ಲಾ ಆಗುತ್ಯೆ ? ಸರಿ. I am very sorry.

ರಾಮಸ್ವಾಮಿ : ಸತ್ಯ ಹೇಳ್ತಿನಿ ಕೇಳಿ. ನಾನು ಕೊಲೆ ಮಾಡ್ಲಿಲ್ಲ. ಅವ್ರೇ ಆತ್ಮಹತ್ಯೆ ಮಾಡ್ಕೊಂಡಿದ್ದಾರೆ.

ರಂಗಸ್ವಾಮಿ : ಆತ್ಮಹತ್ಯೆ !

ರಾಮಸ್ವಾಮಿ : ಹೌದು.

ಶಾಸ್ತ್ರಿಗಳು : ಅಯ್ಯಯ್ಯೋ ಆತ್ಮಹತ್ಯೆ ಮಾಡ್ಕೊಂಡ್ರೆ ಎರಡೆರಡು ಶ್ರಾದ್ಧ ಒಟ್ಗೆ ಮಾಡ್ಬೇಕು. ಪ್ರೇತ ಶ್ರಾದ್ಧ ಒಂದು ; ದೈವ ಶ್ರಾದ್ಧ ಒಂದು.

ರಂಗಸ್ವಾಮಿ : ಮತ್ತೆ ನಮಗೆ ಬೆಳಿಗ್ಗೆಯಿಂದ ಯಾಕೆ ಹೇಳ್ಲಿಲ್ಲ?

ರಾಮಸ್ವಾಮಿ : ಅವಮಾನ ಆಗುತ್ತೆ. ಹಿಂಸೆ ಆಗುತ್ತೆ ಅಂತ.

ರಂಗಸ್ವಾಮಿ : ಏನದು ಅವಮಾನ. ಆತ್ಮಹತ್ಯೆ ಅಂದ್ರೆ ನಾನು ನಂಬಲ್ಲ. [ಮೌನ]

ರಂಗಸ್ವಾಮಿ : ಡಾಕ್ಟ್ರೇ you can proceed ಅದಕ್ಕೆ ಮುಂಚೆ ನಾನೂ ನೋಡ್ಕೊಂಬದ್ಬಿಡ್ತೀನಿ. ಮಹಜರ ಬರೀಬೇಕಲ್ಲ.

[ಒಳಗೆ ಹೋಗುವನು. ಪೋಲೀಸರು ಹಿಂಬಾಲಿ ಸುವರು]

ರಾಮಸ್ವಾಮಿ : ಡಾಕ್ಟ್ರೆ ನೀವ್ಯಾಕೆ ಸುಮ್ನೆ ಇದ್ದೀರ, ನಿಮ್ಗೂ ಗೊತ್ತು ಇದು ಆತ್ಮಹತ್ಯೇಂತ. ನೀವು ಇದ್ರಿ.

ಡಾಕ್ಟರ : ನಾನೀಗ ಅದ್ನೆಲ್ಲಾ ಹೇಳ್ಬಾರ್ದು. ಮಿ. ರಾಮಸ್ವಾಮಿ. ಈ ವಿಷ್ಯ ಹ್ಯಾಗೆ leak ಆಯ್ತು ಅಂತಾನೇ ನಂಗರ್ಥ ಆಗ್ತಿಲ್ಲ. ನಾನೀಗ ಇದು ಆತ್ಮಹತ್ಯೆ ಅಂತ ಹೇಳ್ಬಿಟ್ರೆ ನಾನು ನಿಮ್ಮ ಸ್ನೇಹಿತ ಅಂತಾನೋ, ದುಡ್ಡು ತಿಂದಿದ್ದೀನಿ ಅಂತಾನೋ ಅಂದ್ಬಿಡ್ತಾರೆ. ಏನ್ಮೇ ಆಗ್ಲಿ, ನಾನು official witness ನೋಡಿ. ಆಮೇಲೆ ಹ್ಯಾಗಿದ್ರೂ ಸೋಮು ಬರ್ತಾನೆ. ಹೇಳ್ತಾನೆ. post mortemನಲ್ಲೂ ಆತ್ಮಹತ್ಯೆ ಅಂತಾನೇ report ಬರುತ್ತೆ. ಏನು ತೊಂದ್ರೆ ಹೇಳಿ. ಜತೆಗೆ ಆತ್ಮ ಹತ್ಯೆ ಪತ್ರ ಬೇರೆ ಇದೆ. ಇಲ್ಲೇ ಇದೆ ತಾನೆ?

ರಾಮಸ್ವಾಮಿ : ಇಲ್ಲ. ಸೋಮು ತಗೊಂಡು ಹೋಗಿದ್ದಾನೆ.

ಡಾಕ್ಟರ : ಸರಿ ಬರ್ತಾನೆ. ತೊಂದ್ರೆ ಏನಿದೆ ಹೇಳಿ.

ರಾಮಸ್ವಾಮಿ : ಹಾಗಿದ್ರೆ ಸರಿ.

[ರಂಗಸ್ವಾಮಿ ಒಳಗಿನಿಂದ ಬರುತ್ತಾನೆ]

ರಂಗಸ್ವಾಮಿ : ಡಾ|| ಜಾನಕೀರಾಂ, ನೀವು post mortem ಮಾಡ್ಬಿಟ್ಟು ಇದು ಆತ್ಮಹತ್ಯೇನೋ, ಕೊಲೇನೋ ಅನ್ನೋದನ್ನ ತಮಾಮ ಪರೀಕ್ಷೆ ಮಾಡ್ಬಿಡಿ. ನಂಗಂತೂ ಇದು ಆತ್ಮ ಹತ್ಯೇಂತ ನಂಬ್ಕೆ ಇಲ್ಲ,

ಡಾಕ್ಟರ : ಸರಿ ಸಾರ. [goes in]

ರಂಗಸ್ವಾಮಿ : ಸರಿ. ಮಿ. ರಾಮಸ್ವಾಮಿ, ಇದು ಆತ್ಮಹತ್ಯೆ ಅನ್ನೋದಕ್ಕೆ ದಾಖಲೆ ಏನು ?

ರಾಮಸ್ವಾಮಿ : ಆತ್ಮಹತ್ಯೆ ಪತ್ರ ಬರೆದಿಟ್ಟಿದ್ದಾರೆ.

ರಂಗಸ್ವಾಮಿ : ನೀವೇ ಬರೆದಿಟ್ಟು forgery ಮಾಡಿರಬೌದು.

ರಾಮಸ್ವಾಮಿ : ಅವರ ಆತ್ಮಹತ್ಯೆಗೆ ಸಾಕ್ಷಿ ಇದ್ದಾರೆ.

ರಂಗಸ್ವಾಮಿ : ಯಾರು ?

ರಾಮಸ್ವಾಮಿ : ಸೋಮಶೇಖರ ಇನ್ನೊಬ್ರು.

ರಂಗಸ್ವಾಮಿ : ಇನ್ನೊಬ್ರು ಯಾರು ?

ರಾಮಸ್ವಾಮಿ : ನಿಮಗೆ ಗೊತ್ತಾಗುತ್ತೆ. ಸ್ವಲ್ಪ ತಾಳಿ. ಅದೂ ಅಲ್ದೆ. report ಬಂದ ತಕ್ಷಣ ನಿಮಗೆ ಗೊತ್ತಾಗುತ್ತೆ.

ರಂಗಸ್ವಾಮಿ : ನಿಮಗಿದು ಆತ್ಮಹತ್ಯೆ ಅಂತ ಯಾವಾಗ ಗೊತ್ತಾಯ್ತು ?

ರಾಮಸ್ವಾಮಿ : ಬೆಳಗಿನ ಝಾವ. ನಿನ್ನೆ ರಾತ್ರಿ ಅಪ್ಪ. ಸೋಮು ತುಂಬಾ ಹೊತ್ತು ಮಾತಾಡ್ತಾ ಇದ್ರು. ಆಮೇಲೆ ರೂಮಲ್ಲಿ ಮಾಮೂಲಾಗಿ ಮಲಕ್ಕೊಂಡ್ರು. ಸೋಮು, ನಾನು, ಆ ಇನ್ನೊಬ್ರು ಮಾತಾಡ್ತಾ ಕೂತಿದ್ವಿ. ಬೆಳಗಿನ ಜಾವ ಕಿಟಕಿ ಸಂದಲ್ಲಿ ನನಗೆ ಹಗ್ಗ ಕಂಡು ಮೂವರೂ ಅನುಮಾನ ಪಟ್ಟು, ಬಾಗ್ಲೊಡ್ದು ನೋಡಿದ್ರೆ ಒಳಗೆ ಶವ ನೇತಾಡ್ತಾ ಇತ್ತು. ಪಕ್ಕದಲ್ಲೇ ಪತ್ರ ಇತ್ತು. ಆ ಪತ್ರದಲ್ಲಿ ಇದ್ದ ಸುದ್ದಿ ಕಂಡು ನಂಗೆ ದಿಗ್ಭ್ರಮೆ ಆಗ್ಹೋಯ್ತು. ಯಾರ್ಗೂ ಇದು ಆತ್ಮಹತ್ಯೇಂತ ಗೊತ್ತಾಗ್ದ ಹಾಗೆ, ಹೆಣಾನ ತಗೊಂಡೋಗಿ ಸುಟ್ಬಿಟ್ಟು ಏನೂ ಆಗಿಲ್ಲ ಅನ್ನೋ ಥರ ಇದ್ಬಿಡೋದೂಂತ ನಾವು ಮೂರು ಜನಾನೂ ತೀರ್ಮಾನಿಸಿದ್ವಿ.

ರಂಗಸ್ವಾಮಿ : ಯಾಕೆ ? ಏನಂಥ ಕಳ್ತನ ?

ರಾಮಸ್ವಾಮಿ : ಆ ಪತ್ರದಲ್ಲಿ ನನ್ನ ಆತ್ಮಹತ್ಯೆಗೆ ನನ್ನ ಮಗ ರಾಮಸ್ವಾಮಿ ದುರ್ನಡತೇನೇ ಕಾರಣ ಅಂತ ಬರೆದಿದ್ರು. ಸನ್ನಿಷ್ಟ ಬಂದ ಹಾಗೆ ನಾನಿದ್ದದ್ದಕ್ಕೆ ನನ್ನೆಡೆ ಬೆರಳು ತೋರಿಸಿ ಅಪರಾಧಿ ಮಾಡಿದ್ರು.

ರಂಗಸ್ವಾಮಿ : ಅದೂ ನೀವು ಹಾಗೆಲ್ಲಾ ಜೂಜಾಡೋದು ನಾಟಕಾ

ಮಾಡೋದು. ಹೆಂಗಸರ ಜತೆ ತಿರ್ಗೋದು. ಅದೆಲ್ಲಾ ಮಾಡ್ಬಾರ್ದಾಗಿತ್ತು.

ರಾಮಸ್ವಾಮಿ : ನನ್ನಿಷ್ಟ, ನಾನು ಮಾಡ್ದೆ.

ರಂಗಸ್ವಾಮಿ : ಹೂಂ ಅದೆಲ್ಲಾ ನನಗ್ಯಾಕೆ.

ರಾಮಸ್ವಾಮಿ : ಆದ್ರೆ ಅವ್ರು ಅಂದ್ಕೊಂಡಷ್ಟು ಕೆಟ್ಟೋನಲ್ಲ ನಾನು. ಅವರು ವರ್ಣಿಸಿರೋಷ್ಟು ದುರ್ನಡತೆಗಳು ನನ್ನಲ್ಲಿಲ್ಲ.

ಶಾಸ್ತ್ರಿಮಗ : ಹಾಗಿದ್ರೆ ಯಾರೋ ನಿಮಗಾಗದೋರು ಅವರ್ಗೆ ಸುಳ್ಳು ಹೇಳಿರಬಹುದು.

ರಂಗಸ್ವಾಮಿ : ನಿಮ್ತಂದೆ ಇಲ್ಲಿಗೆ ಯಾವತ್ತು ಬಂದ್ರು ?

ರಾಮಸ್ವಾಮಿ : ಮೂರು ದಿನದ ಹಿಂದೆ.

ರಂಗಸ್ವಾಮಿ : ನಿಮ್ಗೆ ಮೊದ್ಲಿಂದಾನೂ ಅವ್ರು ಸಿನಿಮಾ, ನಾಟ್ಕ ಬಿಡಬೇಕು, ಕೆಟ್ಟ ವಿದ್ಯೆ ಬಿಡಬೇಕು. ಅಂತ ಪದೇ ಪದೇ ಹೇಳ್ತಿದ್ರು.

ರಾಮಸ್ವಾಮಿ : ಹೌದು.

ರಂಗಸ್ವಾಮಿ : ನಿಮ್ಮನ್ನ ಪ್ರತಿಯೊಂದಕ್ಕೂ ನಿರ್ಬಂಧಿಸ್ತಾ ಇದ್ರು ?

ರಾಮಸ್ವಾಮಿ : ಹೌದು.

ರಂಗಸ್ವಾಮಿ : ನಿಮ್ಮದು ಮೊದ್ಲಿಂದ ಸ್ವಚ್ಛಂದವಾದ ಮನಸ್ಸು ?

ರಾಮಸ್ವಾಮಿ : ಹೌದು.

ರಂಗಸ್ವಾಮಿ : ತುಂಬಾ free ಯಾಗಿರ್ತಾ ಇದ್ರಿ ?

ರಾಮಸ್ವಾಮಿ : ಹೌದು.

ರಂಗಸ್ವಾಮಿ : ಯಾವ ನಿರ್ಬಂಧಗಳನ್ನೂ ನೀವು ಸಹಿಸೋದಿಲ್ಲ ?

ರಾಮಸ್ವಾಮಿ : ಹೌದು.

ರಂಗಸ್ವಾಮಿ : ನಿಮ್ಮ ತಂದೆಯವರ ನಿರ್ಬಂಧಾನೂ ನೀವು ಸಹಿಸ್ತಿರಲಿಲ್ಲ.

ರಾಮಸ್ವಾಮಿ : ಹೌದು !

ರಂಗಸ್ವಾಮಿ : ಆದ್ರೆ ನಿಮ್ಗೆ ಬೇರೆ ದಾರಿ ಇರ್ಲಿಲ್ಲ ?

ರಾಮಸ್ವಾಮಿ : ಹೌದು.

ರಂಗಸ್ವಾಮಿ : ಆದ್ರಿಂದ ಸಹಿಸಲಾರ್ದೆ ನೀವು ಅವರನ್ನ ಕೊಂದುಬಿಟ್ರಿ.

ರಾಮಸ್ವಾಮಿ : ಸುಳ್ಳು, ಅವರೇ ಆತ್ಮಹತ್ಯೆ ಮಾಡ್ಕೊಂಡ್ರು. ಅದನ್ನ ಸೋಮು ನೋಡಿದ್ದಾನೆ. ಪತ್ರ ಇದೆ.

ರಂಗಸ್ವಾಮಿ : ಪತ್ರ ನೋಡಿದ್ಮೇಲೆ ತಾನೆ ಖಾತ್ರಿ ?

ರಾಮಸ್ವಾಮಿ : ಸೋಮು ಬಂದ ತಕ್ಷಣ ಗೊತ್ತಾಗುತ್ತೆ.

ರಂಗಸ್ವಾಮಿ : ಬರೋರಾಗಿದ್ರೆ ಯಾವಾಗ್ಲೋ ಬರ್ತಿದ್ರು.

ರಾಮಸ್ವಾಮಿ : ಖಂಡಿತಾ ಬಂದೇ ಬರ್ತಾರೆ.

ಡಾಕ್ಟರ : [comes in] post mortem ಇಲ್ಲೇ ಮಾಡ್ಬಿಡ್ತೀನಿ ಸಾರ post mortem ward ಖಾಲಿ ಇಲ್ಲ.

ರಂಗಸ್ವಾಮಿ : oh yes ಹಾಗೇ ಮಾಡಿ [do goes in] ಹೂಂ ಎಲ್ಲಿ ಸಾರ ಸೋಮು.

ರಾಮಸ್ವಾಮಿ : ಇನ್ನು ಸ್ವಲ್ಪ ಹೊತ್ಗೆ ವಾಲಗದ ಸಮೇತ ಖಂಡಿತಾ ಬರ್ತಾನೆ.

ಶಾಸ್ತ್ರಿಗಳು : ಆಯ್ಯಾ ಮನೇಲಿ ಹೆಣ ಇಟ್ಕೊಂಡು. ಮದ್ವೇಗೆ ಹ್ಯಾಗಯ್ಯ!ಕಂಕಣ ಕಟ್ಕೊಳ್ತೀಯ? ಇದ್ರ ಮೇಲೆ ನಿನ್ನಿಷ್ಟ. ಹತ್ತು ಮದ್ವೆಗಾಗೋಷ್ಟು. ಶ್ರಾದ್ಧಕ್ಕಾಗೋಷ್ಟು ದರ್ಭೆ ತಂದಿದ್ದೀನಿ. ಯಾವುದು ಮಾಡು ಅಂದ್ರೆ ಅದು ಮಾಡಿಸ್ತೀನಿ.

ರಂಗಸ್ವಾಮಿ : ರೀ, ನೀವು ಸ್ವಲ್ಪ ಸುಮ್ನಿರಿ. ನಿಮ್ಮನ್ನ ಯಾರ್ರಿ ಬರ ಹೇಳ್ದೋರು ಇಲ್ಲಿಗೆ ?

ಶಾಸ್ತ್ರಿ ಮಗ : ರೀ ಈ ಖೂನೀ ಕೇಸ್ಗೆ ನಮ್ಮಪ್ಪಾನೂ ಸಾಕ್ಷಿ ಅನ್ನೋದನ್ನ ಮರೀಬೇಡಿ.

ಶಾಸ್ತ್ರಿಗಳು : ನೋಡಿದ್ರಾ ನಾನು ಹೇಳಿಲ್ಲ ಧರ್ಮಸೂಕ್ಷ್ಮ ಎದುರು ಬಂದ್ರೆ ಸಾಕು. ಹ್ಯಾಗೆ ಪರಿಹರಿಸಿಬಿಡ್ತಾನೆ.

ರಂಗಸ್ವಾಮಿ : ಸಾಕು ಸುಮ್ನಿರಿ ಸ್ವಲ್ಪ.

[ಇಬ್ಬರು ವಯಸ್ಸಾದ ಗಂಡಸರು ಒಳಕ್ಕೆ ಬರುತ್ತಾರೆ]

ರಂಗಸ್ವಾಮಿ : ಯಾರು ನೀವೆಲ್ಲಾ ? ನಿಮ್ಮನ್ನೆಲ್ಲಾ ಯಾರು ಒಳ್ಗೆ ಬಿಟ್ರು ?

1ನೇ ವ್ಯಕ್ತಿ : ಯಾರೂ ಅಲ್ಲ ಬಿಡಿ. ನಾವು ಭಗವಂತರಾಯ್ರು, ಖಾಸಾ ಸ್ನೇಹಿತ್ರು.

2ನೇ ವ್ಯಕ್ತಿ : ಹೀಗೆ ವರ್ತಮಾನ ಗೊತ್ತಾಯ್ತು. ಭಗವಂತನ್ನ ಅವನ ಮಗಾನೇ ಮುಗ್ಸಿಬಿಟ್ಟ ಅಂತ. ಜೀವ ಕೊಟ್ಟೋನ ಜೀವಾನ ತಗೊಂಡಿದ್ದಾನಲ್ಲ ಅವನ್ನ ಬಿಡಬೇಡಿ ಸ್ವಾಮಿ.

1ನೇ ವ್ಯಕ್ತಿ : ಏನು ಸಾಕ್ಷಿ ಬೇಕೋ ಅದಕ್ಕೆಲ್ಲಾ ನಾವು ಏರ್ಪಾಡು ಮಾಡ್ತೀವಿ. ಅವನ್ನ ಗಲ್ಲಿಗೆ ಹಾಕ್ಸೋಕೆ ಎಷ್ಟು ಬೇಕೋ ಅಷ್ಟು ಮಾಡಿ. ಇಂಥಾವರ್ನ ಹೀಗೆ ಬಿಟ್ರೆ ನಾವು ಬದುಕ್ತೀವಿ ಅಂತ ಏನು ಗ್ಯಾರಂಟಿ ?

ರಾಮಸ್ವಾಮಿ : ನೀವು ಬದುಕಿ ಏನಾಗಬೇಕಾಗಿದೆ ಹೋಗ್ರಿ. [ರೇಗಿ ಬೀಳುತ್ತಾನೆ.]

ರಂಗಸ್ವಾಮಿ : ಈಗ ಅದಿನ್ನೂ ಖೂನೀನೋ ಆತ್ಮಹತ್ಯೇನೋ ನಿರ್ಧಾರ ಆಗ್ತಾ ಇದೆ. ಆದ್ಮೇಲೆ ನೀವು ಶವ ನೋಡಬಹುದು. ಈಗ ನಡೀರಿ. ನೀವು ಹಾಗೆ ರೇಗಿ ಬೀಳಬಾರದು ಮಿ. ರಾಮಸ್ವಾಮಿ ಹಾಗೆ ರೇಗಿ ಬಿದ್ದ ದೊಡ್ಡೋರನ್ನ ಕಂಡ್ರೆ ಇವನಿಗಾಗಲ್ಲ. ಆದ್ರಿಂದ ಖೂನಿ ಮಾಡಿರಬೇಕು ಅಂತ presumption ಬರುತ್ತೆ,

[ಇಬ್ಬರೂ ಆಚೆ ಹೋಗುವರು]

ರಂಗಸ್ವಾಮಿ : ಹೂಂ ಶಾಸ್ತ್ರಿಗಳೇ ನಿಮ್ದೇನು ಕೆಲ್ಸ ಇದ್ರೂ ಆಮೇಲೆ ಬನ್ನಿ. ಈಗ ನಡೀರಿ.

ಶಾಸ್ತ್ರಿ ಮಗ : [ಎದ್ದು] ಹೂಂ ಸರಿ. ಆಮೇಲೆ ಬರ್ತೀನಪ್ಪಾ ನಾನು. ನೋಡಂ ಹ್ಯಾಗೆ ಅನುಕೂಲ್ವೋ ಹಾಗೆ ಮಾಡಂ. ಮದ್ವೆ ಆಗ್ಬೇಕೂಂದ್ರೆ ಅಕ್ಕಿ ಜೀರ್ಗೆ ತರ್ಸು. ಶ್ರಾದ್ಧ ನಡಿ ಬೇಕೂಂದ್ರೆ ಅಕ್ಕಿ ಎಳ್ಳು ತರ್ಸು. ಯಾವುದೇ ಆಗ್ಲಿ ಅಕ್ಕಿ ಅಂತೂ ಖಾಯಂ. ಮದ್ವೆ ಅಕ್ಕಿಯಿಂದ ಶುರುವಾದ್ರೆ. ಶ್ರಾದ್ಧ ಅಕ್ಕಿಯಿಂದ ಮುಗಿಯುತ್ತೆ. ಅಷ್ಟೇ ವ್ಯತ್ಯಾಸ.

ರಾಮುಸ್ವಾಮಿ : ರೀ ಹೋದ್ಲು ನೀವು ಆಚೆ ನಡೀರಿ. ನಿಮ್ಮ ಮದ್ವೇನೂ ಬೇಡ. ನಿಮ್ಮ ಶ್ರಾದ್ಧಾನೂ ಬೇಡ. ಬೇಕಾದ್ರೆ ನೀವೇ ಮಾಡ್ಕೊಳ್ಳಿ ಎರಡನ್ನೂ.

ಶಾಸ್ತ್ರಿಗಳು : ಅಯ್ಯೋ, ಹಾಗಂದ್ರೆ ಆಗುತ್ಯೆ [ಶಾಸ್ತ್ರಿಗಳು ಮತ್ತು ಶಾಸ್ತ್ರಿಗಳ ಮಗ ನಿರ್ಗಮನ]

ರಂಗಸ್ವಾಮಿ : ಅಲ್ಲ ನಿಮ್ಮನ್ನ ನೋಡಿದ್ರೆ ಆಶ್ಚರ್ಯ ಆಗುತ್ತೆ. ಮನೇಲಿ ಕೊಲೇನೋ ಆತ್ಮಹತ್ಯೇನೋ ಅಂತೂ ಯಾವ್ದೋ ಒಂದು ಸಾವು ನಡೆದಿದೆ. ನಿಮಗೆ ನೀವೇ ಸಿಕ್ಕಿಹಾಕಿಕೊಂಡಿರೋದು ಬಿಟ್ಟು ಇನ್ಯಾವ ಯೋಚ್ನೆ ಇಲ್ಲ, ಗಾಬರಿ ಕೂಡ ಇಲ್ಲ.

ರಾಮುಸ್ವಾಮಿ : ನಮ್ಮ ಅಣ್ಣ ಒಬ್ಬಿದ್ದ. ಅವನು ಸತ್ತಿದ್ದಕ್ಕೆ ನಾನೇ ಕಾರಣ ಅಂದ್ಕೊಂಡು ಬಿಟ್ಟಿದ್ದೆ. ಆಗ ಗಾಬರಿ ಆಗಿದ್ದೆ. ಯೋಚನೆ ಮಾಡ್ತಿದ್ದೆ. ನನ್ನ ನಾನೇ ಪಾಪಿ ಅಂದ್ಕೊಳ್ತಿದ್ದೆ. ಈಗ ನನಗೆ ಅದೆಲ್ಲ ಇಲ್ಲ. ನನಗೂ, ಇದಕ್ಕೂ ಯಾವ ಸಂಬಂ ದಾನೂ, ಇಲ್ಲ.

ರಂಗಸ್ವಾಮಿ : ಏನು ? ಅಷ್ಟು ನಿರಾಳವಾಗಿ ನುಡೀತೀರಾ ಸೋಮು ಬಂದು ಹೇಳೋವರೆಗೂ ಪತ್ರ ತೋರಿಸೋವರೆಗೂ ನೀವೇ ಕೊಲೆಗಾರರು ಅಂತ ನಮ್ಮ ಲೆಕ್ಕಾ.

ರಾಮಸ್ವಾಮಿ : ಬರೀ ಸೋಪು ಅಲ್ಲ. ಈಗ ಪೋಸ್ಟ್ ಮಾರ್ಟಂ ಮಾಡ್ತಾ ಇದ್ದಾರಲ್ಲ ಡಾಕ್ಟ್ರು ಜಾನಕೀರಾಂ ಅವರೂ ಕೂಡ ಇದ್ರು ಬೆಳಿಗ್ಗೆ ನಾವು ಬಾಗಿಲು ಮುರ್ದಾಗ. ಅವರು ಹೇಳ್ತಾರೆ ಆತ್ಮಹತ್ಯೆ ಅಂತ.

ರಂಗಸ್ವಾಮಿ : Is it ಮತ್ಯಾಕೆ ಇಷ್ಟೊಂದು ಗಲಾಟೆ ಎದ್ದು ಬಿಟ್ಟಿದೆ ನೀವು ಈ ಖೂನಿ ಮಾಡಿದ್ದಿರ ಅಂತ.

ರಾಮಸ್ವಾಮಿ : ಅದೊಂದು ನಂಗರ್ಥ ಆಗ್ತಾ ಇಲ್ಲ. ನೀವು ನನಗೆ ಯೋಚ್ನೆ ಇಲ್ಲಾಂತ ಹೇಳ್ತಿರ. ನಂಗೆ ನಿಜವಾಗ಼್ೂ ಅಯ್ಯೋ ಅನ್ನಿಸ್ತಾ ಇದೆ. ಪಾಪ ನಮ್ಮ ಅಪ್ಪ ಬದುಕಬೇಕೂಂತ ತುಂಬಾ ಆಸೆ ಇಟ್ಕೊಂಡಿದ್ರೂ ಅಂತಾ ಕಾಣುತ್ತೆ. ಭೂಮಿ ಬಿಟ್ಟು ಹೋಗೋ ಕಾಲ ಹತ್ರ ಬಂದಾಗೆಲ್ಲಾ ಭೂಮಿ ಮೇಲೆ ಆಸೆ ಜಾಸ್ತಿ ಆಗ್ತಾ ಹೋಗುತ್ತಂತೆ. ಪಾಪ ಕಾರಣ ಇಲ್ದೆ. ಅಂದ್ರೆ ನಿಜ್ವಾದ ಕಾರಣ ಇಲ್ದೆ ಸತ್ತೋದ್ರು ತಾವಾಗಿ ತಾವೇ ಅಂಥಾ ವಯಸ್ನಲ್ಲಿ ನಿಜ್ವಾಗಿ ನೋಡಿದ್ರೆ ತಾವಾಗಿ ತಾವು ಸಾಯೋ ವಯಸ್ಸಲ್ಲ ಅದು.

ರಂಗಸ್ವಾಮಿ : ನೀವು ಹೇಳೋದು ಕೇಳಿದ್ರೆ ನಂಗೊಂದು ಥರಾ ಹೆದ್ರಿಕೆ ಆಗುತ್ತೆ.

[ಬಾಗಿಲು ತೆಗೆದುಕೊಂಡು ರಮಾ—ರಾಮಸ್ವಾಮಿಯ ತಂಗಿ Enters]

ರಮಾ : ಇವನ್ನಿನ್ನೂ Arrest ಮಾಡಿಲ್ವ ಇನ್ಸಪೆಕ್ಟ್ರೇ ?

ರಾಮಸ್ವಾಮಿ : Arrest ಯಾಕೆ ?

ರಮಾ : ಅಪ್ಪನ್ನ ಖೂನಿ ಮಾಡಿದ್ದಕ್ಕೆ

ರಾಮಸ್ವಾಮಿ : ನಾನು ಮಾಡಿಲ್ಲ.

ರಮಾ : ಇನ್ಯಾರು ಮಾಡಿದ್ರು ?

ರಾಮಸ್ವಾಮಿ : ಅವ್ರೇ ಸ್ವಂತವಾಗಿ ಸತ್ರು. ಆತ್ಮಹತ್ಯೆ ಮಾಡ್ಕೊಂಡ್ರು.

ರಮಾ : ಹೌದಾ Inspector

ರಂಗಸ್ವಾಮಿ : ಆಗ್ಲಿಂದ ಹಾಗೇ ಹೇಳ್ತಿದ್ದಾರೆ. ನಂಗೆ ನಂಬ್ಕೆ ಇಲ್ಲ ಅನುಮಾನ.

ರಮಾ : ಅದೆಲ್ಲಾ ನಂಬೇಡಿ ಸುಳ್ಳು.

ರಂಗಸ್ವಾಮಿ : ನಿಮ್ಗೂ ಅನುಮಾನಾನಾ ಇವರ ಮೇಲೆ ?

ರಮಾ : ಅನುಮಾನ ಉಳ್ದೇ ಇಲ್ಲ. ಖಾತ್ರಿ ಆಗ್ಬಿಟ್ಟಿದೆ. ನಮ್ಗೆ ಯಾವತ್ತೋ ಗೊತ್ತಿತ್ತು. ಒಂದಲ್ಲ ಒಂದಿವ್ಸ ಇಂಥಾ ಕೆಲ್ಸ ಮಾಡ್ತಾನೆ ಅಂತ.

ರಂಗಸ್ವಾಮಿ : ನಿಮ್ತಾಯಿ ಬಂದಿಲ್ವ ?

ರಮಾ : ಬಂದಿದ್ದಾರೆ. ಆಚೇನೇ ಕೂಡ್ಸಿ ಬಂದಿದ್ದೀನಿ.

ರಂಗಸ್ವಾಮಿ : ಒಳಗೆ ಬಂದ್ರೆ ಅತ್ತು ರಂಪ ಮಾಡ್ತಾರೆ ಅಂತಾನಾ ?

ರಮಾ : ಇಲ್ಲ, ಒಳಗೆ ಬಂದ್ರೆ ಇವನ ಮುಖ ನೋಡ್ಬೇಕಾಗುತ್ತೇಂತ. ಅತ್ತು ರಂಪ ಮಾಡೋಕೆ ಕಣ್ಣಲ್ಲಿ ನೀರೆಲ್ಲಿದೆ. ಇವನ ದುಷ್ಟ ವರ್ತನೆ ಅವತ್ನಿಂದ ಕೇಳಿ, ಕೇಳಿ ಅತ್ತೂ, ಅತ್ತೂ ಕಣ್ಣೀರೆಲ್ಲಾ ಮುಗ್ದೋಗಿದೆ. ಯಾವತ್ತೋ ಗೊತ್ತಿದ್ದ ಸಂಗತಿಗೆ ಇವತ್ತು ಯಾಕೆ ಅಳ್ಬೇಕು.

ರಂಗಸ್ವಾಮಿ : ಅಂದ್ರೆ ಮೊದ್ಲಿಂದ ಇವರ್ಗೆ ತಲೇಲಿ Murder ಮಾಡ್ಬೇಕೂಂತ ಇತ್ತ ?

ರಮಾ : ಹೌದು ಇವ್ನು ಕನ್ಸಲ್ಲಿ ಕನವರಿಸಿಕೊಳ್ತಿದ್ದ. ಇವರನ್ನೆಲ್ಲಾ ಒಂದಿವ್ಸ ಕೊಂದು ಬಿಸಾಡ್ಬಿಟ್ರೆ ಆಮೇಲೆ ನನ್ನ ಸ್ವಂತ ಉಸ್ತು ನಾನು ನಿರಾಳವಾಟ ಆಡ್ಕೊಬೌದು ಅಂತ.

ರಾಮಸ್ವಾಮಿ : ಹೌದು. ಮುಂಚೆ ನಾನು ಹಾಗಿದ್ದಿದ್ದು ನಿಜ. ನಿಮ್ಮ ಯಾರ ನಿರ್ಬಂಧಾನೂ ಇಲ್ದೆ ಇದ್ರೆ ನನ್ನಿಷ್ಟ ನಾನು ಆಡಿಕೋಬೌದು ಅಂತ ನಂಗನ್ನಿಸಿದ್ದುದ್ದು ನಿಜ. ಆದರೆ ಈ ನಡುವೆ

ನಿಮ್ಮ ಯಾರ ನಿರ್ಬಂಧಕ್ಕೂ ನಾನು Care ಮಾಡ್ತಾ ಇಲ್ಲ. ಅದ್ರಿಂದ ನಾನು ಕೊಲೆ ಮಾಡೋ ಕಾರಣಾನೇ ಇಲ್ಲ. ಅವ್ರೇ ನೇಣು ಹಾಕಿಕೊಂಡು, ಪತ್ರ ಬರೆದಿಟ್ಟು ಸತ್ತಿದ್ದಾರೆ. ನೀವ್ಯಾರೂ ನನ್ಕಡೆ ಬೆರಳು ತೋರ್ಸ್ಸೋ ಹಾಗಿಲ್ಲ.

ರಮಾ : ಸುಳ್ಳು.

ರಾಮಸ್ವಾಮಿ: ಪತ್ರ ತೋರ್ಸಿದ ಮೇಲೆ ನಿಂಗೇ ಗೊತ್ತಾಗುತ್ತೆ.

ರಮಾ : ಸರಿ. ಏನಂತ ಬರೆದಿದ್ದಾರೆ.

ರಾಮಸ್ವಾಮಿ: [With Slight Hesitation] ನಂಗೆ ಬೇಕಾದೋರ್ಗೆಲ್ಲ ನಾನು ಬೇಡ್ವಾಗಿದ್ದೀನಿ, ರಾಮು ತನ್ನ ಶೋಕಿಗಳಿಗೋಸ್ಕರ ತನ್ನ ಸುಖಕ್ಕೋಸ್ಕರ, ತನ್ನ ಸಂತೋಷಕ್ಕೋಸ್ಕರ ನನ್ನ ವಿರುದ್ದ. ಕತ್ರಿ ಕಟ್ತಾ ಇದಾನಂತೆ. ನಾನು ಸತ್ರೆ ವಾಸಿ ಅಂತ ಮಾತಾಡ್ತಾನಂತೆ. ನನ್ನ ಮಾತಿಗೆ ಮೂರು ಕಾಸು ಬೆಲೇನೂ ಕೊಡ್ತಾ ಇಲ್ಲ. ಬೇಡಾಂದ ಕೆಲ್ಸಗಳೆಲ್ಲಾ ಮಾಡ್ತಾ ಇದ್ದಾನೆ. ಇದಕ್ಕೋಸ್ಕರ ನನ್ನ ಬದುಕೆಲ್ಲಾ ತ್ಯಜಿಸಿ ನಾನು ಸಾಯ್ತಾ ಇದ್ದೀನಿ. ಇವತ್ತು ನನ್ನ ಉಸ್ರಿನ ಜತೆ ಸಾವಿರ ಆಸೆ ಗೋರಿ ಆಗ್ತಾ ಇದೆ. ಈ ಉಸ್ರು ಹೋಗಿ ಸತ್ರೆ. ಅವಕ್ಕೆ ನನ್ನ ಬಿಟ್ಟು ಮಿಕ್ಕೋರು ಮುಖ್ಯ ವಾಗಿ ನಮ್ಮ ರಾಮು ಕಾರಣ ಅಂತ ಬರ್ದಿದ್ದಾರೆ.

ರಮಾ : ಮತ್ತೆ! ಅಂಥ ಆತ್ಮಹತ್ಯೆ ಕೊಲೆ ಅಲ್ದೆ ಇನ್ನೇನು?

ರಾಮಸ್ವಾಮಿ: ನಾನೇನು ಅವ್ರು ಅಂದ್ಕೊಂಡಷ್ಟು ಕೆಟ್ಟ ಕೆಲ್ಸ ಮಾಡಿಲ್ಲ. ಯಾರೋ ಅವ್ರಿಗೆ ಸುಳ್ಳು ಹೇಳಿದ್ದಾರೆ. ಅಕಸ್ಮಾತ ನಾನು ಮಾಡಿದೆ ಅಂತಿಟ್ಕೊ, ನನ್ನ ಬದುಕು ನಾನು ಬದುಕಿದ್ರೆ. ಅದು ಬೇರೆಯವರ ಕೊಲೆ ಆದ್ರೆ ನಾನೇನ್ಮಾಡ್ಲಿ ?

ರಮಾ : ನಿನ್ನ ಇಷ್ಟಗಳನ್ನೆಲ್ಲಾ ಬಿಟ್ಟು ಅಪ್ಪ ಹೇಳ್ದಾಗೆ ಕೇಳ್ಬೇಕಾಗಿತ್ತು.

ರಾಮಸ್ವಾಮಿ: ಆದ್ರೆ ಇದು ನನ್ನ ಬದುಕು.

ರಮಾ : ನಿನ್ನ ಬದುಕು ಬೇರೇವ್ರ ಮನಸ್ಸಿನ ಮೇಲೆ ಹೊರೆ ಆಗ್ಬಾರ್ದು.

ರಾಮಸ್ವಾಮಿ: ಬೇರೇವ್ರ ಮೇಲೆ ನನ್ನ ಬದುಕನ್ನ ಯಾವತ್ತೂ ಹೊರ್ಸಿಲ್ಲ ನಾನು.

ರಮಾ : ಕಂಡ ಕಂಡ ಹಲ್ಕಾ ಹೆಂಗಸರ ಜತೆ ತಿರುಗ್ತಿದ್ದೆ. ಅಪ್ಪನ ಮನಸ್ಸಿನ ಮೇಲೆ ಅಪ್ಪನ ಮರ್ಯಾದೆ ಮೇಲೆ ದೊಡ್ಡದೊಂದು ಬೆಟ್ಟ ಇಟ್ಟಿದೆ.

ರಾಮಸ್ವಾಮಿ: ಓಹೋ ತಾವು ಆದರ್ಶ ಸ್ತ್ರೀಯರು! ತಾವು ಕಮ್ಮೀನೋ ತಾವು ಆ ಮೋಹನನ ಜತೆ ಬಿದ್ದು ಓಡಾಡಿದ್ದು ?

ರಮಾ : ಮೋಹನ, ನಿನ್ನ ಲಲ್ತಾ ಥರ ಹಲ್ಕಾ ಹೆಂಗ್ಸಲ್ಲ.

ರಾಮಸ್ವಾಮಿ: ಹಲ್ಕಾ ಗಂಡ್ಸು. ನಿನ್ನಿಷ್ಟ ಬಂದದ್ದು ನೀನು ಮಾಡ್ದೆ. ನಂಗೆ ಬೇಕಾಗಿಲ್ಲ ಅದು, ನನ್ನ ಸುಮ್ಮಸುಮ್ನೆ ಆಡೋಕೆ ಬಂದೆಯಲ್ಲ ಅದಕ್ಕೆ ಕೇಳ್ದೆ.

ರಮಾ : ಆದ್ರೆ ನಿನ್ನ ಥರಾ ನಾನು ಯಾವತ್ತೂ ಜೂಜಾಡ್ಲಿಲ್ಲ. ಕುಡಿದು ಚರಂಡೀಲಿ ಬಿದ್ದು ಹೊರಳಾಡ್ಲಿಲ್ಲ. ನಾಟಕಾ, ಭಾಷಣಾಂತ ಮನೇವ್ರುನ ನೋಯಿಸ್ಲಿಲ್ಲ. ಮನೇ ಮಾನ ಹಾಳು ಮಾಡ್ಲಿಲ್ಲ.

ರಾಮಸ್ವಾಮಿ : ಹೂಂ ಆಮೇಲೆ ?

ರಮಾ : ಅಪ್ಪನ ಕೊಲೆ ಪಿತೂರಿ ನಡೆಸಿ ಕೊಲೆ ಮಾಡಿ ಪಾಪ ಕಟ್ಕೊಳ್ಳಿಲ್ಲ.

ರಾಮಸ್ವಾಮಿ : ಯಾರು ಹೇಳಿದ್ರು ತಮಗೆ ನಾನು ಕೊಲೆ ಮಾಡಿದೆ ಅಂತ ? ಕೊಲೆಗೆ ಪಿತೂರಿ ಮಾಡಿದೆ ಅಂತ,

ರಮಾ : ಇನ್ಯಾರೂ ಅಲ್ಲ. ತಮ್ಮ ಖಾಸಾ ಸ್ನೇಹಿತ್ರು ಮಿ. ಸೋಮಶೇಖರ.

ರಾಮಸ್ವಾಮಿ: ಆಹಾ, ನಾನು ನಿನ್ನ ನರೀ ಸುಳ್ಳುಗಳ್ನ ನಂಬ್ತೀನೀಂತ ತಿಳ್ಕೊಂಡ್ಯಾ ! ಇರ್ಲಿ ಯಾವಾಗ ಹೇಳ್ದ ಸೋಮು ನಿಂಗೆ ನಾನು ಕೊಲೆ ಪಿತೂರಿ ಮಾಡ್ದೆ, ಕೊಲೆ ಮಾಡ್ದೆ ಅಂತ.

ರಮಾ : ಮೂರು ತಿಂಗ್ಳ ಹಿಂದೇನೇ ಹೇಳಿದ್ರು. ನೀನು ಅಪ್ಪನ್ನ ಕೊಲ್ಲೋಕೆ ಮಾಡ್ಬೇಕೂಂತಿದ್ದ ಪಿತೂರೀನ. ನೀನು ಮಾಡೋ ಕೆಟ್ಟ ಕೆಲ್ಸ ಎಲ್ಲಾ ವಾರ ವಾರ ಬಂದು ಹೇಳಿ ಹೋಗ್ತಾ ಇದ್ರು ಅವರ ಫ್ರೆಂಡು ಡಾಕ್ಟ್ರು.

ರಾಮಸ್ವಾಮಿ: ಚೆನ್ನಾಗಿ ಕತೆ ಕಟ್ತೀಯ ಆಮೇಲೆ ?

ರಮಾ : ಕಥೇನಂತೆ. ಅವರಿಬ್ರೂ ನಿನ್ನ ಸರಿಯಾದ ದಾರೀಗೆ ತರೋಕೆ ನೋಡಿದ್ರು. ಆದ್ರೆ ನೀನೊಂದು ನಾಯಿಬಾಲ.

ರಾಮಸ್ವಾಮಿ: ಅಯ್ಯೋ ನಿನ್ನಂಥ ಹೆಂಗ್ಸಿನ ಮಾತು ನಂಬ್ತೀನಿ ಅಂದ್ಕೊಂಡ್ಯಾ ಇದೆಲ್ಲಾ ನಂಗೂ ಸೋಮುಗೂ ಮಧ್ಯೆ ತಂದು ಹಾಕೋಕೆ Plan. [ನಗುತ್ತಾನೆ]

ರಮಾ : ಅಬ್ಬಬ್ಬ ! ಮಾಡೋದೆಲ್ಲ ಮಾಡಿ ನಗ್ತೀಯಲ್ಲ – ಅಪ್ಪ ನಿನ್ನಿಂದಾಗಿ ಸತ್ತಿದ್ದಾರೆ. ನಿಂಗೆ ಒಂಚೂರು ಪಾಪ ಭಾವನೇನೇ ಇಲ್ವ.

ರಾಮಸ್ವಾಮಿ: ಬೆಳಿಗ್ಗೆ ಅಪ್ಪ ಸಾಯೋವರೆಗ್ಗೂ ನನ್ನ ಮನಸ್ನೆಲ್ಲಾ ಪಾಪ ತಿಂದಾಕ್ತಾ ಇತ್ತು. ಅಪ್ಪ ಸತ್ಮೇಲೆ ನಂಗೆ ಸತ್ಯ ಗೊತ್ತಾಗಿ ಹೋಗಿದೆ. ಒಂಚೂರು ಪಾಪ ಭಾವನೆ ನನ್ನ ಮನ್ಸಲಿಲ್ಲ. [ಮೌನ] ಆಶ್ಚರ್ಯಪಡ್ಬೇಡಿ ಹೀಗೇಳ್ತೀನೀಂತ. ನಮ್ಮಿಬ್ಬರ್ಗೂ ದೊಡ್ಡೋನೊಬ್ಬ ಅಣ್ಣ ಇದ್ದ. ಜ್ಞಾಪ್ಕ ಇದ್ಯಾ ನಿಂಗೆ? ಅವನು B.Sc. ಎಷ್ಟು ಸಾರಿ ಕಟ್ಟಿದ್ರೂ ಪಾಸಾಗಿರ್ಲಿಲ್ಲ. ಒಂದ್ಸಾರಿ ನಾನು ಅವ್ನು ಇಬ್ರೂ ಒಟ್ಟಿಗೆ ಕಟ್ಟಿದ್ವಿ.

ರಂಗಸ್ವಾಮಿ : ಹೆಹೆಹೆ. ಅಂದ್ರೆ ಅವ್ರು ಅಷ್ಟು ಸಾರಿ ಫೇಲಾಗಿದ್ರು ಹೆಹೆ. [ನಗು]

ರಾಮಸ್ವಾಮಿ: ನಗಬೇಡಿ ಸಾರ್! please ಜೋಕಲ್ಲ. ಇಬ್ರೂ ಒಟ್ಗೆ ಪರೀಕ್ಷೆಗೆ ಕಟ್ಟಿದ್ವಿ. ನಾನು First Class ಬಂದೆ. ಅವನು ತಿರುಗಾ ಫೇಲಾದ. ಎಲ್ಲಾ ನನ್ನ ಹೊಗಳಿದ್ರು. ಅವ್ನು ಸುಮ್ನೆ ಕೂತಿದ್ದ. ಅವತ್ತು ರಾತ್ರೀನೇ ಅವ್ನು ವಿಷಾ ಕುಡ್ದು ಪ್ರಾಣ ಬಿಟ್ಟ. ಅವನ ಮುಖ ನಗ್ತಾ ನಗ್ತಾ ಇತ್ತು. ನೀನೇ 'ನನ್ನ ಸಾಯ್ಸಿದೆ' ಅನ್ನೋ ಹಾಗಿತ್ತು ಅವನ ಮುಖ ಅವನ ನಗು. ಅವತ್ನಿಂದ ಅವನ ಹೆಣ ಅವನ ನಗು ನನ್ನ ಹಿಂಬಾಲಿಸ್ತಾನೇ ಇದೆ. ಒಬ್ನೇ ಹೋಗ್ತಾ ಇರ್ತೀನಿ. ಹಿಂದ್ನಿಂದ ಯಾರೋ ನಕ್ಕ ಹಾಗೆ ಆಗುತ್ತೆ. ಹಿಂದೆ ನೋಡಿದ್ರೆ ಅಣ್ಣನ ಹೆಣ ನಗ್ತಾ ಇರುತ್ತೆ. ನನ್ನ ಮನಸ್ಸಲ್ಲಿ ನಾನೇ ಕೊಲೆಗಾರ. ಅವತ್ನಿಂದ ಆ ಹೆಣ ಬದುಕೋಕೆ ಶುರು ಮಾಡ್ತು. ನಾನು ಸಾಯೋಕೆ ಶುರು ಮಾಡ್ದೆ. [ಮೌನ]

ರಾಮಸ್ವಾಮಿ: ನನಗ್ಗೊತ್ತಿತ್ತು. ನಾನು ಕಾರಣ ಅಲ್ಲ ಅಂತ. ಆದ್ರೂ ನನ್ನ ಮನಸ್ನಲ್ಲಿ ಪಾಪ ಭಾವ. ನಾನು ಹುಟ್ಟಿದ್ದೇ ಪಾಪ. ಬದುಕಿರೋದೆ ಪಶ್ಚಾತ್ತಾಪ ಅನ್ನಿಸಿತ್ತು. ಆದ್ರೆ ಇವತ್ತು ಬೆಳಿಗ್ಗೆ ನನ್ನ ಬದುಕು ಸಹಿಸಲಾರ್ದೆ ಅಪ್ಪ ಸತ್ತಾಗ ನಂಗೆ ಗೊತ್ತಾಗೋಯ್ತು. ಒಬ್ಬರ ಬದುಕೇ ಇನ್ನೊಬ್ಬರ ಸಾವು ಅಂತ. ನಂಗೊತ್ತು ಹುಟ್ಟಿದ್ದು ತಪ್ಪು ಬದುಕಿರೋದು ಪಾಪ.

ರಮಾ : ಅದಕ್ಕೆ ಪಶ್ಚಾತ್ತಾಪ ಗೊತ್ತಿಲ್ಲ.

ರಾಮಸ್ವಾಮಿ: ಸಾಯೋದು! ಆದ್ರೆ ನಂಗೆ ಪಶ್ಚಾತ್ತಾಪದಲ್ಲಿ ನಂಬ್ಕೆ ಇಲ್ಲ. ನಂಗೆ ಬೇಕಾಗಿಲ್ಲ. ನೀವು ಯಾರು ಎಷ್ಟು ಹೇಳಿದ್ರೂ ಅಷ್ಟೆ. ನನ್ನ ಬದುಕು. ನಾನು ಬದುಕೇ ಬದುಕ್ತೀನಿ.

ರಂಗಸ್ವಾಮಿ : ಈಗ ಗಲ್ಲುಗಂಬ ತಪ್ಪಿಸ್ಕೊಂಡ್ರೆ ತಾನೇ ಮುಂದೆ ಬದುಕೋ ಮಾತು.

ರಾಮಸ್ವಾಮಿ: ರೀ ಕೇಳ್ರೀ ಇನ್ಸ್‌ಪೆಕ್ಟರೇ ಒಬ್ಬರ ಸ್ವಂತ ಬದುಕನ್ನೆ, ಇನ್ನೊಬ್ರು ಸಾವಿನ ಆಪಾದನೆಗೆ ಗುರಿ ಮಾಡೋ ಸಮಾಜ ನಂಗೆ ಸಾಕಾಗಿ ಹೋಗಿದೆ. ಇನ್ನು ಸ್ವಲ್ಪ ಹೊತ್ಗೆ ನನ್ನ ಸೋಮು ಬಂದು ಪತ್ರ ತಂದ್ಕೊಟ್ಟು ನಾನು ಕೊಲೆ ಮಾಡ್ಲಿಲ್ಲ ಅಂತ ಹೇಳ್ತಾನೆ. ಆಮೇಲೆ ನನ್ನ ನೀವ್ಯಾರೂ ಮಾತಾಡ್ಸೋ ಹಾಗಿರಲ್ಲ. ನಿಮ್ಮ ಯಾರ ಹಂಗೂ ನಂಗೆ ಬೇಕಾಗಿಲ್ಲ. ನಾನೊಬ್ನೆ ನನ್ನಿಷ್ಟ ಬಂದ್ಹಾಗೆ ಇರ್ತೀನಿ.

ರಮಾ : ನೀನು ಕೊಂದಿರೊ ಪಾಪಾನ ಹೊಟ್ಟೇಲಿಟ್ಕೊಂಡು, ನಿನ್ನ ರಕ್ಷಿಸ್ತಾರೆ ಅಂತ ತಿಳ್ಕೊಂಡಿದ್ದೀಯಾ! ನಿಂಗೊಂದು ಭ್ರಮೆ! ಈಗ ಸ್ವಲ್ಪ ಹೊತ್ತಿಗೆ ಮುಂಚೆ ತಾನೇ ಸೋಮು ನಂಗೆ, ಅಮ್ಮಂಗೂ ಹೇಳಿದ್ದಾರೆ. "ನಾವು ಎಷ್ಟೇ ಬೇಡಾಂದ್ರೂ ಕೇಳ್ದೆ ರಾಮಸ್ವಾಮಿ ಭಗವಂತರಾಯ್ರು ಕತ್ತು ಹಿಸುಕಿ ಸಾಯ್ಸಿಬಿಟ್ರು ಅಂತ.

ರಾಮಸ್ವಾಮಿ: ಇದೆಲ್ಲಾ ನಾನು ನಂಬ್ತೀನಿ ಅಂದ್ಕೊಂಡಿದ್ದೀಯಾ?

ರಮಾ : ನಂಬ್ದೆ ಇದ್ರೆ ಬಿಡು, ಅಲ್ಲೆ ನಿನ್ನ ಖಾಸಾ ಪ್ರಿಯತಮೆ ಇದ್ದಾಳಲ್ಲ ಆ ಲಲಿತಾ ಅವಳ್ನ ಕೇಳು ಸೋಮು ಹೇಳಿದ್ರೋ ಇಲ್ವೋ. ಬಂದು ಪೋಲೀಸ್ನೋರ್ಗೆ ವಿಷಯ ತಿಳಿಸ್ತೀನಿ ಅಂತಂದ್ರು.

ರಾಮಸ್ವಾಮಿ: ಇದೆಲ್ಲಾ ಸುಳ್ಳು ನಂಬಬೇಡಿ ಇನ್ಸ್‌ಪೆಕ್ಟರ. ನನ್ನ ನೀವು Arrest ಮಾಡ್ಬಿಡ್ಲಿ ಅಂತ ಅವಳು ಹೀಗೆ ಸುಳ್ಹೇಳ್ತಾ ಇದ್ದಾಳೆ. ಸೋಮು ಚಿನ್ನದಂಥಾ ಹುಡುಗ. ಅವನ ಮೇಲೆ ವೃಥಾ ಅಪವಾದ ಹಾಕ್ತಾ ಇದ್ದಾಳೆ.

ರಮಾ : ನಂಗೂ ಅವರ್ಗೆ ಮದ್ವೆ ಗೊತ್ತಾಗಿದೆ. ನಾನ್ಯಾಕೆ ಅವರ ಮೇಲೆ ಅಪವಾದ ಹಾಕ್ಲಿ.

ರಂಗಸ್ವಾಮಿ : Is it ! Congratulations.

ರಂಗಸ್ವಾಮಿ : ಇದ್ರಲ್ಲಿ congratulate ಮಾಡೋಂಥಾದ್ದು ಏನೂ ಇಲ್ಲ; ಅವ್ರು ಒಳ್ಳೆ ಗುಣಕ್ಕೋಸ್ಕರ ನಾನು ಅವ್ರನ್ನ ಮದ್ವೆ ಆಗ್ತಾ ಇದೀನಿ. ಇವನ್ನ ಒಳ್ಳೇ ದಾರಿಗೆ ತರೋಕೆ ನೋಡಿದ್ರು. ಇವ್ರೊಬ್ಬ ನಾಯಿ ಬಾಲ. ಪಾಪ Sincere ಆಗಿ ಇನ್ನೊಬ್ರು ಒಳ್ಳೇದನ್ನ ಬಯಸ್ತಾರಲ್ಲ ಅಂತ ನಾನು ಅವರನ್ನ ಮೆಚ್ಚಿದ್ದೀನಿ, ಅಪ್ಪ ಇದ್ದಿದ್ರೆ ಅವ್ರು ಸಂತೋಷ ಪಡೋರು.

ರಾಮಸ್ವಾಮಿ : ಹೂಂ ! ನಿನ್ನಂಥ ಹೊಟ್ಟೆಕಿಚ್ಚಿನ ಮೊಟ್ಟೇನ ಅವ್ನು ಯಾಕೆ ಮದ್ವೆ ಆಗ್ತಾನೆ. ಇದೆಲ್ಲಾ ನಿಮ್ಮ ಟೋಪಿ ಹಾಕೋಕೆ ಮಾಡ್ತಾ ಇರೋ ಪ್ರಯತ್ನ ಇನ್ಸಪೆಕ್ಟರೇ ನಂಬೇಡಿ.

ರಂಗಸ್ವಾಮಿ : ಅದ್ಸರಿ ಮಿ. ರಾಮಸ್ವಾಮಿ ಎಲ್ಲರೂ ನೀವೇ ಖೂನಿ ಮಾಡಿದ್ದೀರ ಅಂತಾನೇ ಹೇಳ್ಬೇಕೂಂದ್ರೆ ಒಬ್ರಲ್ಲ. ಇಬ್ರಲ್ಲ.

ರಾಮಸ್ವಾಮಿ : ಈಗ ನೋಡಿ. ಹೇಗಿದ್ರೂ ಮೂರು ಗಂಟೆ ಆಗ್ತಾ ಬಂತು. ಇನ್ನು ಸೋಮುನೇ ಬರ್ತಾನೆ. Post mortem report ಬರುತ್ತೆ ? ಆತ್ಮಹತ್ಯೆ ಪತ್ರ ಬರುತ್ತೆ. ಅವರಿಬ್ರೂ ಸಾಕ್ಷ್ಯ ಹೇಳ್ತಾರೆ ಇನ್ನೇನು ಬೇಕು ?

ರಂಗಸ್ವಾಮಿ : ಅಷ್ಟಾದ್ರೆ ನಿಮ್ಮನ್ನ ಬಚಾವ ಮಾಡ್ಬಿಡ್ತೀನಿ.

ರಾಮಸ್ವಾಮಿ : ಮೂರು ಗಂಟೆಗೆ ವಾಲಗಾನೂ ತಗೊಂಡು ಲಲ್ತಾನೂ ಕರ್ಕೊಂಡು ಬರ್ತಿನಿಂತ ಹೇಳಿದ್ದಾನೆ. ಆಗೋ, ಆಗೋ, ಕೇಳಿ ಕೇಳಿ ದೂರದಿಂದ ವಾಲಗದ ಸದ್ದು ಕೇಳಿಸ್ತಾ ಇದೆ.

ರಂಗಸ್ವಾಮಿ : [ಎದ್ದು ಕಿವಿಗೊಡುತ್ತಾ] ಅರೆ ಹೌದು ವಾಲಗದ ಸದ್ದೇ ಇರೋ ಹಾಗಿದೆ.

ರಾಮಸ್ವಾಮಿ : ನನ್ನನ್ನ ನೀವ್ಯಾರೂ ನಂಬರ್ಲಿಲ್ಲ ಅಲ್ವ ?

ರಮಾ : [ಕಿವಿಗೊಡುತ್ತಾ] ಅಯ್ಯೋ. ಅದು ವಾಲಗದ ಸದ್ದಲ್ಲ. ತಮಟೆ ಸದ್ದು [Phone ಟ್ರಿಣ] ರಾಮಸ್ವಾಮಿ Goes to the phone.

ರಾಮಸ್ವಾಮಿ : ಹಲೋ ಯಾಕಿಷ್ಟೊತ್ತು, ಸೋಮು? ಇಲ್ಲೆಲ್ಲಾ ಗಲಾಟೆ ಎದ್ಬಿಟ್ಟಿದೆ. ಹೂ, ಅಲ್ಲ Suicide ಅಲ್ಲ Murder ಇದು ನಾನೇ ಕೊಲೆ ಮಾಡ್ಬಿಟ್ಟಿದ್ದೀನಿಂತ ಎಷ್ಟು ಹೇಳಿದ್ರೂ ನಂಬ್ತಾ ಇಲ್ಲ, ಹೂಂ ಜಾನಕೀರಾಮ Post mortem ಮಾಡ್ತಾ ಇದ್ದಾರೆ, ನೀನೂ ಬೇಗ ಆತ್ಮಹತ್ಯೆ ಕಾಗ್ದ ತಗೊಂಡು ಬಂದ್ಬಿಡು. ನಂಗೊಳ್ಳೇ torture ಆಗ್ಬಿಟ್ಟಿದೆ ಇಲ್ಲಿ ಇಲ್ಲ ನನ್ಹಂಗಿ ನೀನೇ ಹೇಳ್ದೆ ನಾನು ಕೊಲೆ ಮಾಡಿದ್ದಿನಿ ಅಂತ ಎಲ್ಲಾರ್ಗೂ ನಂಬ್ಸೋಕೆ ಪ್ರಯತ್ನಿಸ್ತಾ ಇದ್ದಾಳೆ right ನಾನ್ಯಾಕೆ ನಂಬ್ಲಿ, ಆದ್ರೆ ಇನ್ಸಪೆಕ್ಟರು ನಂಬಿರೋ ಹಂಗ ಕಾಣ್ಸುತ್ತೆ, ಬೇಗ ಬಂದ್ಬಿಡು ಮದ್ವೆ ಇವತ್ತು cancel ಮಾಡ್ಸಿ ಬಿಟ್ಟಿದೀಯಾ ? ಹೋಗ್ಲಿ ಬಿಡು ನಂಗೂ ಈ ಗಲಾಟೇಲಿ ಬೇಕಾಗಿರ್ಲಿಲ್ಲ ಮತ್ತೆ, ವಾಲಗ ಬರ್ತಾ ಇದೆ, ಹೂ ವಾಪಸ್ಸು ಕಳ್ಸಿ ಬಿಡ್ತೀನಿ. ಇನ್ಸ ಪೆಕ್ಟರಿಗೆ ಫೋನಲ್ಲೇ ಹೇಳ್ಬಿಡು. Advance ಆಗಿ right [gives the receiver to ರಂಗಸ್ವಾಮಿ]

ರಂಗಸ್ವಾಮಿ : ಹಲೋ ಯಾರೂ ಸೋಮಶೇಖರ್ರಾ ? ಏನ್ಸಾರ [Doc. comes in]

ಮಿ. ಸೋಮೂ ಒಂದ್ನಿಮಿಷ Hold the line please ಏನ್ಸಾರ ಏನನ್ನುತ್ತೆ ರಿಪೋರ್ಟ ?

ಡಾಕ್ಟರ : ಶವ ಪರೀಕ್ಷೆ ಪ್ರಕಾರ ಇದು Suicide ಅಲ್ಲ Murder ಆದಂತೆ ಅನ್ಸುತ್ತೆ. Forced throtling ನಿಂದ ಸತ್ತಿದ್ದಾರೆ.

ರಾಮಸ್ವಾಮಿ : ಮಿ. ಜಾನಕೀರಾಂ ಸುಮ್ಮ ಸುಮ್ಮನೆ ಸುಳ್ಳು ಹೇಳ್ಬೇಡಿ.

ಡಾಕ್ಟರ್ : ನಿಮಗೆ ಯಾರು ಹೇಳಿದ್ರು. ನಿಮ್ಮಷ್ಟಕ್ಕೆ ನೀವು ಇರ್ರಿ Hello miss ರಮಾ. I so sorry ನಿಮ್ಮ ಬ್ರದರ ಹೀಗೆ fatherಗೆ ನಾನು ಸೋಮು ಹೇಳಿದ್ವಿ ಆದ್ರೆ ಅವ್ರು ಕೇಳಿಲ್ಲ.

ರಾಮಸ್ವಾಮಿ : ಸುಮ್ನೆ ಸುಮ್ನೆ ಬಾಯಿಗೆ ಬಂದ್ಹಾಗೆ ಮಾತಾಡಬೇಡಿ.

ರಮಾ : ನೋಡಿ ಡಾಕ್ಟ್ರೆ. ಕೇಳಿಸ್ತಾ ಇರೋದು ವಾಲಗದ ಸದ್ದಂತೆ.

ಡಾಕ್ಟರ : [ಕಿವಿಗೊಟ್ಟು] ಅಲ್ಲ, ಇದು ಹೆಣದ ಮುಂದೆ, ಬಲಿ ಆದ ಹೆಣವೆ ಮುಂದೆ ತಗೊಂಡು ಹೋಗೋ ತಮಟೆ ಸದ್ದು.

ರಂಗಸ್ವಾಮಿ : ಒಂದ್ನಿಮಿಷ ಯಾರು ಮಾತಾಡಬೇಡಿ. please phone ಹಲೋ sorry ಅಂ ಹೌದ is it true ಮತ್ತೆ ನೀವೇ ಇದ್ರಿ. ಅದು ಆತ್ಮಹತ್ಯೆ ಪತ್ರ ಅಂತ ಹೇಳಿದ್ರು ಎಲ್ಲಾ ಸುಳ್ಳು ಆತ್ಮಹತ್ಯೆ ಪತ್ರ ಇಲ್ವ ನನಗೆ ಬೆಳಿಗ್ಗೆಯಿಂದ ಅನುಮಾನಾನೇ ಇತ್ತು. ಭಗವಂತರಾಯ್ರು ಆತ್ಮಹತ್ಯೆ ಮಾಡ್ಕೊಳ್ಳೋಂಥ ವ್ಯಕ್ತಿ ಅಲ್ಲ. ಕೇಳಿ ಮಿ. ರಾಮಸ್ವಾಮಿ.

ರಾಮಸ್ವಾಮಿ : Excited ಇಲ್ಲಾ ನೀವು ಸುಳ್ಳು ಹೇಳ್ತಾ ಇದ್ದೀರ. ಸೋಮು ಹಾಗೆ ಹೇಳ್ತಾ ಇಲ್ಲ ನೀವು ನಾಟ್ಕಾ ಆಡ್ತಾ ಇದ್ದೀರ.

ರಂಗಸ್ವಾಮಿ : ನೀವೇ ಕೇಳಿ ಬೇಕಾದ್ರೆ phoneಗೇ ಮಿ. ಸೋಮ ಶೇಖರ ಅದೇನೋ ಸ್ವಲ್ಪ ಜೋರಾಗಿ ಹೇಳಿ. ಕೇಳಿಸ್ತಾ ಇಲ್ಲ Line ಕೆಟ್ಹೋಗಿದೇಂತ ಕಾಣುತ್ತೆ. [Holds the Receiver at a distance ಸ್ಪಷ್ಟವಾಗಿ ಕೇಳಿಸುತ್ತದೆ.] ಏನಿಲ್ಲ. Actual things ನಿನ್ನೆ ರಾಮಸ್ವಾಮಿ ಅವರ

ತಂದೆ ಭಗವಂತರಾಯರ ಗಂಟ್ಲು ಹಿಸುಕಿ ಕೊಂದು ಹಾಕ್ಬಿಟ್ಟ. ನಾವು ಎಷ್ಟು ಬೇಡಾಂದ್ರೂ ಕೇಳಿಲ್ಲ. In the intrest of Justice ಇದನ್ನೆಲ್ಲಾ ಹೇಳ್ತಾ ಇದೀನಿ. ನಾನು ಹೇಳ್ದೀಂತ ರಾಮಸ್ವಾಮಿಗೆ ಹೇಳ್ಬೇಡಿ. ನಿನ್ನೆ ರಾತ್ರೀನೆ ಭಗವಂತರಾಯರಿಗೆ ಈ ಥರಾ ಆಗುತ್ತೆ ಹುಷಾರಾಗಿರಿ ಅಂತ ಹೇಳ್ದೆ. ಕೊಲೆ ಆದ ತಕ್ಷಣ News paper ನ್ಯೂಸ ಕೊಟ್ಟೆ. ರಾಮಸ್ವಾಮಿ ಇವೊತ್ತು ಮದುವೆಯಾಗಿ, ಹೆಣ್ಣೂ ಬಚ್ಚಿಟ್ಟುಬಿಟ್ಟು ಕಾನೂನಿನ ಕಣ್ಣು ತಪ್ಪಿಸಿ ಬಿಡೋಣಾಂತ ಇದ್ದ ನಾನು ಪೋಲೀಸ ಸುಪರಿಂಟೆಂಡೆಂಟಿಗೆ ಪೋನ ಮಾಡಿ ಲಿಲ್ಟಾಗೆ ಹೇಳಿ ಮದ್ವೆ ತಪ್ಪಿಸ್ದೆ. ನಾನು ಬಂದು ವಿವರ secret ಆಗಿ ಹೇಳ್ತೀನೀ ತಕ್ಷಣ arrest ಮಾಡಿ ಅವನ್ನ, ಆತ್ಮಹತ್ಯೆ ಅಂತ ಹೇಳ್ತಾನೆ ನಂಬೇಡಿ.

ರಾಮಸ್ವಾಮಿ : [ಜೋರಾಗಿ] ಸುಳ್ಳು ಸೂಳ್ಳು, ಸುಳ್ಳು. ಸತ್ಯವಾಗ್ಲೂ ನಾನು ಕೊಲ್ಲಿಲ್ಲ. ನನ್ನ ಬದಕು ನಾನು ಬದುಕ್ದೆ ಅಷ್ಟೇ. ಎಲ್ಲಾ ನಂಗೆ ಅನ್ಯಾಯ ಮಾಡ್ತಿದೀರ ನಾನು ನಿರಪರಾಧಿ ನನ್ನ ಇಷ್ಟದ ಬದಕೇ ನನಗೆ ಸಾವಾಗ್ತಾ ಇದೆ.

ರಮಾ : ಬಿಡ್ಬೇಡಿ ಅವನ್ನ. ಮನೆ ಮರ್ಯಾದೆ ಹಾಳು ಮಾಡ್ದ.

ಡಾಕ್ಟರ : ಮನೇವ್ರಿಗೆಲ್ಲಾ ಇರಲಾರದ ಸಂಕಟ ಕೊಟ್ಟ.

ರಮಾ : ತಂದೇನ ಕೊಂದ, ಕುಡಿದಾ, ಜೂಜಾಡಿದ, ತನ್ನ ಮನಸ್ಸಿಗೆ ಬಂದ ಕೆಲ್ಸ ಎಲ್ಲಾ ಮಾಡ್ದ.

ಡಾಕ್ಟರ : ನಾಟಕಾ ಮಾಡಿ ಎಲ್ಲಾಗರ್ೂ ಅನ್ಯಾಯ ಮಾಡ್ದ. ತನಿಷ್ಟ ಬಂದದ್ದು ಮಾಡ್ದ.

[ಆಚೆನಿಂದ ಭಗವಂತರಾಯರ ಇಬ್ಬರು ಸ್ನೇಹಿತರು ಬರುವರು]

1ನೇ ವ್ಯಕ್ತಿ : ಬಿಡ್ಬೇಡಿ ಅವನ್ನ ಗಲ್ಲಿಗೆ ಹಾಕಿ. ಯಾರ ಮಾತೂ ಕೇಳ್ಳೇ ಇಲ್ಲ ಅವ್ನು.

2ನೇ ವ್ಯಕ್ತಿ : ತನ್ನಿಷ್ಟ ಬಂದ ಹಾಗೆ ಬದುಕಬೌದು ಅಂದ್ಕೊಂಡಿದ್ದಾನೆ.

[ಇಬ್ಬರು ಪೋಲೀಸಿನವರು ಬಾಗಿಲಿಗೆ ಕಟ್ಟಿದ ತೋರಣ ಬಿಚ್ಚಿ ಅದೇ ಹಗ್ಗದಲ್ಲಿ ರಾಮ ಸ್ವಾಮಿಯ ಕೈಗಳನ್ನು ಕಟ್ಟುವರು. ಬಲಿ ಯಾದ ಹೆಣದ ಮುಂದೆ ಹೊಡೆಯುವಂಥ ತಮಟೆ ಸದ್ದು ಹತ್ತಿರ ಹತ್ತಿರ ಬಂದು. ಜೋರು ಜೋರು ಆಗುತ್ತಿರುವಂತ ಕತ್ತಲು]

ಪಾತ್ರಗಳು :

ದೇವರು : ಹುಚ್ಚಾಪುರದ ದೊರೆ

ಕಾರಭಾರಿಗಳು

ಕಾರಕೂನರು

ಡಾಕ್ಟರು

ಆಳುಗಳು

ಡಂಗುರದವ

[ಅರಮನೆಯ ಒಂದು ದಿವಾಣಖಾನೆಯು. ದೊರೆಗಳು ಮಂಚದ ಮೇಲೆ ಅಡ್ಡಾಗಿದ್ದಾರೆ. ಕಾರಭಾರಿಗಳು ಸರಕಾರದ ಡಾಕ್ಟರರೊಡನೆ ಬರುವರು. ಕಾರಕೂನರು ಅವರನ್ನು ಹಿಂಬಾಲಿಸಿಕೊಂಡು ಬರುವರು. ದೊರೆಗಳಿಗೆ ನಮಸ್ಕರಿಸಿ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತುಕೊಳ್ಳುವ ಹೊತ್ತಿಗೆ ದೊರೆಗಳು ಎದ್ದು ಕೂಡುವರು]

ದೇವರು (ದೊರೆಗಳು) : [ಕುಳಿತಲ್ಲಿಂದ ಮುಖ ಹೊರಳಿಸಿ] ಕಾರಭಾರಿಗಳೇ!

ಕಾರಭಾರಿ : [ಆಸನದಿಂದ ಮೇಲಕ್ಕೆದ್ದು] ದೇವರು.

ದೊರೆ : ಜಾತ್ರೆಯಾಗಲೇಬೇಕು.

ಕಾರಭಾರಿ ; [ತಲೆ ಬಗ್ಗಿಸಿ ವಿನಯದಿಂದ] ಹಾಗೆ ಆಗಲಿ ದೇವರು.

ದೊರೆ : ಡಾಕ್ಟರೇ, ಊರಲ್ಲಿ ಪ್ಲೇಗೂ-ದೀಗೂ ಏನೂ ಇಲ್ಲ, ಹೌದಷ್ಟೇ ?

ಡಾಕ್ಟರು : ದೇವರು ಏನು ಹೇಳಲಿ, ನಿನ್ನೆ ಮೊನ್ನೆ ನಾಲ್ಕು ಜನರು ಗಂಟು ಎದ್ದು ಸತ್ತರು.

ದೊರೆ : ಔಷಧ ಯಾರು ಕೊಟ್ಟರು ?

ಡಾಕ್ಟರು : ನಾನು ದೇವರು.

ದೊರೆ : ಹಾಗಾದರೆ ಅವರು ಸತ್ತದ್ದು ಗಂಟಿನಿಂದಲ್ಲ. ಊರಲ್ಲಿಲ್ಲ ಪ್ಲೇಗು; ಅವರೇನು ಗಂಟು ಕಟ್ಟಿಕೊಂಡು ಬಂದಿದ್ದರೇ ? ಅಂತೂ ಊರೊಳಗೆ ಪ್ಲೇಗಿಲ್ಲ. ಹೌದೇ ?

ಡಾಕ್ಟರು : ಮನೆಮನೆಗಳಲ್ಲಿ ಬೀಳುತ್ತಿರುವ ಇಲಿಗಳು ಪ್ಲೇಗಿನವು ನಿಜ, ದೇವರು.

ದೊರೆ : ಇಲಿಗಳ ವಿಷಯ ನೀವು ಹೇಳಬೇಡಿರಿ. ಮುಂಬಯಿಂದ ಸರಕಾರೀ ಉತ್ತರ ಬರಲಿ. ಸರಕಾರ ಹೇಳಿದ್ದು ಸತ್ಯ. ಕಾರಭಾರಿಗಳೇ, ಡಂಗುರ ಸಾರಲು ಹೇಳಿರಿ.

[ಕಾರಭಾರಿಗಳು ಕಾರಕೂನರಿಗೆ ಸನ್ನೆ ಮಾಡುವರು. ಕಾರಕೂನರು ಒಳಗೆ ಸನ್ನೆ ಮಾಡುವರು. ಕೂಡಲೇ ಡಂಗುರದವನು ಸಾರುವದು ಕೇಳಬರುವದು. ಕೇಳ್ರಿಪ್ಪೋ ಕೇಳಿ ಸರಕಾರದ ಡಂಗುರ. ಊರಾಗ ಪ್ಲೇಗಿಲ್ಲ. ಯಾರೂ ಊರು ಬಿಡಾಕಾಗದೂ ಜಾತ್ರಿ ಆಗೆ ಆಕ್ಕೈತ್ರಿಪ್ಪೋ. ಆಗೇ ಆಗ್ತೈತಿ ಹಲಗೆಯ ಸಪ್ಪಳ]

ಊರಲ್ಲಿ ಪ್ಲೇಗಿಲ್ಲ. ಯಾರೂ ಊರು ಬಿಡಬಾರದು. ಜಾತ್ರೆ ಬಹಳ ವಿಜೃಂಭಣೆಯಿಂದ ಜರಗುವದು. ಪರ ಊರಿಂದ ಜನರು ಬರಬೇಕು ಎಂದು ವರ್ತಮಾನ ಪತ್ರಿಕೆಗಳಲ್ಲಿ ಪ್ರಸಿದ್ಧಪಡಿಸಿರಿ. ಜನರು ಬರಲು ಅಡ್ಡೀ ಇಲ್ಲವೆಂದು ಇಲ್ಲಿಯ ಸರಕಾರೀ ಡಾಕ್ಟರರ ಅಭಿಪ್ರಾಯವಿದೆಯೆಂದೂ ಬರೆದು ಬಿಡಿರಿ.

ಡಾಕ್ಟರು : ನಾನು ಹಾಗೆ ಹೇಳಲಿಲ್ಲ ದೇವರು.

ದೊರೆ : ಹಾಗೆ ಹೇಳಿದ್ದು ನಾನು. ನೀವಲ್ಲ ನನಗೆ ಗೊತ್ತು. ನಿಮಗೆ ಬುದ್ಧಿಯಿದ್ದರೆ ನನ್ನಂತೆಯೇ ಹೇಳುತ್ತಿದ್ದಿರಿ : ಜಾತ್ರೆಯಾಗದಿದ್ದರೆ ಸಾವಿರಗಟ್ಟಲೆ ರೂಪಾಯಿ ಬರುವುದಿಲ್ಲ. ಪೂಜೆ ಇಲ್ಲದೆ ದೇವರು ಸಾಯಬೇಕು. ಸಂಬಳ ಸಿಗದೆ ದುಡಿಯುವರು ಸಾಯಬೇಕು. ನಿಮ್ಮಂತೇ ಆಗಲಿ ಡಾಕ್ಟರೇ, ಪ್ಲೇಗು ಇದೆ ಎನ್ನೋಣ. ಎಷ್ಟು ಜನರು ಸಾಯಬಹುದು? ಪ್ಲೇಗು ಇರದಿದ್ದರೂ ಕೆಲವು ಜನರು ಸತ್ತೇ ಸಾಯುತ್ತಿದ್ದಾರೆ; ಆಮೇಲೆ ಕೆಲವು ಮುದುಕರು ಸಾಯುದರೆನ್ನೋಣ;

ಮುದುಕರು ಸತ್ತರೆ ಕಸ ಹೋದಂತೆ: ಅಮೇಲೆ ಕೆಲವು ಹೆಂಗಸರು ಸಾಯುಬಹುದು. ಅವರು ಇದ್ದು ಗಳಿಸುವದು ಅಷ್ಟರಲ್ಲೇ ಇದೆ. ಕೂಳು ದಂಡ. ಇನ್ನು ಕೆಲವು ಹುಡುಗರು ಸಾಯುಬಹುದು. ಹುಡುಗರು ಸತ್ತರೂ ತೊಟ್ಟಿಲಗಳೇನೂ ತೆರವು ಬೀಳುವುದಿಲ್ಲ. ಹಿಂದೂಸ್ಥಾನದ ಖಾನೇಸುಮಾರೀ ಕೇಳಿದ್ದೀರೋ ಇಲ್ಲವೋ, ಹತ್ತು ವರ್ಷಗಳಲ್ಲಿ 33 ಕೋಟಿ, 43 ಕೋಟಿಯಾಗಿದೆ.

ಡಾಕ್ಟರು : ಬಡಬಗ್ಗರ ಗತಿಯೇನು ದೇವರು ?

ದೊರೆ : ಬದುಕುವದೇ ಕಷ್ಟವಾದಾಗ ಸಾಯುವುದೇ ಸುಖ ಅವರಿಗೆ. ಸತ್ತರೆ ಚಿಂತೆ ಹರಿಯಿತು.

ಡಾಕ್ಟರು : ಅದಿರಲಿ ದೇವರು, ದುಡ್ಡುಳ್ಳವರು ಯಾರಾದರೂ...

ದೊರೆ : ಅವರಿಗೆ ಯಾರು ಸತ್ತರೇನು ? ದುಡ್ಡು ಇರುವದಲ್ಲ. ಅವರು ಕಳ್ಳರು ಕಾಕರಿಗೆ ಹೆದರಬೇಕು. ರೋಗದ ಹೆದರಿಕೆಯೇ ಅವರಿಗೆ. ಹಿರಿಯರು ಸತ್ತರೆ ಮಕ್ಕಳಿಗೆ ಪಟ್ಟ ಬರುವುದು; ಮಕ್ಕಳು ಸತ್ತರೆ ಪಾಲಾಗುವುದುಳಿಯಿತು.

ಡಾಕ್ಟರು : ದೇವರು, ಬಹಳ ಕಲ್ಲೆದೆ ಮಾಡಿದ್ದೀರಿ.

ದೊರೆ : ಡಾಕ್ಟರೇ ಧರ್ಮ : ಧರ್ಮ ಡಾಕ್ಟರೆ ಧರ್ಮ ನಿಲ್ಲಬಾರದು. ದೇವರ ಪೂಜೆ ಉತ್ಸವ ಸಾಗಬೇಕು. ಅಷ್ಟೊ ಮಾರಿ ಕೆಲವು ಬೇಕಾದ ಜೀವ ಸಾಯುವವೆನ್ನಿರಿ. ಅದನ್ನು ಸಹಿಸಲಿಕ್ಕಬೇಕು. ಜಾತ್ರೆ ನಿಂತರೇ ಸಂಸ್ಥಾನದ ನಾಡಿಯೇ ನಿಂತಂತೆ. ಯಜಮಾನರ ಸಂಬಳ ನಿಂತರೆ. ಮನೆಯವರು ತಿನ್ನುವದೇನು ? ಈಗಲಾದರೂ ತಿಳಿಯಿತೇ ? ಪ್ಲೇಗು ಇಲ್ಲ–ಹೌದೇ ಡಾಕ್ಟರೇ ?

[ಕಾರಕೂನನು ಕಾರಭಾರಿಗಳ ಕೈಯಲ್ಲಿ ತಂತಿ ಕೊಡುವನು]

ಕಾರಭಾರಿ : ಮುಂಬಯಿಯ ತಂತಿ ಬಂದಿದೆ ದೇವರು.

ಡಾಕ್ಟರು : ಹೊತ್ತಿಗೆ ಬಂದಿತು.

ದೊರೆ : ಸರಕಾರದ ವೈದ್ಯಶಾಖೆಯವರೇನೆನ್ನುತ್ತಾರೆ ?

ಕಾರಭಾರಿ : (ಗಾಭರಿಯಿಂದ)

'Rats plague infected'- ಇಲಿಗಳು ಗಂಟುಬೇನೆಯವಂತೆ ದೇವರು.

ದೊರೆ : [ಸಿಟ್ಟಿನಿಂದ]

ಹರಿದು ಹಾಕಿರಿ ಆ ಕಾಗದವನ್ನು.

[ಕಾರಭಾರಿಗಳು ಚಟ್ಟನೆ ಹಾಗೆ ಮಾಡುವರು]

ಇಲ್ಲಿಯ ಇಲಿಯದು ದಿಲ್ಲಿಗೇನು ತಿಳಿಯುವದು ? ಕಾರಭಾರಿಗಳೇ ಊರ ಹೊರಗಿನ ಒಡ್ಡರು ಇರುವರೋ, ಸತ್ತರೋ ? ಅವರು ದಿನಾಲು ಇಲಿಗಳನ್ನೇ ತಿನ್ನುವರಲ್ಲವೇ ? ಅದೇ ನಿಜವಾದ ಪರೀಕ್ಷೆ. ಮುಂಬಯಿಗೇನು ತಿಳಿಯುತ್ತದೆ.

ಕಾರಭಾರಿ : ದೇವರು, ಅವರಲ್ಲಿ ಯಾರಾದರೂ ಸತ್ತಿದ್ದರೆ ಇಲ್ಲಿಗೆ ಅಳುವುದು ಕೇಳಿಸುತ್ತಿತ್ತು. ಮತ್ತೇನು ? ಎಲ್ಲರೂ ಸತ್ತಿರುವದರಿಂದ ಯಾರೂ ಅಳುವುದಿಲ್ಲವೆ? ಇದ್ದವರಲ್ಲವೇ ಸತ್ತವರಿಗಳುವುದು ?

ದೊರೆ : ಆ ಸಂಶಯ ಬೇಡ. ಹಾಗಾಗಿದ್ದರೆ ಊರಿಗೂರೇ ಬೊಬ್ಬೆ ಕಟ್ಟುತ್ತಿತ್ತು. ಊರಲ್ಲಿ ಪ್ಲೇಗಿಲ್ಲ. ಇದೇ ನಿಜ. ಜಾತ್ರೆಯಾಗಲೇಬೇಕು. ಹೌದೆನ್ನಿರಿ ಡಾಕ್ಟರೇ.

[ಹೊರಗೆ ದೂರದಿಂದ 'ಅಯ್ಯೋ ಮಹಾರಾಯಾ' ಎಂದು ದನಿ ಕೇಳಿಬರುವುದು]

ಏನೀ ಕೂಗಾಟ ?

ಕಾರಕೂನ : ಯಾರೋ ಶೂದ್ರರ ಗಂಡಸು ಪ್ಲೇಗಿಂದ ಸತ್ತನಂತೆ

ದೊರೆ : ಯಾರೆಂದರೂ ಪ್ಲೇಗೆಂದು ? ಈ ಅರಮನೆಯಲ್ಲಿ ನನ್ನ ಅಪ್ಪಣೆಯಿಲ್ಲದೆ ಪ್ಲೇಗೂ ಬರಕೂಡದು. ಯಾರೂ ಬರ ಕೂಡದು. ನಾನು ಪ್ಲೇಗಿದೆ ಎನ್ನುವವರೆಗೆ, ಯಾರೂ ಪ್ಲೇಗು ಎಂಬ ಮಾತೂ ಎತ್ತಕೂಡದು. ಕಾರಭಾರಿಗಳೇ ಏನದು ಗದ್ದಲ ಹೊರಗೆ ?

ಕಾರಭಾರಿ : ಯಾರೋ ಸತ್ತಿರಬೇಕು.

ದೊರೆ : ಏನಾಗಿತ್ತು ?

ಕಾರಭಾರಿ : ಬರಿ ಪ್ರಾಣ ಹೋಗಿರಬೇಕು ಅಷ್ಟೇ.

ದೊರೆ : ಗಂಟು ಎದ್ದಿತ್ತೇ ಅವನಿಗೆ ?

ಕಾರಭಾರಿ : ಎದ್ದಿದ್ದರೂ ಅದು ಕುರುವಾಗಲಿ ಹದಗಡೆಯಾಗಲಿ ಇರ ಬೇಕು.

ಡಾಕ್ಟರು : ಕುರ ವು ಹದಗಡಲೆಗಳಿಂದ ಯಾರೂ ಸಾಯುವುದಿಲ್ಲ.

ದೊರೆ : ಭಲೆ ದೊಡ್ಡ ಶೋಧಮಾಡಿರಿ. ಸಾಯಬಾರದೆನ್ನುವವರು ಕುರುವು ಹದಗಡಲೇ ಆಗುವಂತೆ ಮಾಡಿಕೊಂಡರಾಯಿತು ಎನ್ನಿರಿ. ಭಲೆ ಡಾಕ್ಟರೇ

ಡಾಕ್ಟರು : ನಾನು ಹಾಗೆ ಹೇಳಲಿಲ್ಲ ದೇವರು. ಬರಿ ಕುರುವು ಹದಗಡಲೆಯಿಂದ ಯಾರೂ ಸಾಯಲಾರರು ಎಂದೆ.

ದೊರೆ : ಅದಿರಲಿ, ಯಾತರಿಂದ ಸತ್ತಿರಬೇಕು ಹೇಳಿರಿ ?

ಡಾಕ್ಟರು : ನೋಡದೇ ಬಿಡದೇ ಹೇಳಲಿಕ್ಕೆ ನಾನೇನು ಜ್ಯೋತಿಷಿಯೇ ದೇವರು ?

ದೊರೆ : ಅದಕ್ಕೆ ಜ್ಯೋತಿಷವೇತಕ್ಕೆ ಬೇಕು. ಯಾರೋ ಅತ್ತರು ಎಂದಮೇಲೆ ಇನ್ನೊಬ್ಬರಾರೋ ಸತ್ತರು. ಈ ತರ್ಕ ಸರಿ ಯಷ್ಟೇ ಕಾರಣವಿಲ್ಲದೇ ಸತ್ತಿರಲಾರರು. ಕಾರಭಾರಿಗಳು ಹೇಳುತ್ತಾರೆ. ಪ್ರಾಣ ಹೋಗಿರಬೇಕೆಂದು. ಅದಕ್ಕಾದರೂ ಕಾರಣವೇನು ?

ಡಾಕ್ಟರು : ಸರಕಾರದವರು ಪ್ಲೇಗಿಲ್ಲ ಎನ್ನುವಾಗ ತನಗೆಲ್ಲಿಂದ ಗಂಟು ಬಂತೋ ಎಂದು ಹೆದರಿ ಸತ್ತಿರಬೇಕು.

ದೊರೆ : ಶಹಬ್ಬಾಸ ಡಾಕ್ಟರರೇ ನೀವು ಹೇಳಿದ್ದು ಸರಿ. ಊರಲ್ಲಿ ಜನರು ಪ್ಲೇಗಿನ ಹೆದರಿಕೆಯಿಂದ ಸಾಯುತ್ತಿದ್ದಾರೆ. ಪ್ಲೇಗಿನಿಂದಲ್ಲ. ಕಾರಭಾರಿಗಳೇ, ಡಂಗುರ ಸಾರಿ ಹೇಳಿರಿ. ಊರಲ್ಲಿ ಪ್ಲೇಗಿಲ್ಲ. ಪ್ಲೇಗಿಗೆ ಯಾರೂ ಹೆದರಬಾರದು. ಸತ್ತರೂ ಹೆದರಬಾರದು. ಜಾತ್ರೆ ವಿಜೃಂಭಣೆಯಿಂದ ಜರುಗುವುದು ಎಂದು ಸಾರಲಿ.

ಕಾರಭಾರಿ : ಹಾಗೇ ಆಗಲಿ ದೇವರು.

[ಕಾರಕೂನರಿಗೆ ಸನ್ನೆ ಮಾಡುವರು. ಕಾರಕೂನರು ಒಳಗೆ ಸನ್ನೆ ಮಾಡುವರು. ಕೂಡಲೇ ಡಂಗುರದವನು ಸಾರುವದು ಕೇಳಿಬರುವುದು. ಹಲಗೆಯ ಸಪ್ಪಳ. 'ಕೇಳ್ರೆಪೋ ಕೇಳ್ರಿ. ಸರಕಾರೀ ಡಂಗುರ. ಊರಾಗ ಪ್ಲೇಗು ಇಲ್ಲಾ. ಪ್ಲೇಗ್ಗೆ ಯಾರೂ ಬೆದರಾಕಾಗದೂ. ಸತ್ತರೂ ಬೆದರಾಕಾಗದು. ಜಾತ್ರಿ ಆಗೇ ಆಕ್ಕೈತ್ರೆಪೋ, ಆಗೇ ಆಕ್ಕೈತಿ'. ಮತ್ತೆ ಹಲಗೆಯ ಸಪ್ಪಳ. ಅದು ನಿಂತ ಮೇಲೆ 'ಅಯ್ಯೋ ಮಾರಾಯಾ' ಎಂಬ ಅಳುವ ದನಿ ಕೇಳಿಬರುವುದು.]

ದೊರೆ : ಮತ್ತೆ ಯಾರು ಸತ್ತರು ? ಅತ್ತರೇನು ಸತ್ತವರೇಳುವರೇ? ಈ ಹುಂಬ ಮಂದಿಗೆ ಏನೂ ತಿಳಿಯುವದಿಲ್ಲ. ಡಾಕ್ಟರೇ ಇವನೇಕೆ ಸತ್ತಿರಬೇಕು.

ಡಾಕ್ಟರು : ಅಗಳೆಯುವವನು ಸತ್ತಾಗ ಉಳಿದವರು ಅತ್ತದ್ದನ್ನು ಕೇಳಿ ಇವನು ಎದೆಯೊಡೆದುಕೊಂಡು ಸತ್ತಿರಬೇಕು.

ದೊರೆ : ವಾಹವ್ವಾ ಡಾಕ್ಟರೇ, ನೀವು ದೊಡ್ಡ ಗಂಡಾಂತರದಲ್ಲಿ ನನಗೆ ಬಹಳೇ ಸಹಾಯ ಮಾಡುತ್ತಿರುವಿರಿ. ಕಾರಭಾರಿಗಳೇ. ಯಾರು ಸತ್ತರೂ ಯಾರೂ ಅಳಕೂಡದು, ಈ ಜಾತ್ರೆ

ಯಾಗುವವರೆಗೆ ಎಂದು ಡಂಗುರ ಸಾರ ಹೇಳಿರಿ.

[ಕಾರಭಾರಿಗಳು ಕಾರಕೂನರಿಗೆ ಸನ್ನೆ ಮಾಡುವರು. ಕಾರಕೂನರು ಒಳಗೆ ಸನ್ನೆ ಮಾಡುವರು. ಕೂಡಲೆ ಡಂಗುರದವನು ಸಾರುವದು ಕೇಳ ಬರುವದು. ಹಲಗೆಯ ಸಪ್ಪಳ. ಅಲ್ಲಿಂದ ಕೇಳ್ರಿಪೋ ಕೇಳ್ರಿ, ಸರ್ಕಾರಿ ಡಂಗುರ. ಜಾತ್ರಿ ಆಗೇ ಆಕ್ಕೈತಿ ಆಗೋತನಕ ಯಾರು ಸತ್ತರೂ ಯಾರೂ ಅಳಬಾರದ್ರೆಪೋ ಯಾರೂ ಅಳ ಬಾರದು. ಹಲಗೆಯ ಸಪ್ಪಳ ಮತ್ತೆ.]

ನನಗೆ ಜಾತ್ರೆಯ ಚಿಂತಿ. ಜನರಿಗೆ ಸಾಯುವ ಅವಸರ.

ಕಾರಕೂನ : ದೇವರು, ಕೆಲಜನರು ಊರು ಬಿಟ್ಟು ಹೋಗುತ್ತಿರುವರು. ಅವರ ಬಂಡಿಗಳನ್ನು ಅಧಿಕಾರಿಗಳು ತರುಬಿದ್ದಾರಂತೆ: ಏನು ಮಾಡಬೇಕು.

ದೊರೆ : ಆ ಜನರನ್ನು ಊರೊಳಕ್ಕೆ ಅಟ್ಟಿರೆಂದು ಹೇಳಿರಿ. ಊರವರೇ ಅಂಜಿ ಓಡಿದರೆ ಪರಊರವರು ಇಲ್ಲಿ ಬಂದೇನು ಸತ್ತಾರು? ಅದೇನೂ ಇಲ್ಲ, ಊರಲ್ಲಿ ಪ್ಲೇಗು ಇಲ್ಲ. ಪ್ಲೇಗಿಗೆ ಯಾರೂ ಹೆದರಬಾರದು. ಹೆದರಿದರೆ ಸತ್ತೀರಿ, ಸತ್ತರೂ ಅಳಬಾರದು ಎಂದು ಊರ ಜನರಿಗೆಲ್ಲ ತಿಳಿಯುವಂತೆ ಡಂಗುರ ಸಾರಿರಿ.

[ಕಾರಭಾರಿಗಳು ಕಾರಕೂನರಿಗೆ ಸನ್ನೆ ಮಾಡುವರು. ಕಾರಕೂನರು ಒಳಗೆ ಸನ್ನೆ ಮಾಡುವರು. ಕೂಡಲೆ ಡಂಗುರದವನು ಸಾರುವದು ಕೇಳ ಬರುವದು. ಹಲಗೆಯ ಸಪ್ಪಳ. ಅಲ್ಲಿಂದ ಊರಾಗ ಪ್ಲೇಗು ಇಲ್ಲಾ. ಪ್ಲೇಗ್ಗೆ ಯಾರೂ ಬೆದರಾಬಾಗದು. ಬೆದರಿದರೆ ಸತ್ತೀರಿ. ಸತ್ತರೂ ಅಳಬಾದ್ರೆಪೋ ಅಳಬಾರದು. ಹಲಗೆಯ ಸಪ್ಪಳ: ಸಂತರ ಒಬ್ಬ ಸಿಪಾಯಿ ಯು ಕಾರಕೂನರ ಕೈಯಲ್ಲಿ ಒಂದು ಕಾಗದ

ವನ್ನು ತಂದು ಕೊಡುವನು. ಕಾರಕೂನರು ಅದನ್ನು ಕಾರಭಾರಿಗಳ ಕೈಯಲ್ಲಿ ಕೊಡುವರು]

ಕಾರಭಾರಿ : [ಕೈಗೆ ಬಂದ ಕಾಗದ ನೋಡುವ] ದೇವರು, ಇಂದು ಬೆಳಗಿನಿಂದ ಐವರು ಜನ ತೀರಿಕೊಂಡರಂತೆ, ಕಾರಣ ತಿಳಿದಿಲ್ಲ ಎನ್ನುವರು ಸರಕಾರದ ಅಧಿಕಾರಿಗಳು.

ದೊರೆ : ಚಮತ್ಕಾರ ಎಷ್ಟು ಅವಸರ ಎಷ್ಟು ಅವಸರ. ಈ ಸಾಯುವ ಮಹಾರಾಯರು ಜಾತ್ರೆಯಾಗುವವರೆಗೆ ತಡ ದಿದ್ದರೆ 'ಏನು ಪ್ರಾಣ ಹಾರಿ ಹೋಗುತ್ತಿತ್ತೇ ಜನರಿಗೆ' ತಿಳುವಳಿಕೆಯೆ ಕಡಿಮೆ. ಏನು ಯಮನ ಊರಿನಲ್ಲಿಯೂ ಜಾತ್ರೆ ನೆರೆಯುತ್ತಿರಬಹುದೇ ? ಇದೆಲ್ಲ ಕೇಳಿ ನನ್ನ ತಲೆ ಕಾದು ಹೋಗಿದೆ. ಏನು, ಕಾರಣವೇನಿರಬಹುದು ಡಾಕ್ಟರೇ ?

ಡಾಕ್ಟರು : ಒಂದು ಪ್ಲೇಗು...

ದೊರೆ : ಛೆ ಛೆ ನಾನದನ್ನು ಒಪ್ಪಲಾರೆ.

ಡಾಕ್ಟರು : ಇನ್ನೊಂದು ಮುಂಜಾವಿನಿಂದ ಒಂದೇ ಸಮನೇ ಡಂಗುರ ಕೇಳಿ ಕೇಳಿ ಜನರು ಪ್ರಾಣ ಕಳಕೊಳ್ಳುತ್ತಿರಬಹುದು ದೇವರು.

ದೊರೆ : ಚೇಷ್ಟೆ ಮಾಡುತ್ತಿಲ್ಲವಷ್ಟೇ ಡಾಕ್ಟರೇ, ಕಾರಭಾರಿಗಳೇ, ಡಾಕ್ಟರನ್ನುವಂತೆ ಇರಬಹುದೇ ?

ಕಾರಭಾರಿ : ಯಾಕಿರಬಾರದು ? ಪ್ಲೇಗಿರಬಹುದೆಂಬ ಹೆದರಿಕೆಯಿಂದ ಜನರ ಎದೆ ಹಾರುತ್ತಿರಬೇಕು. ತಮ್ಮ ಬಾಯಿಂದ ಎಲ್ಲಿ ಪ್ಲೇಗು ಎಂಬ ಮಾತು ಸುಳ್ಳೇ ಜಾರಿಹೋದೀತೆಂದು ನಿಜ ವಾದ ಹೆದರಿಕೆಯುಂಟಾಗಿ, ಎದೆ ಮತ್ತಷ್ಟು ಹಾರುತ್ತಿರ ಬೇಕು. ಎದೆಯು ಹಾರುವ ಸಪ್ಪಳದಲ್ಲಿ ಮೇಲಿಂದ ಮೇಲಾ ಗುವ ಡಂಗುರದ ಸಪ್ಪಳ ಕೂಡಿ, ಡಂಗುರವೋ ಎದೆಯೋ

ತಿಳಿಯದಾಗಿ ಎದೆಯು ಹಾರಿ ಹಾರಿ, ಪ್ರಾಣವು ಜಿಗಿದು, ಮನುಷ್ಯನು ಪುಟಿದು ಬೀಳುತ್ತಿರಬಹುದು.

ದೊರೆ : ಡಾಕ್ಟರೇ, ಇದು ಹೇಗೆ ? ನಿಜವಿರಬಹುದೆ ?

ಡಾಕ್ಟರು : ನಿಜವೇನೇ ಇದ್ದರೂ ಹೀಗಿರಬೇಕೆಂದು ನಮ್ಮ ತರ್ಕ, ದೇವರು.

ದೊರೆ : ಇದನ್ನೆಲ್ಲ ಕೇಳಿ ನನ್ನ ಎದೆ ಹಾರುತ್ತಿದೆ.

ಡಾಕ್ಟರು : ಜಾತ್ರೆಯ ವಿಚಾರದಿಂದಾಗುತ್ತಿರಬೇಕು. ನಿಜವಾಗಿ ತಮ್ಮ ಎದೆ ಕುಣಿದಾಡಬೇಕು, ದೇವರು.

ದೊರೆ : [ಹಣೆ ಮುಟ್ಟಿಕೊಂಡು] ನನ್ನ ಹಣೆ ಕಾದಂತಿದೆ. ಡಂಗುರ ಸಾರುವದು ಇನ್ನು ಬೇಡ ಎಂದ ತಿಳಿಸಿರಿ. ಜಾತ್ರೆಯ ಎಲ್ಲ ಸಿದ್ಧತೆ ಮಾತ್ರ ಸಾಗಲಿ. ಜಾತ್ರೆಯಾಗಲೇಬೇಕು. ಡಾಕ್ಟರೇ ನನ್ನ ಮೈ ಕಾದಿದೆಯೇನು ನೋಡಿರಿ.

ಡಾಕ್ಟರು : [ನೋಡಿ] ದೊರೆಗಳ ಮೈ ಬೆಚ್ಚಗಿರಲೇಬೇಕು.

ದೊರೆ : [ತನ್ನ ನಾಡಿ ತಾನೇ ನೋಡಿಕೊಂಡು] ನನ್ನ ನಾಡಿ ಇಷ್ಟೇಕೆ ಹಾರುತ್ತದೆ ?

ಡಾಕ್ಟರು : ರಾಜನಾಡಿ ಕೇಳುವದೇನು ? ರಣಾಂಗಕ್ಕೆ ಹೊರಟ ಕುದುರೆ ಯಂತೆ ಹೊರಟಿದೆ, ದೇವರು.

ದೊರೆ : ನನ್ನ ಮೈ ಯಾಕೋ ನಡುಗುತ್ತಿದೆಯಲ್ಲಾ ?

ಡಾಕ್ಟರು : ದೇವರು, ಅದು ಜಾತ್ರೆಯ ಉತ್ಸಾಹ.

[ಸಿಪಾಯಿ ಕರೆದದ್ದನ್ನು ನೋಡಿ ಕಾರಕೂನರು ಒಳಗೆ ಹೋಗಿ ಬಂದು]

ಕಾರಕೂನ : ದೇವರು, ಕೆಳಗಿನ ಓಣಿಯಲ್ಲಿ ಇಬ್ಬರು ಬಡಪಾಯಿಗಳು ಸತ್ತರಂತೆ. ಅವರ ಮನೆಯಲ್ಲಿ ಕೂಡ ಏನೂ ಗಂಟಿರಲಿಲ್ಲ ವಂತೆ,

ದೊರೆ : ನಮ್ಮ ಮನೆಯೇನು ಅರಮನೆಯೋ, ಯುವರಾಜನ ಸುಂಕದ ಕಟ್ಟೆಯೋ ? ಸತ್ತವರಿಗೆ ಸುಮ್ಮನೆ ಸ್ಮಶಾನದ ಹಾದಿಯನ್ನು ಹಿಡಿಯ ಹೇಳಿರಿ. ಒಬ್ಬ ಕೂಲಿ ಸತ್ತರೂ ಇಲ್ಲಿ ಬೊಬ್ಬೆ. ಒಂದು ಇಲೀ ಸತ್ತರೂ ಇಲ್ಲಿ ಬೊಬ್ಬೆಯೇ? ಊರು ಸತ್ತರೂ ಜಾತ್ರೆ ನಿಂತೀತೇ? ಯಾರು ಸತ್ತದ್ದೂ ಇನ್ನು ನನಗೆ ಹೇಳಬೇಡಿರಿ. ನಾನು ಕೇಳಲಾರೆ.

[ಸಿಪಾಯಿ ಕರೆದದ್ದನ್ನು ನೋಡಿ ಕಾರಕೂನನು ಒಳಗೆ ಹೋಗಿ ತಿರುಗಿ ಬಂದು ಕಾರಭಾರಿಗಳ ಕಿವಿಯಲ್ಲಿ ಏನೋ ಹೇಳುವನು.]

ಕಾರಭಾರಿ : ದೇವರು, ಆಚೆಯ ಕೋಣೆಯ ಮಧ್ಯದಲ್ಲಿ ಒಂದು ಇಲಿಯು ಸುಮ್ಮನೆ ಬಿದ್ದುಕೊಂಡಿದೆಯಂತೆ.

ದೊರೆ : ಸತ್ತಿದೆಯೇ ?

ಕಾರಭಾರಿ : ಏನು ದೇವರು, ಯಾರ ಕಾಲ ಸಪ್ಪಳಕ್ಕೂ ಅದು ಹೆದರಿ ಸರಿದಾಡಲೊಲ್ಲದು ಕೂಡ.

ದೊರೆ : ಸಪ್ಪಳ ಮಾಡದಿದ್ದರೆ ಅದು ಧೈರ್ಯದಿಂದ ಹೊರಟು ಹೋಗಬಹುದಲ್ಲ.

ಕಾರಭಾರಿ : ಜಡಜಂತು, ಅದಕ್ಕೆ ಅಷ್ಟು ವಿವೇಕವಿರುವಂತೆ ತೋರು ವದಿಲ್ಲ.

ದೊರೆ : ಬೆಕ್ಕು ಬಿಟ್ಟು ನೋಡಿದಿರಾ ?

ಕಾರಭಾರಿ : ಆ ಇಲಿ ಬೀಳುವ ಹೊತ್ತಿಗೆ ಕೋಣೆಯೊಳಗಿನಿಂದ ಓಡಿ ಹೋದ ಎರಡು ಬೆಕ್ಕುಗಳು ಇನ್ನೂ ಕೈಗೆ ಸಿಕ್ಕಿಲ್ಲ.

ದೊರೆ : ಆ ಇಲಿಗಳನ್ನು ಈಗಿಂದೀಗ ತಂತಿಯಿಂದ ಮದ್ರಾಸಿಗೆ ಕಳಿಸಿರಿ.

ಡಾಕ್ಟರು : ವಾಯರಲೆಸ್ಸಿನಿಂದ ಕಳಿಸಿದರೆ ಒಳ್ಳೆದಾಗಲಿಕ್ಕಿಲ್ಲವೇ ?

ದೊರೆ : ನಿಮಗೆ ಹುಚ್ಚು ಡಾಕ್ಟರೇ ಹಾಗೆ ಹೇಗೆ ಬಂದಿತು?

ಡಾಕ್ಟರು : ತಾವಂದಂತೆ ತಂತಿಯಿಂದ ಬರಬಹುದೇ ದೇವರು ?

ದೊರೆ : (ಉದ್ವೇಗದಿಂದ) ನಾನು ಹಾಗೆಂದೇನೇ ? ನನ್ನ ಮನಸ್ಸು ಸ್ಥಿರವಿಲ್ಲ. ಕಾರಭಾರಿಗಳೇ, ಆ ಇಲಿಯ ಅಂತ್ಯವಿಧಿ ತೀರಿಸಿರಿ.

[ಕಾರಭಾರಿಗಳು ಹೋಗುವರು]

ಡಾಕ್ಟರೇ ನನಗೆ ಜ್ವರ ಬಂದಿದೆಯೇನೋ ?

ಡಾಕ್ಟರು : ಹಾಗೆ ಭಾಸವಾಗುತ್ತಿರಬೇಕು.

ದೊರೆ : ಇದು ಪ್ಲೇಗಿನ ಜ್ವರವಿರಲಿಕ್ಕಿಲ್ಲವಷ್ಟೇ ?

ಡಾಕ್ಟರು : ದೇವರು, ತಾವು ದೊರೆಗಳು : ಸಾಮಾನ್ಯ ಜನರಂತೆ ಮಾಡಿದರೆ ಹೇಗೆ ? ಪ್ಲೇಗು ಇಲ್ಲದಲ್ಲಿ ಪ್ಲೇಗಿನ ಜ್ವರವೇ ?

ದೊರೆ : ತಮಗೆ ಪ್ಲೇಗಿನ ಹೆದರಿಕೆಯಿಲ್ಲವೇ ?

ಡಾಕ್ಟರು : ನಾನು ಸೂಜಿಮದ್ದನ್ನು ಚುಚ್ಚಿಕೊಂಡಿದ್ದೇನೆ.

ದೊರೆ : ಅದೇಕೆ ಚುಚ್ಚಿಕೊಂಡಿರಿ, ಪ್ಲೇಗಿಲ್ಲದೆ ಸುಮ್ಮನೇ ?

ಡಾಕ್ಟರು : ಆ ವಿಚಾರ ಚುಚ್ಚಿಕೊಂಡ ಮೇಲೆ ನನಗೂ ಹೊಳೆಯಿತು.

ದೊರೆ : (ಆತುರದಿಂದ) ನನಗೆ ಚುಚ್ಚುವಿರಾ ? ಡಾಕ್ಟರೇ

ಡಾಕ್ಟರು : ಸುಮ್ಮನೇ ಏಕೆ ದೇವರು ?

(ಕಾರಭಾರಿಗಳು ಮರಳಿ ಬರುವರು)

ದೊರೆ : ಆ ಇಲಿಯಿಂದ ನನ್ನ ಮನಸ್ಸಿಗೆ ಹೆದರಿಕೆಯಾಗಿದೆ.

ಡಾಕ್ಟರು : ಆ ಇಲಿಯು ಪ್ಲೇಗಿನದಿರಲಾರದು.

ದೊರೆ : ಯಾವ ದೇವರು ಹೇಳಿದರು ನಿಮಗೆ ಇದನ್ನು ?

ಡಾಕ್ಟರು : ರಾಜಾ ಪ್ರತ್ಯಕ್ಷ ದೇವತಾ ಬೇರೆ ಯಾರು ? ಊರಲ್ಲಿಯೇ ಪ್ಲೇಗಿನ ಇಲಿಗಳಿಲ್ಲದ ಮೇಲೆ ದೊರೆಗಳ ಮನೆಯಲ್ಲಿ ಎಲ್ಲಿಂದ ಬರಬೇಕು ?

ದೊರೆ : ಆದರೆ ತಾವೇ ಮೊದಲು ಎನ್ನಲಿಲ್ಲವೇ ಪ್ಲೇಗಿನಿಲಿಗಳಿವೆಯೆಂದು.

ಡಾಕ್ಟರು : ಆಗ ನನಗೆ ಬುದ್ಧಿಯಿರಲಿಲ್ಲ.

ದೊರೆ : ಮುಂಬಯಿ ಸರಕಾರದ ವೈದ್ಯಶಾಖೆಯವರು ಹಾಗೆ ತಿಳಿಸುವರಲ್ಲ ಕಾರಭಾರಿಗಳೇ, ಅಲ್ಲವೇ ?

ಕಾರಭಾರಿ : ಅವರೇನೋ ಹಾಗೆಂದಿದ್ದಾರೆ.

ಡಾಕ್ಟರು : ತೊಗಲಲ್ಲೇನು ಬಲ್ಲ ತಿಮ್ಮಪ್ಪ, ದೊರೆಗಳ ಇಲಿಗಳು ದೊರೆಗಳು ಬಲ್ಲರು.

ಕಾರಭಾರಿ : (ಕೈಯಲ್ಲಿರುವ ಕಾಗದವನ್ನು ನೋಡಿ) ಯಾವದೋ ಪತ್ರಿಕೆಯಲ್ಲಿ ಹುಚ್ಚಾಪುರದಲ್ಲಿ ಜಾತ್ರೆಯ ಸಿದ್ಧತೆಯೂ ಹೆಚ್ಚಾಗಿ ನಡೆದಿದೆ : ಊರಲ್ಲಿ ಪಿಡಗೂ ಹೆಚ್ಚಾಗುತ್ತ ನಡೆದಿದೆ, ಎಂಬ ಸುದ್ದಿ ಪ್ರಕಟವಾಗಿದೆಯಂತೆ;

ದೊರೆ : (ಸಿಟ್ಟಿನಿಂದ) ಏನು ಮುದ್ರಾರಾಕ್ಷಸವಿದು ದೆವ್ವನಂಥ ತಪ್ಪು; ಇನ್ನೇನು ಸಾಯಬೇಕು ? ಆ ಪತ್ರಿಕೆಗೆ ತಿದ್ದುಪಡಿ ಕಳಿಸಿರಿ; ಪಡುಗಲ್ಲ, ಬೆಡಗು ಎಂದು. ಊರಲ್ಲಿ ಬೆಡಗು ಹೆಚ್ಚಾಗುತ್ತ ನಡೆದಿದೆ. ಪಿಡುಗಂತೆ ಪಿಡುಗು ಸಂಪಾದಕರಿಗೇನು ? ಪಿಡುಗೂ ಸುದ್ದಿಯೇ ಬೆಡಗೂ ಸುದ್ದಿಯೇ, ಅವರ ಗಂಟೇನು ಹೋದೀತರ ?

(ಒಮ್ಮೆಲೆ ನಿಸ್ತೇಜನಾಗಿ)

ನನ್ನ ಕೈಕಾಲೇ ಹೋದವು ಡಾಕ್ಟರ್

ಡಾಕ್ಟರು : ದೇವರು, ತಾವು ಧೈರ್ಯವಂತರು, ಏಕವಚನಿಗಳು. ಆಡಿದ ಮಾತು ತಿರುಗುವಂತಿಲ್ಲ ತಮ್ಮದು,

ದೊರೆ : ಮಂಚದ ಮೇಲೆ ಬಿದ್ದುಕೊಳ್ಳಲಾ ಎನಿಸುತ್ತಿದೆ.

ಡಾಕ್ಟರು : ತಾವು ಬಿದ್ದುಕೊಂಡರೆ ಜಾತ್ರೆಯೂ ಬಿದ್ದುಕೊಂಡುಬಿಡುವದು ದೇವರು.

ದೊರೆ : ತಲೆ ತಿರುಗಹತ್ತಿದೆ.

ಡಾಕ್ಟರು : ತಮ್ಮ ವಿಚಾರಗಳ ಪ್ರಭಾವವದು.

ದೊರೆ : ಕಣ್ಣು ಉರಿಯುತ್ತಿದೆ.

ಡಾಕ್ಟರು : ತಮ್ಮ ದೃಷ್ಟಿಯಷ್ಟು ಅಷ್ಟು ಪ್ರಖರ.

ದೊರೆ : ಬಾಯಿ ಆರುತ್ತಿದೆ.

ಡಾಕ್ಟರು : ಏನೂ ಅಡ್ಡಿಯಿಲ್ಲ ದೇವರು.

ದೊರೆ : ಡಾಕ್ಟರೇ, ನಿಮ್ಮ ಶಾಂತತೆ ನನಗೆ ಸಹಿಸಲಾಗುವುದಿಲ್ಲ. ನನ ಗೇನೋ ಆಗಿದೆ. ಪರೀಕ್ಷಿಸಿ ನೋಡಿರಿ

ಡಾಕ್ಟರು : ಪರೀಕ್ಷಿಸಿ ಏನು ನೋಡುವದು ? ಮೇಲೆಯೆ ಕಾಣುತ್ತದೆ. ಸತ್ತವರ ಸುದ್ದಿಗಳನ್ನು ಮುಂಜಾವಿನಿಂದ ಕೇಳಿ ಕೇಳಿ ಭ್ರಮ ವಾಗಿರಬೇಕು.

ದೊರೆ : ಹಾಗೆ ಎಂದರೆ ಹೇಗೆ ? ಪ್ಲೇಗು ಎಂದೋ ?

ಡಾಕ್ಟರು : ಆ ಮಾತು ನಾನಾಡಲಾರೆ. ದೊರೆಗಳು ಹೇಳಬಹುದು.

ದೊರೆ : (ಹಾಸಿಗೆಯ ಮೇಲುರುಳುತ್ತ) ಡಾಕ್ಟರೇ, ಪ್ಲೇಗೆಂಬ ಮಾತಿಗೆ ಎಷ್ಟು ಹೆದರುತ್ತೀರಿ ?

ಡಾಕ್ಟರು : ನನಗೆ ಪ್ಲೇಗಿನ ಭೀತಿಯಿಲ್ಲ, ತಮ್ಮದು ದೇವರು ?

ದೊರೆ : ಹೆದರದೆ ಹೇಳಿರಿ ನನಗೇನಾಗಿರಬೇಕು ?

ಡಾಕ್ಟರು : ಪ್ಲೇಗು,

ದೊರೆ : (ಒಮ್ಮೆಲೆ ಎದ್ದು) ನನಗೆ ಪ್ಲೇಗಾಗಿದೆ ?

(ವಿಕಾರವಾಗಿ)

ಊರೊಳಗಿನ ಎಲ್ಲ ಇಲಿಗಳನ್ನೂ ಕೊಂದುಬಿಡಿರಿ. ಕಾರ ಭಾರಿಗಳೇ. ಇಲಗಳೆಲ್ಲಿವೆ ?

(ಬಿದ್ದುಕೊಳ್ಳುವನು)

ಕಾರಭಾರಿ : ದೊರೆಸಾನಿಗಳು ಒಳಗೆ ಬರಲು ಅಪ್ಪಣೆಗಾಗಿ ಕಾದಿದ್ದಾರೆ. ಜನರು ಊರು ಬಿಡಲು ಕಾದಿದ್ದಾರೆ.

ದೊರೆ : ಕಾರಭಾರಿಗಳೇ, ಇನ್ನೇನು ದೇವರ ಜಾತ್ರೆಯೋ, ದೊರೆಗಳ ಪ್ರೇತಯಾತ್ರೆಯೋ ಡಾಕ್ಟರೇ ಊರ ಜನರಿಗೆ ಊರು ಬಿಡಹೇಳಿರಿ. ಜೀವದ ಜಾತ್ರೆ ಹೊರಡಲಿ. ಡಾಕ್ಟರೇ ನಿಮಗೆ ಬುದ್ಧಿಯಿಲ್ಲ. ಹೆದರಿಸಿದರೆ ಹೆದರಿಬಿಡುತ್ತೀರಿ. ಸತ್ತರೂ ಸತ್ಯ ಬಿಡಬಾರದು. ನಾನು ಹೇಳುತ್ತೇನೆ-ಇದು ಪ್ಲೇಗು.

ಡಾಕ್ಟರು : ಸರಕಾರ ಹೇಳಿದ್ದೇ ಸತ್ಯ, ದೇವರು.

(ಕಾರಭಾರಿಗಳು ಹೇಳಹೋಗುವರು. ಒಳಗೆ ಭಾಳ ದಿನಾ ಭಾಳ ನಮ್ಮ ಧಣಿ ಎಂದು ಜನಜಂಗುಳಿಯು ಕೂಗುವದು ಕೇಳಬರುವದು)

—ತೆರೆ ಬೀಳುವುದು—

ಪಾತ್ರಗಳು :

ಒಬ್ಬ
ಇನ್ನೊಬ್ಬ
ಹೊಸಬ
ಮಂನುಷ್ಯ

[ಆರು ಅಡಿ ಉದ್ದ, ನಾಲ್ಕು ಅಡಿ ಅಗಲದ ಗಾಜಿನ ಫಲಕವನ್ನು ಎರಡು ತುದಿಗಳಲ್ಲಿ ಗಾಜಿನ ಒಂದೊಂದು ಮಗ್ಗುಲಿಗೂ ಒಬ್ಬೊಬ್ಬರು ಹಿಡಿದುಕೊಂಡು ಇಬ್ಬರು ಪ್ರವೇಶಿಸುತ್ತಾರೆ. ಇಬ್ಬರೂ ಗಾಜಿನ ಮೇಲ್ತುದಿಗೆ ಅಥವಾ ಪಕ್ಕಕ್ಕೆ ಒಂದು ಕೈ ಮತ್ತು ಕೆಳಗಡೆ ಒಂದು ಕೈಕೊಟ್ಟು ಗಾಜನ್ನು ಉದ್ದವಾಗಿ ಹಿಡಿದುಕೊಂಡಿದ್ದಾರೆ. ನಡೆಯುವಾಗ ಓಡುತ್ತಾರೆ ; ತತ್ತರಿಸುತ್ತಾರೆ.

ಒಬ್ಬ : ಗೋಡೆ ಬೇಕೇ ಗೋಡೆ !

ಇನ್ನೊಬ್ಬ : ಗೋಡೆ, ಗೋಡೆ....

ಒಬ್ಬ : ಗೋಡೆ ಬೇಕೇ ಗೋಡೆ !

ಇನ್ನೊಬ್ಬ : ಗೋಡೆ – ಗರವಶಾಗರಂ ಗೋಡೆ,

ಒಬ್ಬ : ತಡೀರಿ, ಏನಂತ ಕೂಗ್ತಾ ಇದೀರಿ ?

ಇನ್ನೊಬ್ಬ : ಯಾಕೆ ? ಗರವಶಾಗರಂ ಗೋಡೆ ಅಂತ.

ಒಬ್ಬ : ಅಲ್ರೀ ಇದೇನು ಹುರಿಗಾಳಿ ?

ಇನ್ನೊಬ್ಬ : ಆ ತರಹ ಎಲ್ಲಾ ಕೂಗಿದರೇನೆ ವ್ಯಾಪಾರ ಚೆನ್ನಾಗಿ ಆಗೋದು ಅಲ್ಲವೇನ್ರಿ ?

ಒಬ್ಬ : ಅದು ಸರಿ. ಆದರೆ ಯಾರಾದರೂ ಗರವಾಗರಂ ಗೋಡೆ ಅಂತ ಮಾರೋದು ನೋಡಿದೀರಾ ?

ಇನ್ನೊಬ್ಬ : ಇಲ್ಲ. ಅದು ಯಶಾಕೆ? ನಾನು ಯಾರೂ ಗೋಡೆ ಮಾರೋದನ್ನೇ ನೋಡಿಲ್ಲ, ಕೇಳಿಲ್ಲ.

ಒಬ್ಬ : ಅದಕ್ಕೆ ಸಂಬಂಧವಿಲ್ಲದ್ದೆಲ್ಲ ಕೂಗೋದೋ ?

ಇನ್ನೊಬ್ಬ : ಪರವಾಗಿಲ್ಲ ಬಿಡ್ರೀ. ಕೂಗಿದ್ದನ್ನು ಕೇಳಿ ಅರ್ಥ ಮಾಡ್ಕೊಂಡು ಕೊಂಡುಕೊಳ್ಳೋರು ಯಾರು ?

ಒಬ್ಬ. : ಹೌದಲ್ಲ! ಇದರ ಬಗ್ಗೆ ನಾನು ಯಾವತ್ತೂ ಯೋಚನೇನೆ ಮಾಡಿಲ್ಲ.

ಇನ್ನೊಬ್ಬ : ಈಗ ಯಾಕೆ ಯೋಚನೆ ? ಕೂಗಿ ಸುಮ್ಮನೆ.

ಒಬ್ಬ : ಗೋಡೆ ಬೇಕೇ ಗೋಡೆ !

ಇನ್ನೊಬ್ಬ : ಗೋಡೆ ಗೋಡೆ.

ಒಬ್ಬ : ಗೋಡೆ ಬೇಕೇ ಗೋಡೆ.

ಇನ್ನೊಬ್ಬ : ಗೋಡೆ ಗರಮಾಗರಂ ಗೋಡೆ.

ಒಬ್ಬ : ಮತ್ತೆ ಶುರು ಮಾಡಿದೆಯಲ್ಲಪ್ಪ !

ಇನ್ನೊಬ್ಬ : ಗೋಡೆ....

ಒಬ್ಬ : ಅಲ್ಲಯ್ಯ ಗೋಡೇನ ಯಾರಾದರೂ ರುಚಿ ನೋಡಿಕೊಂಡು ಕೊಳ್ಳುತಾರೆಯೇ?

ಇನ್ನೊಬ್ಬ : ಸರಿಯಪ್ಪ. ನೀನೇ ಹೇಳು, ಯಾರೇ ಆಗಲಿ, ಗೋಡೇನ ಯಾಕೆ ಕೊಂಡುಕೊಳ್ಳೋಕೆ ಹೋಗುತ್ತಾರೆ.

ಒಬ್ಬ : ಯಾರಾದರೂ ಗೋಡೆ ತಗೊಳ್ಳೋದು ನೋಡಿದ್ದೀಯಾ ನೀನು ?

ಇನ್ನೊಬ್ಬ : ಇಲ್ಲ.

ಒಬ್ಬ : ಹಾಗಾದರೆ ನಿನಗೂ ಗೊತ್ತಿಲ್ಲ. ನನ್ನ ಏನು ಕೇಳುತೀ?

ಇನ್ನೊಬ್ಬ : ಹಾಗಲ್ಲ....ಯಾಕೆ ತಗೋಬೇಕು ಅಂತ ?

ಒಬ್ಬ : ಮನೇಲಿ ಗಾಳಿ ಬೀಸದೇ ಇರಲಿ ಅಂತ...

ಇನ್ನೊಬ್ಬ : ಅಂದ್ರೆ ?

ಒಬ್ಬ : ಮನೇಲಿ ಚಳಿ ಆಗದೆ ಇರಲಿ ಅಂತ ಗೋಡೆ ತಗೋ ಬಹುದು.

ಇನ್ನೊಬ್ಬ : ಅಂದ ಮೇಲೆ ಗರಮಾಗರಂ ಗೋಡೇನೆ ಸರಿ ಅಲ್ಲಾ ?

ಒಬ್ಬ : ಇನ್ನೂ ಅದೇ ಮಾತಾಡತಾ ಇದೀಯಾ ?

ಇನ್ನೊಬ್ಬ : ಗೋಡೆ ಗರಮಾಗರಂ ಗೋಡೆ.

ಒಬ್ಬ : ಗೋಡೆ ಬೇಕೇ ಗೋಡೆ !

ಇನ್ನೊಬ್ಬ : ಗರಮಾಗರಂ ಗೋಡೆ....

[ಹೀಗೆ ಕೂಗುತ್ತಾ ಇಬ್ಬರೂ ರಂಗದ ಮೇಲೆ ಓಡಾಡುತ್ತಾರೆ. ಆಗಾಗ್ಗೆ ಗೋಡೆ ಎಲ್ಲಿ ಬೀಳು ವುದೋ ಎಂಬ ಭಯದಲ್ಲಿ ತತ್ತರಿಸುತ್ತಾರೆ. ಗೋಡೆ ಅತ್ತಲಿಂದ ಇತ್ತ ಓಲಾಡುತ್ತದೆ]

ಒಬ್ಬ : ಒಂದು ನಿಮಿಷ ತಾಳು.

ಇನ್ನೊಬ್ಬ : ಈಗೇನು ನಿನ್ನ ಆಕ್ಷೇಪಣೆ ?

ಒಬ್ಬ : ನೀನು ಆ ಪ್ರಶ್ನೆ ಯಾಕೆ ಕೇಳಿದೆ ?

ಇನ್ನೊಬ್ಬ : ಯಾವುದು ?

ಒಬ್ಬ : ಗೋಡೆ ಯಾಕೆ ತಗೋತಾರೆ ಅನ್ನೋದು.

ಇನ್ನೊಬ್ಬ : ಸುಮ್ಮನೆ ಕೇಳಿದೆ–ಯಾಕೆ ತಗೋತಾರೆ ಅಂತ.

ಒಬ್ಬ : ಬಹಳ ಒಳ್ಳೇ ಪ್ರಶ್ನೆ ನಿಜವಾಗಿ,

ಇನ್ನೊಬ್ಬ : ಸುಮ್ಮನೆ ಯಾಕೆ ತಲೆ ಕೆಡಿಸಿಕೋತೀಯ,–ಬಿಡು.

ಒಬ್ಬ : ಹಾಗೆಂದರೇನು ? ಒಂದು ಗಹನವಾದ ವಿಷಯ ಸಿಕ್ಕಿರ ಬೇಕಾದರೆ....

ಇನ್ನೊಬ್ಬ : ಓಹೋ. ಈಗ ಎಲ್ಲಾದರೂ ಕೂತುಕೋಬೇಕೋ ನೀನು?

ಒಬ್ಬ : ಕೂತುಕೊಳ್ಳೋದು ಯಾಕೆ ?

ಇನ್ನೊಬ್ಬ : ಮತ್ತೆ ಒಂದು ಬಂಡೆ ಮೇಲೆ ಕೂತು ಚಾಚಿದ ಒಂದು ಕಾಲ ಮೇಲೆ ಚೂಪಾದ ಮೊಣಕೈ ಊರಿ ಆ ಕೈಯಲ್ಲಿ ತಲೆ ಕೆದರಿ ಕೋತಾ ಕೂತರೆ ಅಲ್ಲವೆ, ಯೋಚನೆ ಅನ್ನೋದು ?

ಒಬ್ಬ : ಹಾಗೆಲ್ಲ ಕೂರದೆ ಯೋಚನೆ ಮಾಡೋಕೆ ಆಗೊಲ್ಲವೆ?

ಇನ್ನೊಬ್ಬ : ಆದರೂ ಯೋಚನೆ ಮಾಡೋಕೆ ಒಂದು ವಾತಾವರಣ.

ಒಬ್ಬ : ಅದರ ಬಗ್ಗೆ ಈಗ ಒಂದೆರಡು ಗಂಟೆ ಯೋಚನೆ ಮಾಡ ಬಹುದು.

ಇನ್ನೊಬ್ಬ : ಪರವಾಗಿಲ್ಲವಲ್ಲ! ಮೊದಲನೆಯ ಪ್ರಶ್ನೆ ಹಿಂಡಿ ಆಯಿತೋ?

ಒಬ್ಬ : ನೋಡಿದಿಯಾ! ಸುಮ್ಮನೆ ಏನೇನೋ ಕೇಳಿ ಮಾತೇ ಮರೆಸಿ ಬಿಟ್ಟೆಯಲ್ಲ ?

ಇನ್ನೊಬ್ಬ : ಬಿಡು ಸುಮ್ಮನೆ ಯಾಕೆ ಒದ್ದಾಡುತೀ ?

ಒಬ್ಬ : ಅಲ್ಲ ಜನ ಗೋಡೇನ ಯಾಕೆ ತಗೋತಾರೆ ?

ಇನ್ನೊಬ್ಬ : ಥತ್–ಯಾರಾದರೂ ಗೋಡೆ ಕೊಂಡುಕೋತಾರೆಯೇ ? ಕಟ್ಟಿಸುತ್ತಾರೆ.

ಒಬ್ಬ : ಹೌದಲ್ಲ! ಕಟ್ಟಿಸುತ್ತಾರೆ. ಯಾಕೆ ಕಟ್ಟಿಸುತ್ತಾರೆ?

ಇನ್ನೊಬ್ಬ : ಯಾಕೆ ಕಟ್ಟಿಸುತ್ತಾರೆ ಅಂದರೆ ಕಟ್ಟಿಸೋದೆ ಸುಲಭ. ಎಲ್ಲಿ ಮನೆ ಬೇಕೋ ಅಲ್ಲಿ ಗೋಡೆ ಕಟ್ಟಿಸುತ್ತಾರೆ,

ಒಬ್ಬ : ಅದು ಹ್ಯಾಗೆ ಸುಲಭ ಆಗುತ್ತೆ ? ಸುಖವಾಗಿ ಕೊಂಡು ಕೊಂಡು ಮನೆಗೆ ಜೋಡಿಸಿಕೋಬಹುದಲ್ಲ.

ಇನ್ನೊಬ್ಬ : ಯಾಕೆ ಜೋಡಿಸಿಕೋಬೇಕು ?

ಒಬ್ಬ : ಮತ್ತೆ ಗೋಡೆ ಇಲ್ಲದೆ ಮನೆ ಇರೋಕೆ ಸಾಧ್ಯವೆ ?

ಇನ್ನೊಬ್ಬ : ಅದು ನನಗೆ ಗೊತ್ತಿಲ್ಲವೆ? ಗೋಡೆ ಬೇಕೇ ಬೇಕು.

ಒಬ್ಬ : ಸರಿ ಹಾಗಾದರೆ ಆಯ್ತಲ್ಲ. ಅಬ್ಬ !

ಇನ್ನೊಬ್ಬ : ಏನು ಆದ್ದು ಈಗ ?

ಒಬ್ಬ : ಗೋಡೆ ಎಲ್ಲರಿಗೂ ಬೇಕೂಂತ ಆಯಿತು. ಗೋಡೆ ಬೇಕೇ ಗೋಡೆ !

ಇನ್ನೊಬ್ಬ : ಗೋಡೆ–ಗೋಡೆ- ಗರಮಾಗರಂ–ಗೋಡೆ

ಒಬ್ಬ : ಗೋಡೆ ಬೇಕೆ ಗೋಡೆ ಜೋಡಿಸಿಕೊಳ್ಳೊ ಗೋಡೆ !

ಇನ್ನೊಬ್ಬ : ಗೋಡೆ ಜೋಡಿಸಿಕೊಳ್ಳೋದೇನೋ ಒಳ್ಳೇದೆ.

ಒಬ್ಬ : ಜೋಡಿಸಿಕೊಳ್ಳೋಕೆ ಆಗಲೂಬಹುದು.

ಇನ್ನೊಬ್ಬ : ಬೇರೆ ದೇಶಗಳಲ್ಲಿ ಆಗಲೇ ಕಂಡುಹಿಡಿದುಬಿಟ್ಟಿದ್ದಾರೆ ಅದನ್ನ.

ಒಬ್ಬ : ಹಾಗೆ ಅಂತೀಯಾ ?

ಇನ್ನೊಬ್ಬ : ಬಿಡುತಾರೆಯೇ ?

ಒಬ್ಬ : ಹಾಗಾದರೆ ಅದು ಬಹಳ ಒಳ್ಳೆಯ ಐಡಿಯಾ ಅಂತಲೇ ಆಯಿತಲ್ಲ.

ಇನ್ನೊಬ್ಬ : ಅದು ಸರಿ ಆದರೆ ಈ ಗೋಡೆ ಆಗೊಲ್ಲ.

ಒಬ್ಬ ; ಯಾಕೆ ?

ಇನ್ನೊಬ್ಬ : ಅಲ್ಲಾ–ನಾವು ಮನೇಲಿ ಏನು ಮಾಡುತೀವಿ ಅಂತ ಎಲ್ಲರಿಗೂ ಕಾಣದೇ ಇರಲಿ ಅಂತ ಗೋಡೆ ಕಟ್ಟುಕೋತಾರಪ್ಪ ?

ಒಬ್ಬ : ಹೂಂ–ಅದೂ ಒಂದು...

ಇನ್ನೊಬ್ಬ : ಅಂದಮೇಲೆ ಈ ಗಾಜನ್ನು ತಗೊಂಡು ಗೋಡೆ ತರಹಾ ಜೋಡಿಸಿದರೆ ಏನು ಉಪಯೋಗ !

ಒಬ್ಬ : ಆಗಲೆ ಹೇಳಿದೆನಲ್ಲ-ಜೋಡಿಸೋದು ಸುಲಭ ಅಂತ.

ಇನ್ನೊಬ್ಬ : ಜೋಡಿಸಿಬಿಟ್ಟರೆ ಒಳಗೆಲ್ಲಾ ಕಾಣುತ್ತಲ್ಲಾ ?

ಒಬ್ಬ : ಓಹೋ ಕಾಣುತ್ತೆ.

ಇನ್ನೊಬ್ಬ : ಅಂದರೆ ನಾವು ಮನೇಲಿ ಬೆತ್ತಲೆ ತಿರುಗಾಡೋಕೆ ಆಗೋಲ್ಲ.

ಒಬ್ಬ : ಥೂ ! ಬೆತ್ತಲೆ ಯಾಕೆ ತಿರುಗಾಡಬೇಕು ?
ಇನ್ನೊಬ್ಬ : ಇಂಥ ಕಾರಣ ಅಂತ ಏನೂ ಇಲ್ಲ.
ಒಬ್ಬ : ಮತ್ತೆ-ಹಾಗೆಲ್ಲ ಬೆತ್ತಲೆ ತಿರುಗಾಡಬಾರದು ಅಷ್ಟೆ.
ಇನ್ನೊಬ್ಬ : ಛೆ ! ನಮ್ಮ ಮನೆ ಅಂದಮೇಲೆ ನಮಗೆ ಬೇಕಾದರೆ ಬೆತ್ತಲೆ ತಿರುಗಾಡೋಕೆ ಆಗಬೇಕು. ಗಾಜಿನ ಗೋಡೆ ಇದ್ದರೆ ಅದು ಸಾಧ್ಯವಿಲ್ಲ.
ಒಬ್ಬ : ಯಾಕೆ ಸಾಧ್ಯವಿಲ್ಲ ?
ಇನ್ನೊಬ್ಬ : ಥೂ ! ಎಲ್ಲ ಕಾಣುತ್ತೆ. ನಮಗೇನು ನಾಚಿಕೆ,—ಗೀಚಿಕೆ ಇಲ್ಲವೆ ?
ಒಬ್ಬ : ನಿಜ ಗಾಜಿನ ಗೋಡೆ ಇದ್ದರೆ ನಮಗೆ ನಾಚಿಕೆ ಆಗೋ ಅಂಥಾ ಕೆಲಸ ಮಾಡೋಕೆ ಆಗೋಲ್ಲ.
ಇನ್ನೊಬ್ಬ : ನೋಡಿದೆಯಾ !
ಒಬ್ಬ : ಆದರೂ–ಗಾಜಿನ ಗೋಡೆ ಇಲ್ಲದೆ ಇದ್ದರೂ, ನಾಚಿಕೊಂಡು ನಾಚಿಕೊಂಡು ಮಾಡೋ ಕೆಲಸ ಯಾಕೆ ಮಾಡಬೇಕು ? ಕೆಟ್ಟ ಕೆಲಸ ಎಲ್ಲೂ ಮಾಡಬಾರದು.
ಇನ್ನೊಬ್ಬ : ಅದರಲ್ಲಿ ಕೆಟ್ಟದ್ದೇನು ಮಹಾ. ಎಲ್ಲರೂ ಮಾಡ್ತಾರೇನೊ.
ಒಬ್ಬ : ನಿಮಗೆ ಕೆಟ್ಟದ್ದಲ್ಲ ಅನ್ನಿಸಿದರೆ ನಾಚಿಕೆ ಯಾಕೆ ?
ಇನ್ನೊಬ್ಬ ; ಆದರೂ–ಅರೆ ಸರಿಯಾಗಿ ಹಿಡಕೊ. ಒಟ್ಟಿನಲ್ಲಿ ನಮ್ಮ ಮನೆಗೆ ಇಂತಹ ಗೋಡೆ ಬೇಡ. ನನಗೇನೋ ಯಾರೂ ಗಾಜಿನ ಗೋಡೆ ಕಟ್ಟಿಸಿಕೊಳ್ಳೊಲ್ಲ ಅನ್ನಿಸುತ್ತೆ.
ಒಬ್ಬ ; ಹೌದು. ಜೋಡಿಸಿಕೊಳ್ಳೋದೇ ಸುಲಭ ಅಲ್ಲವಾ ?
ಇನ್ನೊಬ್ಬ : ಜೋಡಿಸಿಕೊಂಡುಬಿಟ್ಟರೆ ಒಳಗೆ ಕಾಣಿಸುವುದಿಲ್ಲವೆ ?
ಒಬ್ಬ : ಕಾಣದೇ ಇರುತ್ತೆಯೆ ? ಗಾಜು ಅಂದ ಮೇಲೆ....
ಇನ್ನೊಬ್ಬ : ಗಾಜು ಅಂದ ಮೇಲೆ ಗೋಡೆ ಅಂತ ಆಗೋಲ್ಲ.

ಒಬ್ಬ : ಅಂದರೆ ?

ಇನ್ನೊಬ್ಬ : ಅಂದರೆ ಇದನ್ನ ನಾವು ಗೋಡೆ ಅಂತ ಮಾರೋಕ್ಕಾಗೋಲ್ಲ.

ಒಬ್ಬ : ಪ್ರಯತ್ನ ಮಾಡಬೇಕು.

ಇನ್ನೊಬ್ಬ : ಈಗ ನಿಮ್ಮ ಮನೇಲಿ ಗಾಜಿನ ಗೋಡೆ ಇದೆಯಾ ?

ಒಬ್ಬ : ಇಲ್ಲ ?

ಇನ್ನೊಬ್ಬ : ಅಷ್ಟೇ ಅಲ್ಲ, ಯಾರ ಮನೇಲೂ ಇರೋಲ್ಲ.

ಒಬ್ಬ : ಯಾಕೆ ಇರೋಲ್ಲ ? ಇರಲೇಬೇಕು.

ಇನ್ನೊಬ್ಬ : ನೀನು ನೋಡಿದೀಯೇನು ?

ಒಬ್ಬ : ನೋಡಿಲ್ಲದೆ ಇದ್ದರೆ ಏನು ? ಬೇರೆ ದೇಶದಲ್ಲಿ ಇರಬಹುದು ?

ಇನ್ನೊಬ್ಬ : ಹೌದಾ ? ಬೇರೆ ದೇಸದಲ್ಲಿ ಗಾಜಿನ ಗೋಡೆ ಇರುತ್ತಾ ?

ಒಬ್ಬ : ಓಹೋ ಬೇಕಾದ ಹಾಗೆ ಇದೆ.

ಇನ್ನೊಬ್ಬ : ಹಾಗಾದರೆ ಅದು ಒಳ್ಳೆ ಐಡಿಯಾನೇ.

ಒಬ್ಬ : ಹೌದೇ ಹೌದು. ಗೋಡೆ ಬೇಕೀ ಗೋಡೆ.

ಇನ್ನೊಬ್ಬ : ಗೋಡೆ ಗೋಡೆ ಗರವಾಗರಂ ಗೋಡೆ.

ಒಬ್ಬ : ಗೋಡೆ ಬೇಕೀ–ಲೋ. ಹುಚ್ಚು ತಾಳೋ ಸ್ವಲ್ಪ.

ಇನ್ನೊಬ್ಬ : ಈಗ ಏನು ?

ಒಬ್ಬ : ಏನಿಲ್ಲ ಒಂದು ಬೀಡಿ ಹಚ್ಚುತೀನಿ.

[ಒಂದು ಕೈಯಿಂದ ಜೇಬಿನಿಂದ ಬೀಡಿ ತೆಗೆದು ಬಾಯಲಿಟ್ಟು ಬೀಡಿ-ಕಟ್ಟು ಜೇಬಿನಲ್ಲಿಟ್ಟು ಒಂದು ಬೆಂಕಿ-ಪೆಟ್ಟಿಗೆ ತೆಗೆದು ಬಹಳ ಕಷ್ಟ ಪಟ್ಟು ಒಂದು ಕೈಯಲ್ಲೇ ಹಚ್ಚಕೊಳ್ಳುತ್ತಾನೆ. ಇನ್ನೊಬ್ಬ ತಾನೂ ಬೀಡಿ-ಕಟ್ಟು ತೆಗೆದು ಒಂದನ್ನು ಬಾಯಲ್ಲಿಟ್ಟುಕೊಂಡು ಬೆಂಕಿಪೆಟ್ಟಿಗೆ ಹುಡುಕುತ್ತಾನೆ.]

ಇನ್ನೊಬ್ಬ : ಎಲ್ಲಿ ನನಗೆ ಸ್ವಲ್ಪ ಕಡ್ಡಿ ಕೊಡು.

[ಒಬ್ಬ ಉರಿಯುತ್ತಿದ್ದ ಕಡ್ಡಿಯನ್ನೇ ಇವನ ಕಡೆ ಒಡ್ಡುತ್ತಾನೆ. ಇನ್ನೊಬ್ಬ, ಕೈ ನೀಡುತ್ತಾನೆ. ಆದರೆ ಇವರ ಕೈಗಳು ಗಾಜಿನ ಬೇರೆ ಬೇರೆ ಕಡೆ ಇವೆ.]

ಇನ್ನೊಬ್ಬ : ಥೂ. ಆಕಡೆ ಕೊಟ್ಟರೆ ಹೇಗೋ ?

ಒಬ್ಬ : ನಾನೇನು ಮಾಡಲಿ ? ಈ ಕಡೆ ಕೈ ಬಿಟ್ಟರೆ....

ಇನ್ನೊಬ್ಬ : ಬೇಡ, ಬೇಡ, ಗೋಡೆ ಮುರಿದುಹೋದೀತು. ಪೆಟ್ಟಿಗೆ ಕೊಡು.

[ಪೆಟ್ಟಿಗೆಯನ್ನೂ ಹಾಗೇ ಕೊಡಲು ಹೋಗಿ ಒದ್ದಾಡಿ ಕೊನೆಗೆ]

ಒಬ್ಬ : ಅಯ್ಯೋ ಆದಾಗೊಲ್ಲ, ಹಿಡಿ, ಎಸೀತೀನಿ.

[ಗಾಜಿನ ಮೇಲಿನಿಂದ ಎಸೆಯುತ್ತಾನೆ. ಅದು ಇನ್ನೊಬ್ಬನಿಂದ ಸ್ವಲ್ಪ ದೂರ ಹೋಗಿ ಬೀಳುತ್ತದೆ. ಅವನು ಪೆಟ್ಟಿಗೆಯನ್ನು ತೆಗೆದುಕೊಳ್ಳಲು ಪ್ರಯತ್ನಿಸುತ್ತಾನೆ. ಬಗ್ಗಿ ತೆಗೆಯಲು ಹೋದಾಗ ಗಾಜು ಓಲೆ ಎಲ್ಲಿ ಒಡೆದು ಹೋಗುವುದೋ ಎಂಬ ಹೆದರಿಕೆಯಿಂದ ಇಬ್ಬರೂ ತತ್ತರಿಸಿ ಮತ್ತೆ ನಿಲ್ಲುತ್ತಾರೆ.]

ಒಬ್ಬ : ತಾಳೋ, ನಾನು ತಕ್ಕೊಂಡಿತೀನಿ.

[ಕಾಲಿನಲ್ಲೆ ತೆಗೆದುಕೊಳ್ಳುವ ಪ್ರಯತ್ನ ಮಾಡುತ್ತಾನೆ. ಅದು ಆಗುವುದಿಲ್ಲ. ಹೀಗೆಯೇ ಕಡ್ಡಿ ತೆಗೆದುಕೊಳ್ಳುವ ಪ್ರಯತ್ನದಲ್ಲಿ ಪೆಟ್ಟಿಗೆಯ ಮೇಲೆ ಇಬ್ಬರೂ ಕಾಲಿಟ್ಟು ಪೆಟ್ಟಿಗೆಯನ್ನು ಜಜ್ಜಿಬಿಡುತ್ತಾರೆ. ಕಡ್ಡಿಗಳು ಚೆಲ್ಲಾಪಿಲ್ಲಿಯಾಗುತ್ತವೆ. ಒಂದೊಂದೇ ಕಡ್ಡಿಯನ್ನು ಕಾಲಿನಿಂದ ಎತ್ತುವ ಪ್ರಯತ್ನ ಮಾಡುತ್ತಾರೆ.

ಒಬ್ಬನು ಇಷ್ಟರ ಮಧ್ಯೆ ಸಮಯ ಸಿಕ್ಕಾಗ ತನ್ನ ಬೀಡಿ ಸೇದುವ ಪ್ರಯತ್ನ ಮಾಡುತ್ತಾನೆ.]

ಒಬ್ಬ : ಥತ, ನನ್ನ ಬೀಡೀನು ಆರಿಹೋಯಿತಂ.

[ ಕೊನೆಗೆ ಒಬ್ಬನು ಒಂದು ಕಡ್ಡಿಯನ್ನು ಕಾಲಿನಿಂದ ಎತ್ತಿಯೇ ಬಿಡುತ್ತಾನೆ. ಅದನ್ನು ಒಂದು ಕೈಯಲ್ಲಿ ಹಿಡಿದು ಕಡ್ಡಿ ಎತ್ತುವ ಪ್ರಯತ್ನದಲ್ಲಿ ಬಿದ್ದುಹೋದ ಬೀಡಿಗೆ ಬದಲಾಗಿ ಮತ್ತೊಂದನ್ನು ಜೇಬಿನಿಂದ ತೆಗೆದು ಹಚ್ಚಲು ನೋಡಿದಾಗ ತನ್ನ ಬಳಿ ಕಡ್ಡಿಗೀರುವ ಮದ್ದಿಲ್ಲದಿರುವುದನ್ನು ಗಮನಿಸಿ, ಜಜ್ಜಿ ಬಿದ್ದಿರುವ ಪೆಟ್ಟಿಗೆಯ ಕಡೆಗೆ ಹೊರಡುತ್ತಾನೆ. ಇನ್ನೊಬ್ಬನೂ ಆಸೆಯಿಂದ ಸಹಾಯ ಮಾಡುತ್ತಾನೆ. ಒಬ್ಬನು ಪೆಟ್ಟಿಗೆ ಎತ್ತಲು ಪ್ರಯತ್ನಿಸುತ್ತಿರುವಾಗ ಇನ್ನೊಬ್ಬನು ಕಡ್ಡಿ ಎತ್ತುವ ಪ್ರಯತ್ನ ಮಾಡುತ್ತಾನೆ. ಪೆಟ್ಟಿಗೆ ಸಿಗದೆ ಕೊನೆಗೆ ಒಬ್ಬನು ತನಗೆ ಸಿಕ್ಕಿದ ಕಡ್ಡಿಯನ್ನು ಗಾಜಿನ ಮೇಲೆಯೇ ಗೀರುವ ಪ್ರಯತ್ನ ಮಾಡುತ್ತಾನೆ.]

ಒಬ್ಬ : ಥತ, ಏನು ಹಾಳು ಕಡ್ಡಿಗಳೋ !

ಇನ್ನೊಬ್ಬ : ನನಗೂ ಬೀಡಿ ಇಲ್ಲ. ಥತ ಏನು ಶನೀನೋ ನೀನು. ನನಗೆ ಸರಿಯಾಗಿ ಸಿಕ್ಕಿದೆ ಬಿಡು.

ಒಬ್ಬ : ಸುಮ್ಮನೆ ನನ್ನ ಯಾಕೆ ಬೈಯುತ್ತೀಯೋ ? ನನ್ನ ಪಾಡಿಗೆ ನಾನು ಸುಮ್ಮನೆ ಮಲಗಿದ್ದೆ. ನನ್ನ ಎಬ್ಬಿಸಿ ಕರೆದು ಕಷ್ಟ ಕೊಟ್ಟು ಈಗ ನನ್ನನ್ನೇ ಬೈಯುತ್ತಾ ಇದೀಯಾ ?

ಇನ್ನೊಬ್ಬ : ಕರೆದಾಗ ಬರೋಲ್ಲ ಅನ್ನಬೇಕಿತ್ತು.

ಒಬ್ಬ : ಹುಂ, ಅನ್ನಬೇಕಿತ್ತು. ಬುದ್ಧಿ ಇರಲಿಲ್ಲ. ನಿನ್ನ ನೋಡಿದಾಗಲೇ ಅನ್ನಿಸಿತು.

ಇನ್ನೊಬ್ಬ : ಮತ್ತೆ ಯಾಕೆ ಬಂದೆ ?

ಒಬ್ಬ : ಬಂದ ಬುದ್ದಿ ಇರಲಿಲ್ಲ ಅಂದೆನಲ್ಲ. ಜೊತೆಗೆ ಒಂದು ನಾಲ್ಕು ಕಾಸು ಸಿಗುತ್ತೇ ಅಂತ.

ಇನ್ನೊಬ್ಬ : ಅಷ್ಟು ಬೇಜಾರಾದ್ರೆ ಈಗಲೂ ಹೋಗಬಹುದಲ್ಲ ನೀನು.

ಒಬ್ಬ : ಹೋದರೆ ಈ ಗಾಜು ?

ಇನ್ನೊಬ್ಬ : ನಿನಗೆ ಯಾಕೆ ಅದರ ಚಿಂತೆ ? ನಾನೇ ಅಲ್ಲವಾ ಅದನ್ನು ಮೊದಲು ನೋಡಿದ್ದು ?

ಒಬ್ಬ : ಹೂಂ, ಆದರೆ ನನ್ನ ಸಹಾಯ ಇಲ್ಲದೆ ಅದನ್ನು ಎತ್ತಿ ಕೊಂಡು ಬರೋಕ್ಕೆ ಆಗುತಾ ಇರಲಿಲ್ಲವಲ್ಲ ?

ಇನ್ನೊಬ್ಬ : ನೀನು ಅಲ್ಲದೆ ಇದ್ದರೆ ಬೇರೆ ಯಾರಾದರೂ ಆಗಿರೋರು.

ಒಬ್ಬ : ಹಾಗಾದರೆ ನನ್ನ ಯಾಕೆ ಕರೆದೆ ?

ಇನ್ನೊಬ್ಬ : ನಾನೇನು ನಿನ್ನೇ ಕರೆದನೇ ? ನೀನೇನು ನನಗೆ ಗುರುತೇ ? ನಿನ್ನ ಹೆಸರೂ ನನಗೆ ಗೊತ್ತಿಲ್ಲ.

ಒಬ್ಬ : ನಿನ್ನ ಹೆಸರು ನನಗೂ ಗೊತ್ತಿಲ್ಲ.

ಇನ್ನೊಬ್ಬ : ಅಂತಹದರಲ್ಲಿ ನಿನ್ನ ನಾನು ಕೂಗಿದೆನೇ ?

ಒಬ್ಬ : ಮತ್ತೆ ಯಾರನ್ನು ಕೂಗಿದೆ ?

ಇನ್ನೊಬ್ಬ : ಯಾರನ್ನೂ ಇಲ್ಲ ನನಗಿ ಬೇಜಾರಾಗಿತ್ತು. ಜೊತೆಗೆ ಯಾರಾ ದರೂ ಬೇಕಿತ್ತು ಕೂಗಿದೆ.

ಒಬ್ಬ : ಹಾಂ ನೋಡಿದೆಯಾ. ಈ ಗಾಜು ಹೊರೋದಕ್ಕೆ ಒಬ್ಬರು ಜೊತೆಗೆ ಬೇಕಿತ್ತು.

ಇನ್ನೊಬ್ಬ : ಗಾಜು ಹೋರೋಕ್ಕೆ ಅಂತ ಅಲ್ಲ. ಸುಮ್ಮನೆ ಜೊತೆಗೆ. ನಾನು ಅದಕ್ಕೆ ದೇವಸ್ಥಾನಕ್ಕೆ ಬಂದದ್ದು.

ಒಬ್ಬ : ಯಾತಕ್ಕೆ ?

ಇನ್ನೊಬ್ಬ : ಬಹಳ ದಿನದಿಂದ ಬೇಜಾರಾಗಿತ್ತು. ಒಂಟೊಂಟಿ ಅಲೆದು. ಹಬ್ಬದಲ್ಲಿ ದೇವಸ್ಥಾನಕ್ಕೆ ಬಂದರೆ ಪುಣ್ಯ ಇದ್ದರೆ ಯಾರಾದರೂ ಗುರುತಿರೋರು ಸಿಗುತ್ತಾರೆ ಅಂತ ಅದಕ್ಕೆ ಬಂದೆ.

ಒಬ್ಬ : ಹಾಗಾದರೆ ಗಾಜು ಯಾಕೆ ತಗೊಂಡು ಬಂದೆ, ದೇವಸ್ಥಾನಕ್ಕೆ ?

ಇನ್ನೊಬ್ಬ : ಅದನ್ನು ನಾನು ತಂದೆನೆ ? ಅದು ಅಲ್ಲಿ ಸಿಕ್ಕಿತು.

ಒಬ್ಬ ಅಂದರೆ

ಇನ್ನೊಬ್ಬ : ಬರೋದೇನೋ ಬಂದೇ : ಅಲ್ಲಿ ಬರೋ ಹೊತ್ತಿಗೆ ಬಹಳ ಸುಸ್ತಾಗಿತ್ತು. ಮಲಗಿಬಿಟ್ಟೆ

ಒಬ್ಬ : ಗುರುತಿನೋರು ಸಿಕ್ಕರಾ ?

ಇನ್ನೊಬ್ಬ : ಒಳಗೆ ಹೋಗಿದ್ದರೆ ಸಿಗೋರೋ ಏನೋ ?

ಒಬ್ಬ : ಓ, ನೀನು ಒಳಗೂ ಹೋಗಲಿಲ್ಲವಾ ?

ಇನ್ನೊಬ್ಬ : ಇಲ್ಲ, ಸುಸ್ತಾಗಿ ಮಲಗಿಬಿಟ್ಟೆನಲ್ಲಾ. ಎದ್ದಾಗ ಎಲ್ಲರೂ ಹೊರಟು ಹೋಗಿದ್ದರು.

ಒಬ್ಬ : ಗಾಜು ?

ಇನ್ನೊಬ್ಬ : ಎದ್ದು ನೋಡಿದರೆ ನನ್ನ ಬೆನ್ನು ಹಿಂದೆ ಈ ಗಾಜು! ಎದುರಿಗೆ ಚೂರು ಪಾರು ಹಣ್ಣು ಪ್ರಸಾದ.

ಒಬ್ಬ : ಹೌದಾ ? ಪ್ರಸಾದ ನಿನ್ನ ಹತ್ತಿರಕ್ಕೆ ಬಂದು ಬಿದ್ದಿತಾ ? ಅದು ನೀನು ಒಳಗೆ ಹೋಗದೆ ?

ಇನ್ನೊಬ್ಬ : ಹೂಂ ಯಾರೋ ನನ್ನನ್ನು ಭಿಕ್ಷುಕ ಅಂದುಕೊಂಡು ಎಸೆದು ಹೋಗಿರಬೇಕು. ಅಥವಾ ಪ್ರಸಾದ ಹಳಸಿ ಹೋಗಿತ್ತೋ ಏನೋ ?

ಒಬ್ಬ : ಯಾಕೆ ನೀನು ತಿನ್ನಲಿಲ್ಲವಾ ?

ಇನ್ನೊಬ್ಬ : ತಿಂದೆ. ಬಹಳ ಹಸಿವಾಗಿತ್ತು. ಏನೂ ತಿಳಿಯಲಿಲ್ಲ.

ಒಬ್ಬ : ಗಾಜು ?

ಇನ್ನೊಬ್ಬ : ನಾನು ಹೇಳಿದನಲ್ಲಾ! ನನ್ನ ಹಿಂದೇ ಇತ್ತು ಅಂತ!

ಒಬ್ಬ : ಅಲ್ಲಿಗೆ ಹೇಗೆ ಬಂತೂ ಅಂತ ?

ಇನ್ನೊಬ್ಬ : ಯಾರೋ ಬಿಟ್ಟು ಹೋಗಿದ್ದರು!

ಒಬ್ಬ : ಯಾಕೆ ಬಿಟ್ಟು ಹೋದರು ?

ಇನ್ನೊಬ್ಬ : ನನ್ನ ಕೇಳಿದರೆ ನಾನು ಏನು ಹೇಳಲಿ ? ಅವರು ಬಿಟ್ಟು ಹೋದಾಗ ನಾನು ನಿದ್ದೆ ಮಾಡುತ್ತಿದ್ದೆನಲ್ಲ!

ಒಬ್ಬ : ಅಯ್ಯೋ ಅದಲ್ಲವೋ ನಾನು ಕೇಳಿದ್ದು. ಅದೆಷ್ಟು ಸಲ ಹೇಳ್ತೀಯಾ ನಿದ್ದೆ ಹೋದೇ ಅಂತ.

ಇನ್ನೊಬ್ಬ : ಮತ್ತೆ ನೀನು ಮಾತಾಡೋದು ಹಾಗಿದೆ.

ಒಬ್ಬ : ಸ್ವಲ್ಪ ನನ್ನ ಮಾತು ಸರಿಯಾಗಿ ಕೇಳೋ ಯಾರೋ ಬಂದು ಗಾಜು ಬಿಟ್ಟುಹೋದರಲ್ಲ, ಅವರಿಗೇನು ಹುಚ್ಚೆ ?

ಇನ್ನೊಬ್ಬ : ನಾನು ಅವರನ್ನು ನೋಡಲೇ ಇಲ್ಲವಲ್ಲ ! ನಾನು

ಒಬ್ಬ : ಹಾಂ—ಹಾಂ ನಿದ್ದೆ ಮಾಡುತ್ತಿದ್ದೆ.

ಇನ್ನೊಬ್ಬ : ಹೂಂ ನಾನು....

ಒಬ್ಬ : ಯಾಕೆ ಗಾಜು ಬಿಟ್ಟು ಹೋದರು ಅಂತ ಪ್ರಶ್ನೆ.

ಇನ್ನೊಬ್ಬ : ಯಾರೋ ಬಡವರಿಗೆ ಧಾನ್ಯ ಮಾಡಬೇಕೂಂತ ಬಿಟ್ಟು ಹೋಗಿರಬೇಕು.

ಒಬ್ಬ : ಗಾಜು ಏನಾದರೂ ಒಡೆದುಹೋಗಿತ್ತೇ ಅಂತ.

ಇನ್ನೊಬ್ಬ : ಯಾಕೆ ಒಡೆದು ಹೋಗಿರಬೇಕು ?

ಒಬ್ಬ : ಒಡೆಯುದೆ ಇದ್ದರೆ ದಾನ ಮಾಡೋಕ್ಕೆ ಅವರೇನು ಹುಚ್ಚರೆ ?

ಇನ್ನೊಬ್ಬ : ನನಗೇನೋ ಗೊತ್ತು ? ಅವರನ್ನು ನಾನು ನೋಡಲೇ ಇಲ್ಲವಲ್ಲ ? ನಾನು....

ಒಬ್ಬ : ನಿದ್ದೆ ಮಾಡುತ್ತಿದ್ದೆ. ಸ್ವಲ್ಪ ತಾಳು. ಗಾಜು ಒಡೆದುಹೋಗಿದೆಯೋ ಏನೋ ನೋಡೋಣ.

ಇನ್ನೊಬ್ಬ : ಹೌದಲ್ಲ ಒಡೆದು ಹೋಗಿರಬಹುದು.

ಒಬ್ಬ : ಹೌದು, ಅದಕ್ಕೆ ಬಿಸಾಕಿಬಿಟ್ಟರೋ ಏನೋ.

ಇನ್ನೊಬ್ಬ : ಅಯ್ಯೋ, ಒಡೆದಿದ್ದರೆ ಮಾರೋಕ್ಕೆ ಆಗೋಲ್ಲ,

ಒಬ್ಬ : ನೋಡೋಣ ತಾಳು

[ಗಾಜನ್ನು ನೆಲದ ಮೇಲೆ ನಿಲ್ಲಿಸುವರು. ಒಬ್ಬ ಕೈ ಬಿಟ್ಟು ನೋಡಲು ಹೊರಡುವನು. ಇನ್ನೊಬ್ಬ ಹಿಡಿದಿದ್ದರೂ ಗಾಜು ಓಲುತ್ತದೆ.]

ಇನ್ನೊಬ್ಬ : ಲೋ, ಹಿಡಿಕೊಳ್ಳೋ, ಗಾಜು ಬಿದ್ದು ಹೋದೀತು. ಬಿದ್ದು ಹೋದರೆ ಆಯಿತು.

[ಒಬ್ಬ ಅವಸರವಾಗಿ ಗಾಜನ್ನು ಹಿಡಿಯುವನು.]

ಒಬ್ಬ : ಮೊದಲೇ ಒಡೆದಿದೆಯೋ ಏನೋ ?

ಇನ್ನೊಬ್ಬ : ನೋಡೋಣ ಅಂದೆಯಲ್ಲ.

ಒಬ್ಬ : ಹೂಂ ನೋಡೋಣ ಹಿಡಕೊಂಡೇ ಇರು.

[ಒಬ್ಬ ಒಂದು ಕಡೆಯಿಂದ ಗಾಜಿನ ಮೇಲೆ ಕೈಯಿಟ್ಟುಕೊಂಡೇ ಮಕ್ಕಳು ಗೋಡೆ ಹಿಡಿದುಕೊಂಡು ನಡೆಯುವಂತೆ ಗಾಜನ್ನು ಪರೀಕ್ಷಿಸುತ್ತಾನೆ. ಇನ್ನೊಬ್ಬ ಇನ್ನೊಂದು ಕಡೆ ಹಾಗೆಯೇ ಮಾಡುತ್ತಾನೆ. ಇವರಿಬ್ಬರ ಮಧ್ಯೆ

ಗಾಜು ಇತ್ತಲೂ ಅತ್ತಲೂ ಓಲುತ್ತದೆ. ಗಾಜಿನ ಒಂದು ಕಡೆ ಇನ್ನೊಬ್ಬ ತನ್ನ ಮುಖವನ್ನು ಗಾಜಿನ ಮೇಲೆ ಒತ್ತಿ ಹಿಡಿದು ಲೋ ಎಂದು ಕಿರುಚುತ್ತಾನೆ. ಅವನ ಮೂಗು ಮುಖ ಗಾಜಿನ ಮೂಲಕ ಚಪ್ಪಟೆಯಾಗಿ ಕಾಣುತ್ತದೆ. ಒಬ್ಬ ಆ ಮುಖವಿರುವಲ್ಲಿ ಗಾಜಿನ ಇನ್ನೊಂದು ಕಡೆಯಿಂದ ಹೊಡೆಯುತ್ತಾನೆ. ಇನ್ನೊಬ್ಬ ತಟಕ್ಕನೆ ಹಿಂಜರಿದು ಒಂದು ಕೈಯಿಂದ ಮೂಗು ಉಜ್ಜಿಕೊಳ್ಳುತ್ತಾನೆ. ಅವನ ಕಡೆ ಗಾಜು ಓಲುತ್ತದೆ. ಮತ್ತೆ ಹಿಡಿಯುತ್ತಾನೆ]

ಇನ್ನೊಬ್ಬ : ಲೇ, ಹಾಗೆಲ್ಲ ಹೊಡೆಯಬೇಡವೊ........ಗಾಜು ಒಡೆದು ಹೋದೀತು.

ಒಬ್ಬ : ಮೊದಲೇ ಒಡೆದು ಹೋಗಿತ್ತೊ ಏನೋ ?

ಇನ್ನೊಬ್ಬ : ಅದನ್ನೇ ಅಲ್ಲವಾ, ಆಗಲಿಂದಾ ನೋಡತಾ ಇರೋದು ?

ಒಬ್ಬ : ನೀನು ಮಕ್ಕಳ ತರಾ ಆಡುತಾ ಇರು...

[ಇನ್ನೊಬ್ಬ ನಾಲಗೆ ಮುಂದೆ ಚಾಚಿ, ಮತ್ತೆ ಗಾಜಿನ ಮೇಲೆ ಮುಖ ಊರುತ್ತಾನೆ. ಒಬ್ಬ ಮತ್ತೆ ಹೊಡೆಯಲು ಕೈ ಹಿಂದಕ್ಕೆ ಬೀಸುತ್ತಾನೆ. ಇನ್ನೊಬ್ಬ ತಟಕ್ಕನೆ ಮುಖ ಹಿಂದಕ್ಕೆ ತೆಗೆದುಕೊಂಡು ಹಲ್ಲು ಕಿರಿಯುತ್ತಾನೆ]

ಇನ್ನೊಬ್ಬ : ನನ್ನಿಷ್ಟ ಬಂದ ಹಾಗೆ ನಾನು ನೋಡುತೀನಿ. ನೀನು ಯಾಕೆ ನನ್ನನ್ನು ಹೊಡೀಬೇಕು ?

ಒಬ್ಬ : ಅದು ನನ್ನಿಷ್ಟ.

ಇನ್ನೊಬ್ಬ : ಹೂಂ ನಿನ್ನಿಷ್ಟ ಅಂತ ಮಕ್ಕಳ ಹಾಗೆ ಆಡಿದರೆ—

ಒಬ್ಬ : ನಾನು ನಿನ್ನ ಮಕ್ಕಳ ಹಾಗೆ ಆಡಬೇಡ ಅಂದರೆ—

ಇನ್ನೊಬ್ಬ : ನಾನು ಆಡಿದರೆ ಪರವಾಗಿಲ್ಲ. ನೀನು ಗಾಜನ್ನೇ ಒಡೆದು ಹಾಕುತಾ ಇದ್ದೆಯಲ್ಲಾ.

ಒಬ್ಬ : ಅದು ಮೊದಲೇ ಒಡೆದುಹೋಗಿತ್ತೊ, ಏನೋ !

ಇನ್ನೊಬ್ಬ : ನೀನು ಹೊಡೆದಾಗ ಅದು ಒಡೆದುಹೋದರೆ, ಮೊದಲೇ ಅದು ಒಡೆದುಹೋಗಿದ್ದರೂ ಗೊತ್ತಾಗೊಲ್ಲ.

ಒಬ್ಬ : ಹಾಗೆ ಒಡೆದು ಹೋದರೆ ಮೊದಲೇ ಒಡೆದು ಹೋಗಿತ್ತೊ, ಇಲ್ಲವೋ ಅನ್ನೊ ಪ್ರಶ್ನೆ ಯಾಕೆ ಏಳುತ್ತೆ ?"

ಇನ್ನೊಬ್ಬ : ನನಗೆ ಏನು ಗೊತ್ತು ? ನೀನು ಮೊದಲು ಆ ಪ್ರಶ್ನೆ ಕೇಳಿದ್ದು.

ಒಬ್ಬ : ಒಡೆದು ಹೋದರೆ ಮಾರೋಕೆ ಆಗೋಲ್ಲ.

ಇನ್ನೊಬ್ಬ : ಥೂ, ಮಾರಿಬಿಡೋಣ. ಆಗೊಲ್ಲ ಅಂತ ಕೂತರೆ ಆಗೋದಿಲ್ಲ. ಇನ್ನು ಹಾಳು ಇದನ್ನು ಹೊತ್ತುಕೊಂಡು ತಿರುಗಾಡೊಕ್ಕಾಗೊಲ್ಲ.

ಒಬ್ಬ : ತಿರುಗಾಡೋಕ್ಕೆ ಆಗೊಲ್ಲ ಅಂತನ್ನೋದೇ ಮುಖ್ಯವಾದರೆ ಇಲ್ಲೆ ಬಿಸಾಕಿಬಿಡಬಹುದು.

ಇನ್ನೊಬ್ಬ : ಹಾಗೆ ಮಾಡಿದರೆ ದುಡ್ಡು ಸಿಗೊಲ್ಲ.

ಒಬ್ಬ : ಅಂದರೆ ದುಡ್ಡಿಗೋಸ್ಕರ ಮಾರಬೇಕು.

ಇನ್ನೊಬ್ಬ : ಹೂಂ ಅದು ಹೌದು.

ಒಬ್ಬ : ಹೂಂ ಮಾರಿದಾಗ ಅರ್ಧ ದುಡ್ಡು ನನಗೆ ಕೊಡಬೇಕು.

ಇನ್ನೊಬ್ಬ : ಆಮೇಲೆ ನೀನು....

ಒಬ್ಬ : ನನ್ನ ದಾರಿ ಹಿಡೀತೀನಿ.

ಇನ್ನೊಬ್ಬ : ಒಬ್ಬನೇ ?

ಒಬ್ಬ : ಹೂಂ ಒಬ್ಬನೇ. ನನ್ನ ದಾರಿ ನನಗೆ, ನಿನ್ನ ದಾರಿ ನಿನಗೆ.

ಇನ್ನೊಬ್ಬ : ಹೌದೇ ?

ಒಬ್ಬ : ಹೂಂ ನನಗೆ ಒಂಟಿ ಇದ್ದು ಇದ್ದು ಅಭ್ಯಾಸವಾಗಿಹೋಗಿದೆ.

ಇನ್ನೊಬ್ಬ : ಬೇಜಾರು ಆಗೊಲ್ಲವಾ ?

ಒಬ್ಬ : ಒಂದೊಂದು ಸರತಿ ಆಗುತ್ತೆ.

ಇನ್ನೊಬ್ಬ : ಆಗ ಏನು ಮಾಡುತೀ ?

ಒಬ್ಬ : ಆಗ ಯಾವುದಾದರೂ ಸಂತೆಗೋ ಜಾತ್ರೆಗೋ ಹೋಗಿ ಜನಗಳ ಮಧ್ಯೆ ಇದ್ದು ಬರುತೀನಿ.

ಇನ್ನೊಬ್ಬ : ಹಾಗೆ ಇದ್ದು ಬಂದುಬಿಟ್ಟರೆ ಒಂಟಿತನ ಹೋಗುತ್ತಾ?

ಒಬ್ಬ : ನನಗೆ ಅದಕ್ಕಿಂತ ಹತ್ತಿರ ಯಾರೂ ಬಂದೂ ಇಲ್ಲ: ಬರೋದೂ ಇಲ್ಲ.

ಇನ್ನೊಬ್ಬ : ಮತ್ತೆ ಬೇಜಾರು ಹೇಗೆ ಹೋಗುತ್ತೆ ?

ಒಬ್ಬ : ಅದಕ್ಕೇನು, ಜನಾನ್ನ ನೋಡಿದರೆ ಮತ್ತೆ ಒಂಟಿ ಇರೋಣ ಅನ್ನಿಸುತ್ತೆ.

ಇನ್ನೊಬ್ಬ : ಹಾಗೆ ಅನ್ನಿಸಿದೇಟಿಗೆ....

ಒಬ್ಬ : ಹೊರಟುಬಿಡುತೀನಿ. ಅಲ್ಲಿ ನೋಡು. ಯಾರೋ ಬರುತ್ತಿದ್ದಾರೆ. ಕೂಗು ! ಕೂಗು ! ಗೋಡೆ ಬೇಕೇ ಗೋಡೆ....

ಇನ್ನೊಬ್ಬ : ಗೋಡೆ ಬೇಕೇ ಗೋಡೆ.

[ಇಬ್ಬರೂ ಮತ್ತೆ ಗೋಡೆಯನ್ನೆತ್ತಿ ಹಿಡಿದು ಕೂಗುತ್ತಾರೆ. ರಂಗದ ಒಂದು ಕಡೆಯಿಂದ ಹೊಸಬರೊಬ್ಬರು ಬರುತ್ತಾರೆ. ಎಲ್ಲೋ ಹೋಗುತ್ತಿದ್ದವರು ಕುತೂಹಲದಿಂದ ನೋಡುತ್ತಾರೆ. ಕೇಳುತ್ತಿರುವವರು ಒಬ್ಬರೇ ಆದರೂ ಅವ ರೊಬ್ಬರನ್ನು ಉಳಿದು ಮಿಕ್ಕ ಪ್ರಪಂಚಕ್ಕೆಲ್ಲ ಕೇಳಿಸಬೇಕೇನೋ ಎನ್ನುವಂತೆ ಗಟ್ಟಿಯಾಗಿ ಇಬ್ಬರೂ ಕೂಗುತ್ತಾರೆ.]

ಒಬ್ಬ : ಗೋಡೆ ಬೇಕೇ ಗೋಡೆ....

ಇನ್ನೊಬ್ಬ : ಗರಮಾಗರಂ ಗೋಡೆ....

ಹೊಸಬ : ಏನದು ನೀವು ಮಾರುತಾ ಇರೋದು ?

ಒಬ್ಬ : ಗೋಡೆ.

ಹೊಸಬ : ಗೋಡೆ ?

ಒಬ್ಬ : ಹೂಂ ಕಾಣೊಲ್ಲವೆ ?

ಹೊಸಬ : ಗಾಜು ಕಾಣುತ್ತೆ....

ಒಬ್ಬ : ಅದೇ ಗೋಡೆ.

ಹೊಸಬ : ಗಾಜೇ ಗೋಡೇನೆ ?

ಇನ್ನೊಬ್ಬ : ಹೂಂ ಇದನ್ನೇ ಗೋಡೆಯ ತರಹ ಉಪಯೋಗಿಸಬಹುದು,

ಹೊಸಬ : ಕಾಣದೇ ಇರೋ ಗೋಡೆ ಕಟ್ಟಿಕೊಂಡು ರಾಜಸೂಯ ಯಾಗ ಮಾಡಬೇಕು ಅಷ್ಟೆ.

ಒಬ್ಬ : ಒಂದು ಸಲ ಕೊಂಡುಕೊಂಡು ಉಪಯೋಗಿಸಿದರೆ ಆಮೇಲೆ ಯಾವಾಗಲೂ ಗಾಜಿನ ಗೋಡೆ ಬೇಕು ಅಂತೀರಿ.

ಹೊಸಬ : ಏನು ಕಾಲ ಬಂತಪ್ಪ!

ಇನ್ನೊಬ್ಬ : ಹೌದಲ್ಲವೇ? ಕಾಲ ಬಹಳ ಕೆಟ್ಟುಹೋಯಿತು. ಅಕ್ಕಿಯ ಬೆಲೆ....

ಒಬ್ಬ : ಕಾಲದ ಬಗ್ಗೆ ಈಗ ಯಾಕೆ ಮಾತು ? ಗೋಡೆ ಬೇಕೇ ಗೋಡೆ. ಗಾಜಿನ ಗೋಡೆ.

ಹೊಸಬ : ಒಳ್ಳೆ ತಮಾಷೆ ಅಲ್ಲ, ಗಾಜನ್ನು ಮಾರುತ್ತೀರಲ್ಲ!

ಒಬ್ಬ : ಬೇಕಾ ಗೋಡೆ ?

ಹೊಸಬ : ಅಯ್ಯೋ ಬೇಡಪ್ಪ. ಇದೇನು ವಿಚಿತ್ರ ಅಂತ ನೋಡೋಕೆ ಬಂದೆ ಅಷ್ಟೆ ನನಗೆ ಯಾಕೆ ಗೋಡೆ ?

ಒಬ್ಬ : ಒಂದು ಸಲ ಕಟ್ಟಿಸಿ ನೋಡಿ.

ಹೊಸಬ : ಅಯ್ಯೋ ನಾವು ಯಾಕೆ ಕಟ್ಟಿಸುತೀವಿ, ಬಾಡಿಗೆ ಮನೆ ಯವರು ?

ಒಬ್ಬ : ಮನೆ ಬಾಡಿಗೆಯದಾದರೆ ಏನಂತೆ? ನಿಮ್ಮ ಖುಷಿ ಬಂದರೆ ನೀವು ಹಾಕ್ಕೋಬೇಕು.

ಹೊಸಬ : ಬೇಡಪ್ಪ, ತಿಂಗಳಿಗೆ ಸರಿಯಾಗಿ ಬಾಡಿಗೆ ಕೊಟ್ಟರೆ ಸಾಕಾಗಿದೆ. ಇದಕ್ಕೆಲ್ಲಿಂದ ತರೋದು ?

ಒಬ್ಬ : ಸರಿ ಬಿಡಿ, ಆದರೂ ಒಂದು ಸಲ ಪ್ರಯತ್ನ ಮಾಡಿ ನೋಡಬಹುದು. ನಾವೇನೂ ಜಾಸ್ತಿ ಕೇಳಲ್ಲ.

ಹೊಸಬ : ಬಿಟ್ಟಿ ಕೊಟ್ಟರೂ ಬೇಡ, ಗಾಜಿನ ಗೋಡೆ, ಸ್ನೇಹಿತರನ್ನೆಲ್ಲ ಕರೆದುಕೊಂಡು ಒಂದು ತೋರಿಸಬೇಕು.

ಇನ್ನೊಬ್ಬ : ಹೌದು ತೋರಿಸಿ, ಅವರಿಗೆ ಬೇಕೋ ಏನೋ ?

ಹೊಸಬ : ಅದಕ್ಕಲ್ಲ. ತಮಾಷೆ ಹೇಳಿದರೆ ಅವರು ಯಾರೂ ನಂಬೊಲ್ಲ. ಅವರೇ ನೋಡಬೇಕು. ಗಾಜಿನ ಗೋಡೆ ಅಂತ !

[ತಿರುಗಿ ಹೊರಡುತ್ತಾನೆ]

ಒಬ್ಬ : ಹಾಗೆ ಹಾಸ್ಯ ಯಾಕೆ ಮಾಡುತೀರಿ. ಗಾಜಿನ ಗೋಡೆ ಎಲ್ಲೆಲ್ಲೂ ಇರುತ್ತದೆ ವಿದೇಶದಲ್ಲಂತೂ ಈಗೆಲ್ಲ ಅದೇ.

[ಹೊಸಬ ಹೊರಟಿದ್ದವನು ಹಿಂತಿರುಗುತ್ತಾನೆ.]

ಹೊಸಬ : ಹೌದೇನು ?

ಒಬ್ಬ : ಹೂಂ! ಅದಕ್ಕೆ ಈಗ ಗಾಜೇ ಸಿಕ್ಕೊಲ್ಲ.

ಹೊಸಬ : ಗಾಜು ಸಿಗೋದು ಕಷ್ಟಾನೆ ?

ಒಬ್ಬ : ಹೂಂ ಅವಕ್ಕೇ ಅಲ್ಲವೆ ಅಕ್ಕೀಲಿ ಬರೀ ಕಲ್ಲು !

ಹೊಸಬ : ಅದಕ್ಕೂ ಇದಕ್ಕೂ ಏನು ಸಂಬಂಧ ?

ಒಬ್ಬ : ಹಿಂದೆ, ಅಕ್ಕೀಲಿ ಗಾಜಿನ ಚೂರು ಬೆರಸೋರು, ಈಗ ಗಾಜು ಎಲ್ಲಿ ತರೋದು ಅಂತ ಬೆಣಚುಕಲ್ಲು ಪುಡಿ ಮಾಡಿ ಹಾಕುತಾರೆ.

ಹೊಸಬ : ಹಾಗೇನು ?

ಒಬ್ಬ : ಹೂಂ ಈಗ ಕಲ್ಲಿನ ಪುಡಿಗೂ ಬ್ಲಾಕ ಮಾರ್ಕೆಟ್ಟು.

ಹೊಸಬ : ಅದೆಲ್ಲ ಗಾಜು ಸಿಗದೇ ಇರೋದರಿಂದ.

ಒಬ್ಬ : ಹೂಂ ಗಾಜಿನ ಗೋಡೆಗೆ ಅಷ್ಟು ಡಿಮ್ಯಾಂಡು.

ಹೊಸಬ : ನನಗೆ ಗೊತ್ತು ಇರಲಿಲ್ಲ.

ಒಬ್ಬ : ನಿಜ ನನಗೆ ಅದೇ ವ್ಯಾಪಾರ, ಅದರಿಂದ ಗೊತ್ತು.

ಹೊಸಬ : ಈ ಗೋಡೆಗೆ ಎಷ್ಟು ಬೀಳುತ್ತೆ ? ಕೊಂಡುಕೊಳ್ಳೋಕೆ ಆಗುತ್ತೋ ಇಲ್ಲವೊ...

ಒಬ್ಬ : ಕೊನೆಯ ಗೋಡೆ ನಿಮಗೆ ಕಮ್ಮಿಗೆ ಕೊಡುತೀನಿ. ಬೇಕೇನು? ತಗೊಂಡು ಹೋಗಿ.

ಹೊಸಬ : ಎಷ್ಟಕ್ಕೆ ?

[ಒಬ್ಬನು ಗಾಜನ್ನು ಅವರ ಕಡೆಗೆ ಓಲಿಸುತ್ತಾನೆ. ಇನ್ನೊಬ್ಬ ಗಟ್ಟಿಯಾಗಿ ಹಿಡಿದುಕೊಂಡು ತನ್ನ ಕಡೆಗೆ ಎಳೆದುಕೊಳ್ಳುತ್ತಾನೆ.]

ಒಬ್ಬ : ನಿಮಗೋಸ್ಕರ ಮೂವತ್ತು ರೂಪಾಯಿ ತಗೊಳ್ಳಿ.

ಹೊಸಬ : ಮೂವತ್ತು! ಅಬ್ಬ! ಬೇಡಪ್ಪ.

[ಮತ್ತೆ ಹೊರಡಲು ತಿರುಗುತ್ತಾನೆ.]

ಒಬ್ಬ : ನೋಡಿ, ವಿದೇಶೀ ಮನೆಗಳ ತರಹ ನಿಮ್ಮದೂ.

[ಹೊಸಬ ಆಸೆಯಿಂದ ಗಾಜಿನ ಕಡೆ ನೋಡುತ್ತಾನೆ. ಮೂವತ್ತೇ ರೂಪಾಯಿ ಅಲ್ಲವೇ ಅನ್ನಿಸಿದರೂ ಸ್ವಲ್ಪ ಚೌಕಾಸಿ ಮಾಡುತ್ತಾನೆ]

ಹೊಸಬ : ಆದರೂ ಮೂವತ್ತು ಜಾಸ್ತಿ. ಹದಿನೈದಕ್ಕೆ ಕೊಟ್ಟರೆ ನೋಡಬಹುದು.

ಒಬ್ಬ : ಚೌಕಾಸಿ ಯಾಕೆ ? ಕಡೇ ಮಾತು ಇಪ್ಪತ್ತು ರೂಪಾಯಿ, ಕೊಟ್ಟು ಬಿಡಿ.

ಹೊಸಬ : ಉಹುಂ ಹದಿನೈದು.

ಒಬ್ಬ : ಇಲ್ಲ ಸ್ವಾಮಿ, ಇಪ್ಪತ್ತಕ್ಕೆ ಕಡಿಮೆ ಇಲ್ಲ.

ಹೊಸಬ : ಹೂಂ, ಇಪ್ಪತ್ತು.

[ತೆಂಗಿನ ಕಾಯಿ ಪರೀಕ್ಷೆ ಮಾಡುವಂತೆ ಗಾಜನ್ನು ಅಲ್ಲಿ ಇಲ್ಲಿ ಬೆರಳಿನಿಂದ ಕುಟ್ಟಿ ನೋಡುತ್ತಾನೆ]

ಒಬ್ಬ : ನೋಡಿ, ನೋಡಿ. ಪರವಾಯಿಲ್ಲ ಗಾಜು.

[ಇದನ್ನೆಲ್ಲಾ ಮೂಕವಾಗಿ ನೋಡುತ್ತಿದ್ದ ಇನ್ನೊಬ್ಬ ಮೆಲ್ಲಗೆ ಬಂದು ಮಾತಿಗೆ ಇಳಿಯು ತ್ತಾನೆ.]

ಇನ್ನೊಬ್ಬ : ಗಾಜು ಕೊಂಡುಕೋತೀರಾ ?

ಹೊಸಬ : ಹೂಂ, ಚೆನ್ನಾಗಿದ್ದರೆ.

ಇನ್ನೊಬ್ಬ : ಹೂಂ, ನೋಡಿ, ಒಡೆದಿದೆಯೋ ಏನೋ ?

ಹೊಸಬ : ಆಂ ಒಡೆದಿದೆಯೇ ?

ಒಬ್ಬ : ಛೆ, ಇಲ್ಲ. ನೋಡಿ.

ಹೊಸಬ : ಅವನು ಒಡೆದಿಲ್ಲ ಅಂತಾನೆ ?

ಇನ್ನೊಬ್ಬ : ಅದು ನಮಗೆ ಗೊತ್ತಿಲ್ಲ. ನೀವು ಬರೋಕ್ಕಿಂತ ಮುಂಚೆ ನಾವೇ...

ಒಬ್ಬ : ಇಲ್ಲ ಸ್ವಾಮಿ ಚೆನ್ನಾಗಿದೆ. ನೀವೇ ನೋಡಿ, ತಿಳಿಯುತ್ತೆ.

[ಇನ್ನೊಬ್ಬನ ಕಡೆ ದುರುಗುಟ್ಟಿ ನೋಡು ವನು]

ಹೊಸಬ : ಇಲ್ಲ, ಒಡೆದಿಲ್ಲ. ಒಡೆದಿದ್ದರೆ ಕಾಣೊಲ್ಲವೆ ?

ಇನ್ನೊಬ್ಬ : ಮನೆ ಬಾಡಿಗೆಯದು ಅಂದಿರಿ ?

ಹೊಸಬ : ಹೂಂ, ಆದರೆ, ನಮಗೆ ಬೇಕಾದರೆ ಹಾಕಿಸಿಕೋಬಹುದು.

ಇನ್ನೊಬ್ಬ : ಹಾಕಿಸಿಕೊಂಡರೆ ಖರ್ಚು ?

ಒಬ್ಬ : ಬಾಡಿಗೆಯಲ್ಲಿ ಹಿಡಕೊಳ್ಳೋದು.

ಇನ್ನೊಬ್ಬ : ಮನೆಯೋರು ಒಪ್ಪುತ್ತಾರೆಯೇ ?

ಹೊಸಬ : ಒಪ್ಪದಿದ್ದರೆ ನೋಡೋದು...

ಒಬ್ಬ : ಒಪ್ಪದೆ ಏನು ಮಾಡುತಾರೆ ?

ಹೊಸಬ : ಅದರ ಅಳತೆ ಏನು ?

ಒಬ್ಬ : ನಾಲ್ಕು ಅಡಿ ಆರು ಅಡಿ.

ಇನ್ನೊಬ್ಬ : ಹೂಂ, ಅಂದರೆ ಎಷ್ಟಾಯಿತು ?

ಒಬ್ಬ : ಇಪ್ಪತ್ತನಾಲ್ಕು ಚದರ ಅಡಿ.

ಇನ್ನೊಬ್ಬ : ಅದಲ್ಲ ಬೆಲೆ ?

ಹೊಸಬ : ಯಾಕೆ, ಅವನೆ ಹೇಳಿದನಲ್ಲ ?

ಒಬ್ಬ : ಇಪ್ಪತ್ತು ರೂಪಾಯಿ.

ಇನ್ನೊಬ್ಬ : ಒಂದು ಚದರ ಅಡಿಗೆ.

ಹೊಸಬ : ಏನು !

ಒಬ್ಬ : ಅಲ್ಲಾ.

ಇನ್ನೊಬ್ಬ : ಅಂದರೆ ಇಪ್ಪತ್ತನಾಲ್ಕು ಚದರಡಿಗೆ ?

ಹೊಸಬ : ಇಪ್ಪತ್ತನಾಲ್ಕು ಇಪ್ಪತ್ಲ ನಾನೂರ ಎಂಬತ್ತು ರೂಪಾಯಿ.

ಒಬ್ಬ : ಅಲ್ಲ ಒಂದು ಗೋಡೆಗೆ.

[ಒಬ್ಬನಿಗೆ ಮಾತನಾಡಲು ಅವಕಾಶ ಕೊಡದೆಯೇ ಇನ್ನೊಬ್ಬ ಕೂಗುತ್ತಾನೆ.]

ಇನ್ನೊಬ್ಬ : ಒಂದು ಗೋಡೆಗೆ ಅಷ್ಟು ಕೊಡೋಲ್ಲವೆ ?

ಹೊಸಬ : ನಾನೂರ ಎಂಬತ್ತು!

ಇನ್ನೊಬ್ಬ : ಹೂಂ ಬಾಡಿಗೇಲಿ.

ಹೊಸಬ : ಒಂದು ವರ್ಷದ ಬಾಡಿಗೆ!

ಒಬ್ಬ : ಹಾಗಲ್ಲ ಸ್ವಾಮಿ...

ಹೊಸಬ : ಬೇಡಪ್ಪ ನಮಗೆ ಈ ಗೊಡವೇ ?

ಇನ್ನೊಬ್ಬ : ಗೋಡೆ ಬೇಡವೇ ಸ್ವಾಮಿ.

ಹೊಸಬ : ಬೇಡವೇ ಬೇಡ.

[ಹಿಂದಿರುಗಿ ಹೊಸಬ ಹೊರಟು ಹೋಗುತ್ತಾನೆ. ಇನ್ನೊಬ್ಬ ಅವನ ಕಡೆಯೇ ನೋಡುತ್ತಾನೆ. ಒಬ್ಬ ಇನ್ನೊಬ್ಬನನ್ನು ದುರುಗುಟ್ಟಿ ನೋಡುತ್ತಾನೆ. ಸ್ವಲ್ಪ ಹೊತ್ತಿನ ನಂತರ ನಿಧಾನವಾಗಿ ಇನ್ನೊಬ್ಬ ಒಬ್ಬನ ಕಡೆಗೆ ತಿರುಗಿ ಸ್ವಲ್ಪ ಹೆದರಿಕೆಯಿಂದಲೂ ಸ್ವಲ್ಪ ತುಂಟತನದಿಂದಲೂ ತಪ್ಪು ಮಾಡಿದ ಮಗುವಿನಂತೆ ಓರೆಗಣ್ಣಿನಿಂದ ನೋಡುತ್ತಾನೆ. ಒಬ್ಬ ಇನ್ನೂ ದುರ ಗುಟ್ಟಿ ನೋಡುತ್ತಿರುವುದನ್ನು ಕಂಡು ನಿಧಾನವಾಗಿ]

ಇನ್ನೊಬ್ಬ : ಅವರಿಗೆ ಗೋಡೆ ಬೇಡವಂತೆ ಬೇಡ ಅಂತ ಹೊರಟೇ ಹೋದರು. ಕೂಗಲಾ ಅವರನ್ನ? ಕೂಗಿದರೂ ಬರೋಲ್ಲ ಹೇನೋ ಅಲ್ಲವಾ ?

ಒಬ್ಬ : ಹೂಂ, ಬರುತಾರೆ ; ಕಾಯುತಾ ಇರು!

ಇನ್ನೊಬ್ಬ : ಕಾಯೋದು ಯಾಕೆ ? ಕೂಗೋಣ ?

ಒಬ್ಬ : ಸುಮ್ಮನಿರೋ ಸಾಕು. ಕೊಂಡುಕೋಬೇಕು ಅಂತಿದ್ದೋರನ್ನ ಹಾಳು ಮಾಡಿಬಿಟ್ಟೆ.

ಇನ್ನೊಬ್ಬ : ಅಯ್ಯೋ ನಾನು ಏನು ಮಾಡಿದೆ ?

ಒಬ್ಬ : ನಾನೇನು ಮಾಡಿದೆ ? ವ್ಯಾಪಾರ ಕೆಡಿಸಿದೆ!

ಇನ್ನೊಬ್ಬ : ನಾನು ಹೇಗೆ ಕೆಡಿಸಿದೆ ? ಅವರೇ ಬೇಡ ಅಂದರು.

ಒಬ್ಬ : ತಗೋಳೋ ತರಹ ಮಾತಾಡುತಿದ್ದರು.

ಇನ್ನೊಬ್ಬ : ಆದರೂ ಅಷ್ಟು ದುಡ್ಡು ಅವರಿಗೆ ಕೊಡೋಕ್ಯಾಗೊಲ್ಲ.

ಒಬ್ಬ : ಅಷ್ಟು ದುಡ್ಡು ಯಾರು ಕೇಳಿದರು ?

ಇನ್ನೊಬ್ಬ : ನಾನೇನು ಕೇಳಿದನೇ ? ನಾನೂರ ಎಂಬತ್ತು ರೂಪಾಯಿ ಆಗುತ್ತೆ ಅಂದೆ. ಅಷ್ಟಿದ್ದರೆ ಅವರು ಚೌಕಾಸಿ ಮಾಡ ಬೇಕಿತ್ತು ?

ಒಬ್ಬ : ನಾನು ಎಲ್ಲ ಸರಿ ಮಾಡಿದ್ದೆ. ನೀನು ಅವರನ್ನ ಹೆದರಿಸಿಬಿಟ್ಟೆ ಯಲ್ಲ. ನಾನೂರ ಎಂಬತ್ತು ರೂಪಾಯಿ. ನಿನಗೆ ಯಾಕೆ ಅಷ್ಟು ದುರಾಸೆ ? ಬಿಟ್ಟಿ ಸಿಕ್ಕ ಗಾಜು.

ಇನ್ನೊಬ್ಬ : ಬಿಟ್ಟಿ ಸಿಕ್ಕರೆ ಏನಂತೆ ? ಜಾಸ್ತಿ ದುಡ್ಡು ಸಿಕ್ಕರೆ ಯಾಕಿಗೆ ಬೇಡ.

ಒಬ್ಬ : ಅದಕ್ಕೂ ಒಂದು ಮಿತಿ ಬೇಡವೆ ?

ಇನ್ನೊಬ್ಬ : ಒಳ್ಳೆಯದು ಯಾವುದಕ್ಕೂ ಮಿತಿ ಬೇಡ. ಯಾಕಿರಬೇಕು?

ಒಬ್ಬ : ಆದರೂ ದುಡ್ಡಿನ ಆಸೆಗೆ ಮಿತಿ ಬೇಡವೆ ?

ಇನ್ನೊಬ್ಬ : ಬೇಕು. ನನಗೆ ಯಾಕೆ ಹೇಳುತ್ತಿ ? ಸತ್ತೋರಿಗೆ ಸತ್ತರೂ ಅಂತ ಸರ್ಟಿಫಿಕೇಟ ಕೊಡೋಕೆ ದುಡ್ಡು ಕೇಳುತಾರಲ್ಲ ಡಾಕ್ಟರು—ಅವರಿಗೆ ಹೇಳು, ನನಗೆ ಹೇಳೋಕೆ ಬಂದ.

ಒಬ್ಬ : ಅದಕ್ಕೂ ಇದಕ್ಕೂ ಏನು ಸಂಬಂಧ ?

ಇನ್ನೊಬ್ಬ : ಸಂಬಂಧವೇನೂ ಇಲ್ಲ. ಇವರು ಬೇಕಾದರೆ ಗಾಜು ಬೇಡ ಅಂತ ಬಿಡಬಹುದು. ಹೆಣ ಬಿಟ್ಟರೆ ಸತ್ತೋರ ಗತಿ.

ಒಬ್ಬ : ಅದು ನೋಡು, ಗಹನವಾದ ವಿಷಯ.

ಇನ್ನೊಬ್ಬ : ಅದರ ಬಗ್ಗೆ ಸ್ವಲ್ಪ ಕೂತು ಯೋಚನೆ ಮಾಡೋಣವೆ ?

ಒಬ್ಬ : ಬೇಡೋ, ಆದರೂ ನಾನೂರ ಎಂಬತ್ತು ರೂಪಾಯಿ ಕೇಳೋದೆ ?

ಇನ್ನೊಬ್ಬ : ನಾನೇನು ಬೇಕೇ ಬೇಕು ಅಂದೇನೇನು ?

ಒಬ್ಬ : ಕೈ ಒಡ್ಡಲಿಲ್ಲ. ಒಡ್ಡಿದ್ದರೆ ಗಾಜು ಒಡೆದು ಹೋಗುತ್ತೆ. ಅಂತ ಹೆದರಿಕೆಯೇನೋ.

ಇನ್ನೊಬ್ಬ : ಅವರು ಇಪ್ಪತ್ತೇ ರೂಪಾಯಿ ಅಂತ ಜಗಳ ಆಡುತಾರೇನೋ ಅಂತ ಇದ್ದೆ. ಆಡಿದ್ದರೆ ಇಪ್ಪತ್ತು ರೂಪಾಯಿಗೇ ಕೊಡಬಹುದಿತ್ತು.

ಒಬ್ಬ : ಇಪ್ಪತ್ತು ರೂಪಾಯಿಗ!

ಇನ್ನೊಬ್ಬ : ಹೂಂ. ಅದಕ್ಕಿಂತ ಇನ್ನೆಷ್ಟು ಬೇಕು? ಬಿಟ್ಟಿ ಸಿಕ್ಕದ ಗಾಜು.

ಒಬ್ಬ : ಅಲ್ಲವೋ, ಹಾಗಿದ್ದ ಮೇಲೆ ನಾನೂರ ಎಂಭತ್ತು ಯಾಕೋ ಕೇಳಿದೆ ?

ಇನ್ನೊಬ್ಬ : ಅವರು ಜಗಳ ಆಡುತಾರೆಯೇ ನೋಡೋಣ ಅಂತ.

ಒಬ್ಬ : ಜಗಳ ಯಾಕೋ ಆಡಬೇಕು ?

ಇನ್ನೊಬ್ಬ : ಜಗಳ ಆಡೋದು ಒಂದು ತರಹಾ ಮಾತೇ ಅಲ್ಲವೆ ? ಜಗಳ ಆಡಬೇಕಾದರೆ ಯಾರಾದರೂ ಜೊತೆಗೆ ಬೇಕೇ ಬೇಕು. ಜಗಳಾನ ಒಬ್ಬೊಬ್ಬರೇ ಆಡಿಕೊಳ್ಳೋಕೆ ಆಗುತ್ತದೆಯೆ ?

ಒಬ್ಬ : ಯಾಕೆ, ಕೆಲವು ಸಲ–ಕೆಲವು ಸಲ, ಏನು ಎಷ್ಟೋ ಸಲ ನನ್ನ ಮೇಲೆ ನನಗೇ ಸಿಟ್ಟು ಬಂದಾಗ...

ಇನ್ನೊಬ್ಬ : ಆ ತರಹಾನೂ ಆಗುತ್ತೆ–ನಾವು ಬಹಳ ಒಂಟಿಯಾಗಿದ್ದರೆ, ಇನ್ನೊಬ್ಬರಿದ್ದಾರೆ ಅಂತ ಮನಸ್ಸಿನಲ್ಲಿ ಅಂದುಕೊಂಡು ಜಗಳ ಆಡುತೀವಿ. ಇಲ್ಲದಿದ್ದರೆ ನಮ್ಮಲ್ಲೇ ಎರಡು ಪಾರ್ಟಿ ಮಾಡಿಕೊಂಡು ಜಗಳ...

[ಮಾತಿನ ರಭಸದಲ್ಲಿ ಗಾಜು ಓಲುತ್ತದೆ.]

ಒಬ್ಬ : ಲೋ, ಸ್ವಲ್ಪ ತಾಳೋ, ನಿನ್ನ ಭಾಷಣ ಬಿಗೀತಾ ಗಾಜನ್ನೇ ಒಡೆದು ಬಿಡುತೀ. ಈಗ ಅವತ ಹತ್ತಿರ ಯಾಕೆ

ಜಗಳ ಆಡೋಕ್ಕೆ ಹೊರಟೆ ? ನೀನೇನೂ ಒಂಟಿ ಆಗಿರಲಿಲ್ಲ ವಲ್ಲ.

ಇನ್ನೊಬ್ಬ : ಈ ಗಾಜು ಮಾಡಿಬಿಟ್ಟಿದ್ದರೆ ನೀನು ಏನು ಮಾಡುತ್ತಾ ಇದ್ದೆ?

ಒಬ್ಬ : ನನ್ನ ಪಾಲಿನ ದುಡ್ಡು ತಗೊಂಡು ನಾನು ದಾರಿ ಹಿಡೀ ತಿದ್ದೆ.

ಇನ್ನೊಬ್ಬ : ಅಂದರೆ ನಾನು ಮತ್ತೆ ಒಂಟಿ ಆಗುತ್ತಿದ್ದೆ. ಆದಕ್ಕೆ ಅವರ ಹತ್ತಿರ ಜಗಳ.

ಒಬ್ಬ : ಮತ್ತೆ ಅವರು ಜಗಳ ಆಡಲೇ ಇಲ್ಲ ? ಗಾಜೂ ತಗೊಳ್ಳ ಲಿಲ್ಲ. ಎರಡಲ್ಲೂ ಸೋತ ಹಾಗಾಯಿತು ?

ಇನ್ನೊಬ್ಬ : ಆದರೆ ನೀನು ?

ಒಬ್ಬ : ಇಲ್ಲೇ ನಿನ್ನ ಜೊತೆ.

ಇನ್ನೊಬ್ಬ : ಹೂಂ, ಸರಿಯಾಯಿತಲ್ಲ. ಗೋಡೆ ಬೇಕೇ ಗೋಡೆ...

ಒಬ್ಬ : ಲೋ, ನೀನು ಬೇಕೂಂತಲೇ.

ಇನ್ನೊಬ್ಬ : ಶ್, ಅಲ್ಲಿ ನೋಡು ಯಾರೋ ಬರುತಾ ಇದಾರೆ. ಗೋಡೆ ಬೇಕೇ ಗೋಡೆ....

ಒಬ್ಬ : ಗೋಡೆ ಬೇಕೆ ಗೋಡೆ ಗರಮಾಗರಂ ಗೋಡೆ....

[ಒಂದು ಕಡೆಯಿಂದ ಒಬ್ಬ ಕುಳ್ಳಾದ ಮನುಷ್ಯ ಬರುತ್ತಾನೆ. ವಯಸ್ಸು ಎಷ್ಟೆಂದು ಹೇಳು ವುದು ಕಷ್ಟ. ಗಡ್ಡದಲ್ಲಿ ನೆರೆ–ಕೂದಲು ಕಾಣು ತ್ತದೆ. ಒಳ್ಳೆಯ ಗಡ್ಡವೇ ಇದೆ. ಕಾವಿ ಬಟ್ಟೆ ಧರಿಸಿದ್ದಾರೆ. ಅದರ ಮೇಲೆ ತಲೆ ಮುಚ್ಚಿ ಗೋಣಿ ಚೀಲವನ್ನು ಹೊದ್ದು ಕೊಂಡಿದ್ದಾನೆ. ಕೈಯಲ್ಲಿ ಒಂದು ತ್ರಿಶೂಲವನ್ನು ಹಿಡಿದು ಕೊಂಡಿದ್ದಾನೆ. ತ್ರಿಶೂಲವನ್ನು ಹೆಗಲ ಮೇಲೆ

ಇಟ್ಟುಕೊಂಡು ಅವರ ಕಾವು ಅವನ ಹಿಂದೆ ಬರುವಂತೆ ಹಿಡಿದುಕೊಂಡಿದ್ದಾನೆ. ತ್ರಿಶೂಲ ಸುಮಾರು ಏಳೆಂಟು ಅಡಿಗಳಷ್ಟು ಉದ್ದ ಇದೆ. ಅದನ್ನು ಅವನು ದರದರನೆ ಎಳೆಯುತ್ತಾ ಅವಸರವಾಗಿ ಮುಂದೆ ಮುಂದೆ ನಡೆಯುತ್ತಾನೆ. ಒಬ್ಬ ಮತ್ತು ಇನ್ನೊಬ್ಬ ಅವನ ಕಡೆ ಆಶ್ಚರ್ಯದಿಂದ ನೋಡುತ್ತಾನೆ. ಒಬ್ಬ ಸ್ವಲ್ಪ ನಗುತ್ತಾನೆ]

ಇನ್ನೊಬ್ಬ : ಹೋ....ಓ ಓ

[ಮನುಷ್ಯ ನಿಲ್ಲುತ್ತಾನೆ. ಆದರೂ ಮುಂದೆ ಹೋಗುತ್ತಿರುವ ಭಂಗಿಯಲ್ಲಿಯೇ ಪ್ರತಿಮೆಯಂತೆ ನಿಲ್ಲುತ್ತಾನೆ.]

ಮನುಷ್ಯ : ದಾರಿ ಬಿಡಿ. ದಾರಿ ಬಿಡಿ.

ಒಬ್ಬ : ಚುಕು-ಪುಕು ಚುಕು-ಪುಕು ರೈಲು ಬಂತು.

[ಮನುಷ್ಯ ವಿಚಿತ್ರವಾಗಿ ಅವನ ಕಡೆ ನೋಡುತ್ತಾನೆ.]

ಇನ್ನೊಬ್ಬ : ತಾಳ್ರೀರಿ. ಎಲ್ಲಿಗೆ ಅಷ್ಟು ಅವಸರವಾಗಿ ಹೋಗುತಿದೀರಿ?

ಮನುಷ್ಯ : ಎಲ್ಲಿಗೆ ಅಂದರೆ ? ನನಗೇನೋ ಕೆಲಸ ಇದೆ. ಹೋಗಬೇಕು.

ಇನ್ನೊಬ್ಬ : ಕೆಲಸಕ್ಕೆ ಹೋಗೋಕ್ಕೆ ಇಷ್ಟು ಅವಸರವೇ ? ನೀವು ಯಾವ ದೇಶದವರು ?

ಮನುಷ್ಯ : ಈ ದೇಶದವನೇ. ಅದರಲ್ಲೇನು ? ದಾರಿ ಬಿಡಿ. ಹೊತ್ತಾಯಿತು.

ಒಬ್ಬ : ಎಷ್ಟು ಹೊತ್ತಾಯಿತು?

[ಮನುಷ್ಯ ತನ್ನ ಸೊಂಟದಿಂದ ನೇತಾಡುತ್ತಿರುವ ಗಡಿಯಾರವನ್ನು ತೆಗೆದು ಅದನ್ನು

ದೂರದಿಂದ ನೋಡಿ, ಆಮೇಲೆ ಕಣ್ಣಿನ ಹತ್ತಿರ ಹಿಡಿದು]

ಮನುಷ್ಯ : ಅಯ್ಯೋ, ಅಷ್ಟು ಹೊತ್ತಾಯಿತೇ ? ದಾರಿ ಬಿಡಿ. ದಾರಿ ಬಿಡಿ. ಹೋಗಬೇಕು. ಹೋಗಿ ಅವರನ್ನು ಕರಕೊಂಡು ಬರಬೇಕು.

ಇನ್ನೊಬ್ಬ : ಎಲ್ಲಿಗೆ? ಯಾರನ್ನು ?

ಮನುಷ್ಯ : ಅದೆಲ್ಲ ಹೇಳೋಕಾಗೊಲ್ಲ. ಹೋಗಿ ಕರಕೊಂಡು ಬರಬೇಕು, ಅಷ್ಟೆ.

ಒಬ್ಬ : ಯಾಕೆ ಹೇಳೋಕಾಗೊಲ್ಲ? ಅದು ಅಷ್ಟು ಗುಟ್ಟೆ?

ಮನುಷ್ಯ : ಯಾರು ಅಂತ ನನಗೂ ಗೊತ್ತಿಲ್ಲ.

ಒಬ್ಬ : ಮತ್ತೆ ಯಾರನ್ನ ಕರಕೊಂಡು ಬರುತ್ತೀರಿ ?

ಮನುಷ್ಯ : ಅವರ ಅಡ್ರೆಸ್ ಗೊತ್ತು, ಅವರ ಗುರುತು ಗೊತ್ತು, ಅಷ್ಟೆ ಸಾಕು.

ಒಬ್ಬ : ಮಿಕ್ಕಿದ್ದೇನೂ ತಿಳೀದೇ ಕರಕೊಂಡು ಬರಬೇಕೋ ?

ಮನುಷ್ಯ : ಹೂಂ. ಮೆರವಣಿಗೆಗೆ ಹೊತ್ತಾಯಿತು.

ಇನ್ನೊಬ್ಬ : ಯಾವ ಮೆರವಣಿಗೆ ?

ಮನುಷ್ಯ : ಅದೆಲ್ಲ ಗುಟ್ಟು. ಆಗಲೇ ಹೇಳಲಿಲ್ಲವೆ? ನೀವು ಮೆರವಣಿಗೆ ಹೋದಾಗಲೇ ಗೊತ್ತಾಗಬೇಕಾದರೆ–

ಒಬ್ಬ : ನಾವು ಮೆರವಣಿಗೆಗೆ....

ಮನುಷ್ಯ : ಎಲ್ಲರದ್ದೂ ಯಾವಾಗಲಾದರೂ ಆಗುತ್ತಲ್ಲ. ಆಗ ತಿಳಕೋ ಬಹುದು. ಅಷ್ಟೆ.

ಇನ್ನೊಬ್ಬ : ಇವೊತ್ತು ನಿಮ್ಮ ಮೆರವಣಿಗೇನೋ ?

ಮನುಷ್ಯ : ಇಲ್ಲ, ಇಲ್ಲ. ಇವೊತ್ತು ಅವರ ಮೆರವಣಿಗೆ. ಇನ್ನೂ ಹೊರಟಿಲ್ಲ.

ಒಬ್ಬ : ಅದು ನಿಮಗೆ ಹೇಗೆ ಗೊತ್ತು ? ಹೊರಟಾಗ ಗುಂಡು ಹಾರಿಸುತ್ತಾರೆಯೆ ?

ಮನುಷ್ಯ : ಇಲ್ಲ. ಹೊರಟರೆ ನನಗೆ ಗೊತ್ತಾಗೊಲ್ಲವೇ ? ಅವರೇ ಬಂದಿಲ್ಲ, [ನಗುತ್ತ] ಮದುಮಗನೇ ಇಲ್ಲದೆ ಮದುವೆ ಮಾಡಿದ ಹಾಗೆ.

ಇನ್ನೊಬ್ಬ : ಅವರು ಯಾವುದೋ ಬೇರೆ ದಾರೀಲಿ ಹೋಗಿರಬಹುದು.

ಮನುಷ್ಯ : ನಾನು ಇಲ್ಲೇ ಇದೀನಲ್ಲ. ನಾನು ಹೋಗಿ ಅವರನ್ನು ಕರ ಕೊಂಡು ಬರಬೇಕು.

ಇನ್ನೊಬ್ಬ : ನೀವು ಹೋಗದೆ ಇದ್ದರೆ....

ಮನುಷ್ಯ : ನಾನು ಹೋಗದೆ ಇದ್ದರೆ ನನ್ನ ಮೆರವಣಿಗೆ ಮಾಡಿಸುತ್ತಾರೆ, ಅಷ್ಟೆ.

ಒಬ್ಬ : ಅದಕ್ಕೆ ನೀವು ಮೆರವಣಿಗೆಗೆ ಸಿದ್ಧವಾಗೇ ಹೊರಟಿದೀರಾ ? [ತ್ರಿಶೂಲವನ್ನು ತೋರಿಸಿ] ಇದನ್ನು ಯಾಕೆ ಹಾಗೆ ಹಿಡಿದು ಕೊಂಡಿದೀರಿ ? ಮೇಲಕ್ಕೆತ್ತಿ ಕ್ಯಾಲೆಂಡರಿನಲ್ಲಿ ಶಿವ ನಿಂತ ಹಾಗೆ ನಿಲ್ಲೋದು ಬಿಟ್ಟು....

[ತೋರಿಸಲು ಹೋದಾಗ ಗೋಡೆ' ಓಲಿ, ಒಬ್ಬ-ಇನ್ನೊಬ್ಬ ತತ್ತರಿಸಿ ಅದನ್ನು ಹಿಡಿದು ಕೊಳ್ಳುತ್ತಾರೆ.]

ಮನುಷ್ಯ : [ನಗುತ್ತಾ] ಹಾಗೆ ಹಿಡಿದುಕೊಂಡರೆ, ಕ್ಯಾಲೆಂಡರಿನ ಶಿವನ ಹಾಗೆ ನಿಂತುಕೊಂಡೇ ಇರಬೇಕು.

ಒಬ್ಬ : ಹಾಂ, ಅದೇ ನಾನು ಹೇಳಿದ್ದು.

ಮನುಷ್ಯ : ನನಗೆ ಓಡಾಡೋಕ್ಕಾಗೊಲ್ಲ. ಮರಗಳು ಅಡ್ಡ ಬರುತ್ತವೆ. ಎಲೆ ಎಲ್ಲ ಕೆಳಗೆ ಬದ್ದು ಎಡವೊ ಹಾಗಾಗುತ್ತೆ. ಇದು ಕೊಂಬೆಗಳಿಗೆ ತಾಕಿದರಂತೂ ನನಗೆ ನಡೆಯೋಕ್ಕೇ ಆಗೋ ದಿಲ್ಲ.



1024

ಇನ್ನೊಬ್ಬ : ಮರ ಕಡಿಸಿಹಾಕಿದರೆ.

ಮನುಷ್ಯ : ನಾನೇನು ಮುನಿಸಿಪಾಲಿಟೀನೆ, ನೆರಳಿನ ಮರ ಕಡಿಸೋಕ್ಕೆ.

ಇನ್ನೊಬ್ಬ : ಹಾಗೆ ಯಾರಾದರೂ ಬೈದರೆ ನಿಮ್ಮನ್ನು ?

ಮನುಷ್ಯ : ನಾನು ಎಲ್ಲ ಪ್ರಯತ್ನ ಮಾಡಿ ಆಯಿತು. ತ್ರಿಶೂಲ ಮುಂದೆ ಹಿಡಿದುಕೊಂಡು ನೋಡಿದೆ, ಭರ್ಜಿ ತರಹ.

ಒಬ್ಬ : ಹಾಂ ಅದೂ ಒಳ್ಳೇದೇ, ಎಲ್ಲರಿಗೂ ಕಾಣುತ್ತೆ.

ಮನುಷ್ಯ : ಕಾಣುತ್ತೆ ಸರಿ. ಆದರೆ ನಾನು ತಿರುಗಿದಾಗಲೆಲ್ಲ ಯಾರಿಗಾದರೂ ತಾಕುತ್ತಿತ್ತು. ಯಾರಿಗಾದರೂ ಏಟು ಯಾಕೆ ತಗಲಬೇಕು ಅಂತ ತ್ರಿಶೂಲ ನೆಲದ ಮೇಲೆ ಮುಂದೆ ಬಿಟ್ಟುಕೊಂಡು ಹೊರಟೆ. ಆಗ ನಡೆಯೋವಾಗೆಲ್ಲ ಮುಗ್ಗರಿಸುತ್ತಾ ಇದ್ದೆ.

[ನಡೆಯುವುದನ್ನು ತೋರಿಸಲು ಹೋಗಿ ಎರಡು ಮೂರು ಸಲ ಮುಗ್ಗರಿಸುತ್ತಾನೆ. ಇವನು ಮುಗ್ಗರಿಸಿದಾಗಲೆಲ್ಲ ಗಾಜಿನ ಮೇಲೆ ಎಲ್ಲಿ ಬೀಳುವನೋ ಎಂದು ಒಬ್ಬ, ಇನ್ನೊಬ್ಬ ಹೆದರಿ ಹಿಂದಕ್ಕೆ ಸರಿಯುವರು.]

ಒಬ್ಬ : ಜೋಪಾನ ರೀ!

ಮನುಷ್ಯ : ಅದಕ್ಕೆ ಹೀಗೆ ಹಿಡಕೊಂಡು ಹೋಗೋದು.

ಒಬ್ಬ : ಆದರೆ ಈಗ ಇದು ನಿಮ್ಮ ಹಿಂದೆ ಕಸ ಎಳೆದುಕೊಂಡು ಬರುತ್ತಲ್ಲ ?

ಮನುಷ್ಯ : ತ್ರಿಶೂಲ ಹಿಡಿದ ಮೇಲೆ....

ಇನ್ನೊಬ್ಬ : ತ್ರಿಶೂಲ ಹಿಡಿದ ಮಾತ್ರಕ್ಕೆ ಝಾಡಮಾಲಿ ಕೆಲಸ ಮಾಡಬೇಕೆ ?

ಮನುಷ್ಯ : ಝಾಡಮಾಲಿ ಅಂದರೆ ಅಷ್ಟು ತಾತ್ಸಾರ ಯಾಕೆ ? ಅವರು ನಮಗೆ...

ಒಬ್ಬ : ಅದಿರಲಿ. ನಿಮಗೆ ನಾವೇನು ವೋಟು ಹಾಕಬೇಕಾಗಿಲ್ಲ.

1021

ಇನ್ನೊಬ್ಬ : ಮತ್ತೆ ನೀವು ಮೆರವಣಿಗೆಯಲ್ಲೂ ಹೀಗೆ ಹಿಡಕೋತೀರಾ ?

ಮನುಷ್ಯ : ಆಂ. ನೋಡಿದಿರಾ ನನಗೆ ಹೊತ್ತಾಯಿತು. ಜಾಗ ಬಿಡಿ. ಹೊತ್ತಾಯಿತು.

[ಮನುಷ್ಯ ತನ್ನ ಸೊಂಟದಿಂದ ಗಡಿಯಾರವನ್ನು ತೆಗೆದು ಅದನ್ನು ದೂರದಿಂದ ನೋಡಿ. ಆಮೇಲೆ ಕಣ್ಣಿನ ಹತ್ತಿರ ಹಿಡಿದು ನೋಡುತ್ತಾರೆ. ಅದರ ಗುಂಡಿಯನ್ನೊತ್ತಿ ಅದರ ಮುಚ್ಚಳವನ್ನು ತೆಗೆಯುತ್ತಾನೆ.]

ಇನ್ನೊಬ್ಬ : ಓಹೋ ಗಡಿಯಾರ ಕಿತ್ತು ಹೋಯಿತು !

ಮನುಷ್ಯ : ಇಲ್ಲ, ಇಲ್ಲ. ಅದು ಹಾಗೇನೇ.

[ತೆಗೆದ ಮುಚ್ಚಳದ ಕಡೆಗೆ ಬೆರಳಿಟ್ಟು ಗಡಿಯಾರದ ಮುಖದ ಮೇಲೆ ಮುಳ್ಳುಗಳ ಮೇಲೂ ಬೆರಳಾಡಿಸಿ.]

ಮನುಷ್ಯ : ಓಹೋ ನೋಡಿದಿರಾ,— ಹೊತ್ತಾಯಿತು.

ಇನ್ನೊಬ್ಬ : ಅದು ಯಾಕೆ ಹಾಗೇ ?

ಮನುಷ್ಯ : ಇದು ಕುರುಡರ ಗಡಿಯಾರ. ಅವರಿಗೆ ಕಣ್ಣು ಕಾಣೊಲ್ಲವಲ್ಲ, ಅದಕ್ಕೆ ಮುಚ್ಚಳ ತೆಗೆದು ಬೆರಳಲ್ಲಿ ಮುಟ್ಟಿ ನೋಡಿ ಗಂಟೆ ಎಷ್ಟಾಯಿತು ಅಂತ ತಿಳಿದುಕೋತಾರೆ.

ಇನ್ನೊಬ್ಬ : ಅದು ಸರಿ, ಅದು ನಿಮಗೆ ಯಾಕೆ ? ನೀವೇನು ಕುರುಡರೇ?

ಮನುಷ್ಯ : ಹೊತ್ತಿನ ವಿಷಯದಲ್ಲಿ ಎಲ್ಲರೂ ಕುರುಡರೇ ?

ಒಬ್ಬ : ಹಾಗಾದರೆ ಗಡಿಯಾರ ಯಾಕೆ ನೋಡಬೇಕು ?

ಮನುಷ್ಯ : ಹಾಗೆಂದರೇನರ್ಥ ? ಎಷ್ಟು ಹೊತ್ತಾಯಿತು ಅಂತ ನೋಡಬೇಡವೆ ?

ಒಬ್ಬ : ಎರಡೆರಡು ಸಲ ನೋಡಿದಿರಲ್ಲ ?

ಮನುಷ್ಯ : ಎರಡೇನು, ಕೆಲವು ಸಲ ಹತ್ತು, ಸಾರಿ ನೋಡುತೀನಿ ?

ಇನ್ನೊಬ್ಬ : ಯಾಕೆ ?

ಮನುಷ್ಯ : ಯಾವದೇ ವಿಷಯ ಆಗಲಿ, ಸರಿಯಾಗಿ ತಿಳಕೋಬೇಕು ಅಂದರೆ ಹಾಗೆ.

ಇನ್ನೊಬ್ಬ : ನೋಡಿದರೆ ಕಾಣುತ್ತಲ್ಲ. ಅದನ್ನ ಮುಟ್ಟಿ ಯಾಕೆ ನೋಡ ಬೇಕು,

ಮನುಷ್ಯ : ನೋಡಿದ್ದೆಲ್ಲ ನಂಬೋಕಾಗೊಲ್ಲ. ಕಣ್ಣಿಗೆ ಕಾಣಿಸೋದು ಕನಸಿರಬಹುದು.

ಇನ್ನೊಬ್ಬ : ಅದಕ್ಕೇ ಕೆಲವರು ಕಾಣುತಾ ಇರೋದು ನಿಜವೋ ಸುಳ್ಳೋ ಅಂತ ತಿಳಕೊಳ್ಳೋಕ್ಕೆ ತವಮ್ಮನ್ನ ತಾವೇ ಜಿಗುಟ್ಟಿ ಕೊಳ್ಳೋದು.

ಮನುಷ್ಯ : ನನಗೆ ಚಿಗುಟಿ, ಚಿಗುಟಿ, ಮೈ ಜಡ್ಡು ಕಟ್ಟಿಹೋಗಿದೆ.

ಇನ್ನೊಬ್ಬ : ನೀವು ಗಡಿಯಾರಾನೇ ಜಿಗುಟುತೀರಲ್ಲ ?

[ಇಷ್ಟರಲ್ಲಿ ದೂರದಲ್ಲಿ ಗಂಟೆ, ಜಾಗಟೆ, ಓಲಗ, ಕಹಳೆ, ಗದ್ದಲ ನಿಧಾನವಾಗಿ ಆರಂಭವಾಗಿ ಕ್ರಮೇಣ ಹೆಚ್ಚಿ. ಈಗ ಸ್ಪಷ್ಟವಾಗಿ ಕೇಳಲು ಆರಂಭಿಸಿದೆ.]

ಮನುಷ್ಯ : ಓಹೋ, ಇಲ್ಲೆಲಾ ಭಾರಿ ಗದ್ದಲ ಶುರುವಾಗಿ ಹೋಯಿತು. ನಾನು ಹೋಗಬೇಕು. ನೀವು ಬನ್ನಿ.

ಒಬ್ಬ ಇನ್ನೊಬ್ಬ : ಎಲ್ಲಿಗೆ ?

ಮನುಷ್ಯ : ಮೆರವಣಿಗೆಗೆ.

ಒಬ್ಬ : ಯಾರದೋ ಮೆರವಣಿಗೆ ಕರಿಯದೇ ?

ಮನುಷ್ಯ : ಪರವಾಗಿಲ್ಲ. ಬನ್ನಿ ಬಿಡಿಸುತೀನಿ.

ಇನ್ನೊಬ್ಬ : ಮತ್ತೆ ನಮಗೆ ತಿಳಿಯೋಲ್ಲ ಅಂದಿರಿ!

ಮನುಷ್ಯ : ತಿಳಿಯೊಲ್ಲ ನಿಜ. ಅದು ಯಾಕೆ, ನಿಮಗೆ ಕಾಣದೇನೂ ಹೋಗಬಹುದು.

ಒಬ್ಬ : ನಾವು ಬಂದು ಏನು ಮಾಡೋದು ?

ಮನುಷ್ಯ : ಒಂದು ಕೈ ನೋಡಿ.

[ಒಬ್ಬ ಮತ್ತು ಇನ್ನೊಬ್ಬ ಒಬ್ಬರ ಮುಖ ವನ್ನೊಬ್ಬರು ನೋಡುವರು.]

ಒಬ್ಬ ಇನ್ನೊಬ್ಬ : ನಡೀರಿ ಜೋತೆ ಅಂದ ಮೇಲೆ....

[ಮನುಷ್ಯ ಹೊರಡುತ್ತಾನೆ. ಒಬ್ಬ ಇನ್ನೊಬ್ಬ ಇಬ್ಬರೂ ಒಂದೇ ಕಡೆ ತಿರುಗಿ ಮನುಷ್ಯನಿಗೆ ಅಡ್ಡ ಬರುತ್ತಾರೆ.]

ಮನುಷ್ಯ : ದಾರಿ ಬಿಡಿ, ದಾರಿ ಬಿಡಿ.

[ಇಬ್ಬರೂ ದಾರಿ ಬಿಡಲು ತಿರುಗುತ್ತಾರೆ. ಇವರು ಸರಿಯುವುದರಲ್ಲಿ ಇವರನ್ನು ಬಳಸಿ ಕೊಂಡು ಹೋಗಲು ಮನುಷ್ಯ ತಾನು ಒಂದು ಕಡೆ ತಿರುಗುತ್ತಾನೆ. ಮತ್ತೆ ಗಾಜು ಇವನ ಮುಂದಕ್ಕೆ ಬರುತ್ತದೆ. ಇದನ್ನು ಗಮನಿಸಿ ಒಬ್ಬ ಮತ್ತು ಇನ್ನೊಬ್ಬ ದಾರಿ ಬಿಡಲು ಸರಿ ಯುತ್ತಾರೆ. ಮನುಷ್ಯ ಮೊದಲಿನಂತೆಯೇ ತಿರುಗುತ್ತಾನೆ. ಗಾಜು ಮತ್ತೆ ಅಡ್ಡ ಬರು ತ್ತದೆ. ಎರಡು ಮೂರು ಬಾರಿ ಹೀಗೆಯೇ ಆಗಿ ಮೊದಲು ನಿಧಾನವಾಗಿ, ಅನಂತರ ಬೇಗ ಬೇಗ ಮೂವರು ರಂಗದ ಮೇಲೆ ಗಿರಿಗಿಟ್ಟಲೆ ಆಡುವಂತೆ, ಗಡಿಯಾರದ ಮುಳ್ಳುಗಳು ತಿರುಗು ವಂತೆ, ಪ್ರದಕ್ಷಿಣೆ ತಿರುಗುತ್ತಾರೆ. ಗಾಜನ್ನು ಹಿಡಿದ ಇಬ್ಬರೂ ರಂಗದ ಮೇಲೆ ವೃತ್ತದಂತೆ ತಿರುಗುತ್ತಾರೆ. ಈ ಗಾಜಿಗೆ ಎದುರಾಗಿಯೇ ಮನುಷ್ಯ ವೃತ್ತದ ಮಧ್ಯದಲ್ಲಿ ತಿರ ಗುತ್ತಾನೆ. ಈ ತಿರುಗಾಟದ ವೇಗ ಹೆಚ್ಚು ಆದಂತೆ ಹೆಗಲ ಮೇಲೆ ಹಿಂದಕ್ಕೆ ಓಲಿದ್ದ ತ್ರಿಶೂಲ ನೆಟ್ಟ ಗಾಗುತ್ತದೆ. ಮನುಷ್ಯ ಮುಂದಕ್ಕೆ ಬಾಗು

ತ್ತಾನೆ. ಅವನನ್ನು ನೋಡಿದರೆ ಕೊಂಬಿನಿಂದ ತಿವಿಯಲು ಮುಂದ್ಕೆ ಮುನ್ನುಗ್ಗುವ ಘೇಂಡಾ ಮೃಗದಂತೆ ಕಾಣುತ್ತಾನೆ. ಗಾಜು ಒಡೆಯ ಬಹುದೆಂಬ ಭಯವಾಗುತ್ತದೆ. ಮೂವರೂ ಒಟ್ಟಿಗೆ ಕೂಗುತ್ತಾರೆ.]

ಒಬ್ಬ ಇನ್ನೊಬ್ಬ ಮನುಷ್ಯ : ಹೋ ಹೋ...

[ತಿರುಗುವುದನ್ನು ಕ್ರಮೇಣ ನಿಧಾನ ಮಾಡಿ ಕೊನೆಗೆ ನಿಲ್ಲುತ್ತಾರೆ. ಎಲ್ಲರಿಗೂ ತಲೆ ತಿರುಗು ತ್ತಿದೆ. ಸ್ವಲ್ಪ ಅತ್ತ ಇತ್ತ ಓಲಾಡುತ್ತಾರೆ.]

ಇನ್ನೊಬ್ಬ : ಹೀಗಾದರೆ ನಾವು ಎಲ್ಲೂ ಹೋಗಾಕ್ಕಾಗೋದಿಲ್ಲ.

[ಒಂದು ಕ್ಷಣ ಯೋಚಿಸುತ್ತಾರೆ. ಹೊರಗಡೆ ಯ ಸದ್ದು ಹೆಚ್ಚಾಗುತ್ತದೆ. ಶಂಖ ಒಂದನ್ನು ನಾದ ಕೇಳುತ್ತದೆ. ತಕ್ಷಣ ಒಬ್ಬ ಮತ್ತು ಇನ್ನೊಬ್ಬ ಪರಸ್ಪರ ನೋಡಿಕೊಳ್ಳುತ್ತಾರೆ. ಇಬ್ಬರೂ ನಡೆ ಎನ್ನುವಂತೆ ತಲೆ ಹಾರಿಸುತ್ತಾರೆ. ಇಬ್ಬರೂ ವೇಗವಾಗಿ ಜನರ ಗದ್ದಲ ಕೇಳುವ ಕಡೆ ಗಾಜನ್ನೆತ್ತಿಕೊಂಡೇ ಹೋಗುತ್ತಾರೆ. ಮನುಷ್ಯ ಇವರಿಬ್ಬರನ್ನೂ, ಏನೂ ಅರ್ಥ ವಾಗದವನಂತೆ ನೋಡುತ್ತ ನಿಲ್ಲುತ್ತಾನೆ. ಹೊರಗಡೆ ಗಂಟೆಗಳ ಶಬ್ದ. ಮನುಷ್ಯ ಮತ್ತೆ ತನ್ನ ಗಡಿಯಾರವನ್ನು ಹೊರ ತೆಗೆದು ಮೊದ ಲಿನಂತೆಯೇ ಗಂಟೆ ನೋಡಿಕೊಳ್ಳುತ್ತಾನೆ. ಗಂಟೆ ನೋಡಿಕೊಳ್ಳುವ ಕ್ರಮವೆಲ್ಲ ನಿಧಾನವೇ ಆದರೂ ಗಡಿಯಾರವನ್ನು ಮತ್ತೆ ಸೊಂಟಕ್ಕೆ ಸೇರಿಸುವಾಗ ಆತುರ ಕಾಣುತ್ತದೆ.]

ಮನುಷ್ಯ : ಅಯ್ಯೋ, ಮೆರವಣಿಗೆಗೆ ಹೊತ್ತಾಯಿತು. ಇವರೂ ನನ್ನ ಜೊತೆ ಬರೋಕ್ಕಾಗೊಲ್ಲ, ಇನ್ನು ಇವರಿಗೋಸ್ಕರ ಕಾಯೋ ಕ್ಕಾಗಲ್ಲ,

[ಅವರು ಹೋದ ಕಡೆಯೇ ವೇಗವಾಗಿ ಹೋಗುತ್ತಾನೆ. ರಂಗದ ಒಂದು ತುದಿಗೆ ಬರುತ್ತಿದ್ದಂತೆ ನಿಂತು]

ಈಗ ಈ ಕಡೆ ಹೋದರೆ ಹೊತ್ತಾಗಿ ಹೋಗುತ್ತೆ ಆ ಕಡೆ ವಾಸಿ.

[ಭರಭರನೆ ರಂಗದ ಇನ್ನೊಂದು ಕಡೆಗೆ ಧಾವಿಸುತ್ತಾನೆ. ಒಂದು ನಿಮಿಷದ ನಂತರ ಇನ್ನೊಬ್ಬ ಹಿಂದೆ ಹಿಂದೆ ನೋಡಿಕೊಂಡು ಮಾತನಾಡುತ್ತಲೇ ಬರುತ್ತಾನೆ. ಮನುಷ್ಯ ಇಲ್ಲದಿರುವದನ್ನು ಗಮನಿಸುವುದಿಲ್ಲ.]

ಇನ್ನೊಬ್ಬ : ಅಲ್ಲಿ ಆ ದೇವಸ್ಥಾನದ ಮುಂದೆ ಯಾವೋನೋ ಕೂತು ನಿದ್ದೆ ಮಾಡ್ತಾ ಇದ್ದ. ಅವನ ಹಿಂದುಗಡೆ ಆ ಗಾಜನ್ನು....

[ಈಗ ಮನುಷ್ಯ ರಂಗದ ಮೇಲೆ ಇಲ್ಲದಿರುವುದನ್ನು ಗಮನಿಸುತ್ತಾನೆ. ಆ ಕಡೆ ಈ ಕಡೆ ನೋಡುತ್ತಾನೆ. ರಂಗದ ಮೇಲೆ ಓಡಾಡಿ ಅತ್ತ ಇತ್ತ ಹುಡುಕುತ್ತಾನೆ. ಹೆದರಿರುವಂತೆ ಕಾಣುತ್ತಾನೆ.]

ಅರೆ! ಅವರು ಎಲ್ಲಿ ಹೋದರು ? ಹೊರಟು ಹೋದರೋ ಏನೋ

[ಜನರ ಗದ್ದಲದ ದಿಕ್ಕಿನಲ್ಲಿ ನೋಡುತ್ತಾನೆ. ಕಾಲ ಬೆರಳ ಮೇಲೆ ನಿಮಿರಿ ನಿಂತು ನೋಡುತ್ತಾನೆ.]

ಆಂ, ಇವನೆಲ್ಲಿ! ಅಲ್ಲೇ ಎಲ್ಲೋ ನಿಂತು ನೋಡುತಾ ಇದ್ದ ಕಾಣೋದೆ ಇಲ್ಲ!

[ಮತ್ತೆ ನಿಮಿರಿ ನೋಡುತ್ತಾನೆ. ಒಂದೆರಡು ಸಲ ಹಾರಿ ನೋಡುತ್ತಾನೆ. ಜನರ ಗದ್ದಲ ಹೆಚ್ಚಾಗುತ್ತದ.]

ರೀ...ಓ...ಇವನೇ...ಅವನ ಹೆಸರೂ ಗೊತ್ತಿಲ್ಲ ನನಗೆ....

[ಮುಖದಲ್ಲೆಲ್ಲ ಭಯ ಕಾಣುತ್ತದೆ.]

ಓ...ಇವನೇ ಬಾರಯ್ಯ ಬನ್ರೀ ರೀ...

[ರಂಗದ ಮೇಲೆ ಎಲ್ಲ ಕಡೆಗೂ ಕೂಗುತ್ತಾನೆ. ಪ್ರೇಕ್ಷಕರ ಕಡೆಗೂ ಕೂಗುತ್ತಾನೆ.]

ರೀ...ಬಾರೋ...ಬಾರಯ್ಯ....ಬನ್ರಿ ರೀ ಯಾರಾದರೂ... ರೀ...ರೀ....

— ತೆರೆ ಬೀಳುತ್ತದೆ —

ಪಾತ್ರಗಳು :

ಗಂಡ

ಹೆಂಡತಿ

ಗಾಯತ್ರಿ : ಅವರ ಮಗಳು

ವ್ಯಕ್ತಿ : ಹಜಾಮ ಮುನಿಸ್ವಾಮಿ

## ಒಂದನೆಯ ದೃಶ್ಯ

[ಮಧ್ಯಮ ವರ್ಗದ ಮನೆ. ತೆರೆ ಏಳುವ ಸಮಯದಲ್ಲಿ ಮಗುವಿನ ಅಳು. ತಾಯಿ ಸುಮ್ಮ ನಿರಿಸಲು ಹಾಡುವ ಹಾಡು, ಚೀರಾಟ, ಗಂಟೆ ಇತ್ಯಾದಿ ಸಪ್ಪಳ. ತೆರೆ ಎದ್ದಾಗ ಸುಮಾರು ಹನ್ನೆರಡು ವರ್ಷದ ಹುಡುಗಿ, ಗಿಲಿಕಿಗಾಗಿ ಕುರ್ಚಿ, ಟೇಬಲ ಕೆಳಗೆ ಹುಡುಕುತ್ತಿರುವಳು; 'ಸಿಗ್ತಾ ಇಲ್ಲಮ್ಮ' ಎಂದು ಹೇಳಿ ಒಳಗೆ ಹೋಗುವಳು. ಮನೆಯ ಯಜಮಾನರ ಪ್ರವೇಶ.]

ಗಂಡ : ಶಭಾಸ, ಹ್ಯಾಗೆ ಅಳ್ತಿದಾನೆ ನನ್ನ ಮಗ ಗಂಗೂ, ಪಾಪ ಯಾಕೆ ಅಳ್ತಿದೆ ಗೊತ್ತಿಲ್ಲವೇನೇ ?

ಹೆಂಡತಿ : ಹೇಳಿ.

ಗಂಡ : ಬಾ ಇತ್ತ. ನಿನ್ನ ಕುಮಾರನ ದರ್ಶನ ಆಗಲಿ.

ಹೆಂಡತಿ : ಮಲಗುತ್ತೆ ಸುಮ್ಮನಿರಿ.

ಗಂಡ : ಏನಂದೆ ?

ಹೆಂಡತಿ ; [ಗಟ್ಟಿಯಾಗಿ]
ಮಲಗುತ್ತೆ ಸುಮ್ಮನಿರಿ !

ಗಂಡ : ಭಪ್ಪರೆ, ನನ್ನ ಮಗ ಮಲಗ್ತಾನೆ !

ಹೆಂಡತಿ : ಕಪ್ಪೆ ಥರ ಒಟಗುಟ್ಟೋದೇ ನಿಮ್ಮ ಕೆಲಸ,

ಗಂಡ : ಬಾರೆ ಮತ್ತೆ ಪರವಾಗಿಲ್ಲ. ಗಾಯತ್ರಿ ಮಲಗಿಸ್ತಾಳೆ.

ಹೆಂಡತಿ : ಸರಿ.

[ಬಂದು]

ಬಂದೆ, ಅದೇನು ಹೇಳಿ.

ಗಂಡ : ನನಗೆ ಅದೇ ಪ್ರಾಬ್ಲಮು ಚಿನ್ನ :
ಬೀಜದಿಂದ ಮರವೋ ಮರದಿಂದ ಬೀಜಾನೋ–ಇದ್ದ ಹಾಗೆ, ನಿನ್ನ ಹಾಡಿನಿಂದ ಅತ್ತನೋ, ಅವನು ಅತ್ತಿದ್ರಿಂದ ಹಾಡಿದೆಯೋ–

ಹೆಂಡತಿ : ಮಹಾ! ನಂಗೂ ಅದೇ ಕಣ್ರೀ ಪ್ರಾಬ್ಲಮು,
ಹುಡುಗ್ರು ಥಡ್ರು ಅಂತ ಪಾಠ ಹೇಳ್ತೀರೋ,
ನೀವು ಪಾಠ ಹೇಳಿದ್ರಿಂದ ಥಡ್ಡರಾದ್ರೊ–

ಗಂಡ : [ಮಗು ಸಂಪೂರ್ಣ ಅಳು ನಿಲ್ಲಿಸಿದ್ದು ಕೇಳಿ]
ಹಾಂ! ನೋಡು ಯಾರು ಹೇಳಿದ್ದು ನಿಜ ?

ಹೆಂಡತಿ : ನಿಮ್ಮ ಗದ್ದಲಕ್ಕೆ ಹೆದರ್ಕೊಂಡಿರಬೇಕು ಅಷ್ಟೆ–

ಗಂಡ : ಅಲ್ಲ!

ಹೆಂಡತಿ : ಗಂಟೆ ಸದ್ದಿಗೆ ಸುಮ್ಮನಾಗಿರಬೇಕು.

ಗಂಡ : ಅಲ್ಲ !

ಹೆಂಡತಿ : ರಿಪಿ ರಿಪಿ ಮಾಡೋದೇ ನಿಮ್ಮ ಕೆಲಸ, ಕೈ ಬಿಡಿ.

ಗಂಡ : ಕೂತ್ಕೋ, ಮಾತಾಡೋಣ.

ಹೆಂಡತಿ : ಕೈ ಬಿಡ್ರೀ, ಗಾಯತ್ರಿ ಬರ್ತಾಳೆ.

ಗಂಡ : ಕೂತ್ಕೋ ಅಂದ್ರೆ ಕೂತ್ಕೋಬೇಕು. ಗಾಯಿತ್ರಿ, ನಾಳೆ ನಿಂಗೆ ಟೆಸ್ಟ ಅಲ್ವಾ ?

ಗಾಯತ್ರಿ : ಹೌದಪ್ಪ.

ಗಂಡ : ಅಲ್ಲೇ ಕೂತ್ಕೊಂಡು ಓದ್ಕೋ ಮರಿ. ಈ ಸಲ ಫಸ್ಟ ಕ್ಲಾಸ ಬರಬೇಕು.

ಹೆಂಡತಿ : ಬಹಳ ಪ್ರೀತಿ ಮಗಳ ಮೇಲೆ. ಅವಳ ಕ್ಲಾಸ ಯಾವುದು ಹೇಳಿ.

ಗಂಡ : [ಗೊತ್ತಿಲ್ಲದೆ]
ಗೊತ್ತು ಬಿಡೆ.

[ಈ ಮಧ್ಯೆ ತನ್ನ ಯೋಗ್ಯತೆಗೆ ತಕ್ಕ ರೀತಿಯಲ್ಲಿ ಪ್ರೀತಿ ತೋರುವನು.]

ಹೆಂಡತಿ : ಏನು ಗೊತ್ತು, ಹೇಳಿ.

ಗಂಡ : ನಾವು ನಂದಿಗೆ ಹೋಗಿದ್ದಾಗ ಅವಳಿಗೆ ಏಳು ವರ್ಷ.

ಹೆಂಡತಿ : ಸರಿ. ಏಳರಲ್ಲಿ ಎರಡು ಹೋದ್ರೆ ಐದು.

ಗಂಡ : ಊಟಿಯಲ್ಲಿದ್ದಾಗ ನಾನೇ ಹದಿನಾಲ್ಕರ ಮಗ್ಗಿ ಬರೆದು ಕೊಟ್ಟಿದ್ದೆ.

ಹೆಂಡತಿ : [ಅವನು ನೆನೆಸಿಕೊಳ್ಳುವ ವಿಧಾನಕ್ಕೆ ನಕ್ಕು]
ಆದ್ದಾಗೆ ಪಾಠ ಹೇಳಿಕೊಡ್ತೀರ್ರೀ ನೀವು ?

[ಗಟ್ಟಿಯಾಗಿ ನಗುವಳು]

ಗಂಡ : [ತಾನೂ ನಗಲು ಯತ್ನಿಸಿ, ಆದರೆ ಪೆಚ್ಚಾಗಿ ಮುನಿಸಿನಿಂದ]
ನಿನಗೇನು ಹುಚ್ಚೇನೇ ?

ಹೆಂಡತಿ : ಹುಚ್ಚಲ್ಲ, ತಮಾಷೆ ! ನಿಮ್ಮ ವಯಸ್ಸು ಹ್ಯಾಗೆ ಹೇಳ್ತೀರಿ, ಹೇಳಿ.

ಗಂಡ : ನನ್ನ ಸರ್ಟಿಫಿಕೇಟಲ್ಲಿ ಇದೆ.

ಹೆಂಡತಿ : ಅಲ್ಲ,
[ಮತ್ತೆ ನಕ್ಕು]
ಹಾಗಲ್ಲ. ನಾಲ್ಕು ವರ್ಷದ ಕೆಳಗೆ ಕೆಂಪು ಷರ್ಟ್ ಹಾಕ್ಕೊಂಡು ಬೀದೀಲಿ ಹೋಗ್ತಿದ್ರಿ.
ಸಾಹುಕಾರ ಮುನಿಯಪ್ಪನ ನಾಯಿ ಅಟ್ಟಿಸಿಕೊಂಡು ಬಂತು,

ಅಲ್ಲಿಂದ ಕಾಲು ಕಿತ್ರಿ–
ಒಂದು ರಿಕ್ಷಾಕ್ಕೆ ಡಿಕ್ಕಿ ಹೊಡೆದ್ರಿ–
ಪೋಲೀಸನೋನು ಬಂದು–

ಗಂಡ : ಹಳೇ ಕತೆ ಮತ್ತೆ ಮತ್ತೆ ಹೇಳಬೇಡವೇ–

[ಎಂದು ಅವಳು ನಗುತ್ತಿದ್ದಂತೆ ಅಟ್ಟಿಸಿಕೊಂಡು ಹೋಗುವನು]

ಗಾಯಂತ್ರಿ : [ಕೆಮ್ಮಿ]
ಇಲ್ಲಿ ತುಂಬ ಕತ್ತಲೆ ಕಣಪ್ಪ.

ಹೆಂಡತಿ : [ನಕ್ಕು ಸುಸ್ತಾಗಿ ಸಿಕ್ಕು]
ನನ್ನ ಮುಟ್ಟಬೇಡ್ರಿ- ನಿಮ್ಮ ತಲೆ ನೋಡ್ಕೊಳ್ಳಿ–

ಗಂಡ : [ಅವಳು ಸಿಕ್ಕಿದಳೆಂಬಂತೆ]
ಹೆಂಗಸರು ಮಾತ್ರ ಕನ್ನಡಿಯಿಲ್ಲದೆ ತಮ್ಮ ತಲೆ ತಾವೇ ನೋಡ್ಕೋತಾರೆ–

ಹೆಂಡತಿ : ತಲೆಹರಟೆ ! ಕ್ಷೌರ ಮಾಡಿಸಿಕೊಂಡು ಬಂದು ಮೈಲಿಗೇಲಿ–

ಗಂಡ : ಹೌದಲ್ಲ ! ಮರೆತೇ ಬಿಟ್ಟಿದ್ದೆ - ನಿನ್ನನ್ನು ಅದಕ್ಕೆ ನಾನು ಕರೆದದ್ದು.

ಹೆಂಡತಿ : ಸರಿಯಾಗಿ ಮಾತನಾಡದಿದ್ರೆ ಒಂದಕ್ಕೆ ಎರಡರ್ಥ ಆಗುತ್ತೆ. ಅದೇನು ಹೇಳಿ.

ಗಂಡ : ಹೇಳ್ತೀನೆ, ಇರು.

[ಎಂದು ಸಿಗರೇಟನ್ನು ಸಾವಧಾನವಾಗಿ ಹಚ್ಚಿಕೊಳ್ಳುವನು. ಈ ಕೆಲಸ ಹಂತ ಹಂತವಾಗಿ ಸಾಗುತ್ತಿದ್ದಂತೆ ಮಾತಾಡುವಳು]

ಹೆಂಡತಿ : ಇವತ್ತು ಒಂದನೇ ತಾರೀಖು.

[ಮೌನ]

ಪಾಪ ಹುಟ್ಟಿದ ಹಬ್ಬ.

[ಮೌನ]

ನೆನಪಿರಲಿ, ಜಯಾ ಸೀರೆಗೆ ಅಂತ ಕಳಿಸಿದ ದುಡ್ಡನ್ನೆಲ್ಲ ಖರ್ಚು ಮಾಡಿಕೊಂಡು ಕೂತಿದ್ದೀರಿ.

ಗಂಡ : ಮುಗೀತಾ ನಿನ್ನ ಒಂದನೇ ತಾರೀಖಿನ ಪುರಾಣ.

ಹೆಂಡತಿ : ನಿಮ್ಮ ಪುರಾಣ ಹೇಳಿ.

ಗಂಡ : ಇದು ನನ್ನ ಹಜಾಮನ ಕತೆ.

[ತಲೆ ತೋರಿಸುತ್ತ]

ನನ್ನ ಹಜಾಮನ ಕತೆ, ಅಂದೆ.

[ನಗುವಳು]

ನಗಬೇಡ. ಕೇಳು, ಹೆಂಗಸರಿಗೆ ಕ್ಷೌರದ ಕತೆ ಕೊಂಚ ಕಷ್ಟ.

[ನಗುವಳು]

ನಗು, ನಗು, ಹೆಂಗಸರಿಗೇನು. ತಲೆ ಮೇಲೆ ಕೂದಲು ಬೆಳೀತಿದ್ರೆ ಆರಾಮಾಗಿ ಹಾಡು ಹೇಳ್ತಾ ಇರ್ತೀರಿ : ಎಣ್ಣೆ ಹಾಕಿ ಹೂವಿನ ಘಮ ಘಮ ಕೊಟ್ಟು ಬೆಳೀ ಬೆಳೀ ಅಂತೀರಿ : ಮೋಟು ಜಡೆ ಆದ್ರೆ ಕೆದರಿಕೊಂಡು ಬಾಬ ಅಂತೀರಿ-ಉದ್ದ ಜಡೆ ಆದ್ರೆ ಅದನ್ನ ಗಂಡಸರ ಕುತ್ತಿಗೆಗೆ ಸುತ್ತಿ-

ಹೆಂಡತಿ : ಹುಂ, ಸುತ್ತಿ ?

ಗಂಡ : ಹೋಗ್ಲಿ ಬಿಡು, ಗಂಡಸರಿಗೆ ಮಾತ್ರ ಒಂದು ಚೋಟುದ್ದ ಕೂದಲು ಸಾಕು.
ಪಕ್ಕದಲ್ಲಿ ನೀಟಾಗಿ ಕತ್ತರಿಸಬೇಕು.
ಕತ್ತಿ ತಕೊಂಡು ಹೆರೆದು ಗಾರ್ಡನಿಂಗ ಮಾಡಿರಬೇಕು;
ಎಲ್ಲೆಲ್ಲಿ ಎಷ್ಟೆಷ್ಟು ಕೂದಲಿರಬೇಕೋ ಅಷ್ಟಿದ್ದರೆ ಚೆಂದ

ಹೆಂಡತಿ : [ತುಂಟತನದಿಂದ]
ಕೂದಲೇ ಇಲ್ಲದಿದ್ರೆ ?

ಗಂಡ : ಕೂದಲೇ ಇಲ್ಲದಿದ್ರೆ ಟೊಪ್ಪಿಗೆ-
ಗಾಂಧಿ ಟೊಪ್ಪಿಗೆ, ರಟ್ಟಿನ ಟೊಪ್ಪಿಗೆ, ಗುಡಾಣದಂಥ ಟೊಪ್ಪಿಗೆ,

ಕೆಳಗೆ ನಾಲ್ಕೇ ನಾಲ್ಕು ಕೂದಲಿದ್ರೂ ಅದನ್ನು ಕತ್ತರಿಸಿ ಅದನ್ನ ಹದ ಮಾಡೋಕೊಬ್ಬ ಹಜಾಮ ಬೇಕು.

[ಅವಳನ್ನೇ ನೋಡುತ್ತ—ನಕ್ಕು]

ನೀನು ಬೋಳಾಗಿದ್ರೆ ಹೇಗಿರ್ತಿದ್ದೆ ಅಂತ ನೆನೆದ್ರೆ ನಗು ಬರುತ್ತೆ.

ಹೆಂಡತಿ : ಹೋಗ್ರೀ ಕೆಟ್ಟ ನಾಲಗೆ.

ಗಂಡ : ನಾನೆಷ್ಟೋ ನೋಡಿದೀನಿ. ಹೆಂಗಸರಿಗೆ ಬಕ್ಕ ತಲೆ ಆದದ್ದು ಕಮ್ಮಿ. ಈಚೀಚೆಗೆ ಗಂಡ ಸತ್ತಿದ್ದೋರೂ ಕೂಡಾ ಇಷ್ಟುದ್ದ ಜಡೆ ಹಾಕ್ಕೊಂಡು—

ಹೆಂಡತಿ : ಅದೇನೋ ಕತೆ ಹೇಳ್ತೀನಿ ಅಂದಿರಲ್ರೀ, ಒಳ್ಳೆ ಪ್ರೊಫೇಸರ ನೀವು !

ಗಂಡ : ಕತೆ ಅಲ್ವೆ, ನಡೆದದ್ದು.

ಹೆಂಡತಿ : ನಡೆದದು, ಕೂತದ್ದು ಎರಡನ್ನೂ ಹೇಳಿ.

ಗಂಡ : ಸರಿ ಕೇಳು, ಪ್ರತೀ ತಿಂಗಳು ಒಂದನೇ ತಾರೀಖು ಹೋಗ್ತೇನಲ್ಲ. ಆ ಹಜಾಮನ ಅಂಗಡಿಗೆ ಹೋದೆ. ಅಂದ್ರೆ ಇವತ್ತು ಹೋದೆ. ನೀನು, ಕೂದಲು ಎಷ್ಟುದ್ದ ಆಗಿದೆ ಅಂದ್ರೆ ಎದೆಗೆಲ್ಲ ಚುಚುತ್ತೆ ಅಂತ.

ಹೆಂಡತಿ : ಬರಿ ಹಲ್ಕಾನಪ್ಪ ನೀವು, ಕತೆ ಹೇಳಿ.

ಗಂಡ : ಆ, ಅಂಗಡಿಗೆ ಹೋದೆ. ಹಜಾಮ ಸುಮ್ಮನೆ ನಿಂತಿದ್ದ ಗಿರಾಕಿಗಳೇ ಕಮ್ಮಿ ಅವನಿಗೆ. ಇಡೀ ತಿಂಗಳು ನನಗಾಗೆ ಕಾಯುತ್ತಿದ್ದನೇನೋ ಅನ್ನೋ ಹಾಗೆ ನಿಂತಿದ್ದ. ಹೋದ

ಕೂಡಲೇ ಕುರ್ಚಿಯ ಧೂಳು ಹೊಡೆದು ಸಜ್ಜಾದ. ಕನ್ನಡೀನ ನನ್ನ ಮುಖಕ್ಕೆ ಸರಿಯಾಗಿ ಇಟ್ಟ. ನಿತ್ಯದ ಹಾಗೇ ಇದ್ದ—ತುಟಿ ಪಿಟಕೆನ್ನದೆ. ನನ್ನ ತಲೇ ಮೇಲೆ ಕೈಯಾಡಿಸಿ. ಮಿಷನ್ ತಗೊಂಡು, ಚಕ ಚಕಾ, ಚಕ ಚಕಾ ಅಂತ ಶುರು ಮಾಡಿದ.

ಹೆಂಡತಿ : ಅಲ್ರೀ ಅವನು ಒಂದೂ ಮಾತೂ ಆಡೋಲ್ವಾ ?

ಗಂಡ : ಅವನು ಬೇರೆ ಥರಾ ಹಜಾಮು ಕಣೇ—ಈ ನಾಲ್ಕು ವರ್ಷ ದಿಂದ ನಾಲ್ಕು ಮಾತು ಆಡಿರಬಹುದು ಅಷ್ಟೇ.

ಹೆಂಡತಿ : ನಾಲ್ಕು ಮಾತೇ ? ಎಂಥಾ ನಾಲ್ಕು ಮಾತು ?

ಗಂಡ : ಸಿಸರ ಕಟ ಬೇಕೇ ಸಾರ ಅಂದ, ನಾಲ್ಕು ವರ್ಷದ ಕೆಳಗೆ ನಾನು ಹೂಂ ಅಂಧೆ—

ಹೆಂಡತಿ : ಆಮೇಲೆ ?

ಗಂಡ : ಮೀಸೆ ಕತ್ತರಿಸಬೇಕೇ ಸಾರ ಅಂದ, ಒಂದು ಸಲ ಪೂರ್ತಿ ಹೆರೆದು ಬಿಡು ಅಂದೆ, ನುಣ್ಣಗೆ ಹೆರೆದುಬಿಟ್ಟ.

ಹೆಂಡತಿ : ಆಮೇಲೆ ?

ಗಂಡ : ಕೂದಲು ಕೊಂಚ ಬೆಳ್ಳಗಾಗ್ತಿದೆ ಸಾರ, ಅಂದ. ಬಣ್ಣ ಹಚ್ಕೋಳ್ತೀನೆ ಅಂದೆ.

ಹೆಂಡತಿ : ನೀವು ಯಾರು ಅಂತ ಅವನಿಗೆ ಗೊತ್ತಿಲ್ವಾ ?

ಗಂಡ : ಇಲ್ಲ, ಅವನು ಯಾರು ಅಂತ ನನಗೆ ಗೊತ್ತಿಲ್ಲ.

ಹೆಂಡತಿ : ಸುಳ್ಳು: ಅವನು ಹಜಾಮು ಅಂತ ನಿಮಗೆ ಗೊತ್ತು.

ಗಂಡ : ಹಜಾಮರ ವಿಷಯ ಹೆಂಗಸರಿಗೇನು ಗೊತ್ತು, ಹೇಳ್ತೀನೆ ಕೇಳು—ನೀನು ಷಾಪಿಗೆ ಹೋದೆ ಅಂತ ಇಟ್ಕೋ—

ಹೆಂಡತಿ : ಥೂ.

ಗಂಡ : ನಾನೇ ಹೋದೆ ಅಂತಿಟ್ಕೋ ಮುಕ್ಕಾಲು ಮೂರು ಪಾಲು ಹಜಾಮರು ಒಳ್ಳೇ ಡಿಪ್ಲೊಮ್ಯಾಟ್ಸ ಥರ ಮುಗುಳ್ನಕ್ಕು ಬನ್ನಿ ಸಾರ ಅಂತಾರೆ ...ನೀನು ರಾಜ ಆಗಿರು. ಕೊತ್ತಂಬರಿ ಬೀಜ ಆಗಿರು, ಬನ್ನಿ ಸಾರ ಅಂತಾರೆ, ಕುತ್ಕೊಳ್ಳಿ ಸಾರ, ಅಂತಾರೆ. ನಾನು ಕೂತ್ಕೊಂಡೆ ಅನ್ನು—ಏನು ಸಾರ, ಈಚೆಗೆ ಕಾಣಿಸಲಿಲ್ಲ ಅಂತಾರೆ—ನಾನು ಈಚೆಗೆ ವ್ಯಾನಿಷಿಂಗ ಕ್ರೀಮು ಹಚ್ತೀನೆ ಅಂದ್ರೆ ಪೆದ್ದು ಪೆದ್ದಾಗಿ ನಗ್ತಾರೆ. ನಿಮ್ಮ ಮಾತು ಒಳ್ಳೆ ಮಜಾ ಸಾರ, ಏನು ಸಮಾಚಾರ ಅಂತಾರೆ— ನಂಗೆ ಸಮಾಚಾರ ಗೊತ್ತಿಲ್ಲ ಸುಮ್ನೆ ನಕ್ಕರೆ ಇವತ್ತು ಯಾವ ಕುದುರೆ ಗೆಲ್ಲುತ್ತೆ ಸಾರ, ಟ್ಯೂಡರ ಜೆಟ್ಟೋ, ಗೋಲ್ಡ ಬಾಂಡೋ ಅಂತಾರೇ ! ಕುದುರೆ ಯಾಕಪ್ಪ ಗೆಲ್ಲುತ್ತೆ ಅಂದ್ರೆ, ರೇಸಿನ ಮೇಲೆ ಭಾಷಣ ಕೊಟ್ಟು ನಿನ್ನ ಹೆಣ ಹಾಕ್ತಾರೆ.

ಹೆಂಡತಿ : ಅವರು ಹಜಾಮರು ಯಾಕಾದದು ಅಂತ ಹೇಳಬೇಕು ನೀವು—

ಗಂಡ : ರೇಸಿನಿಂದ ಹಜಾಮರಾದರೋ ರೇಸಾಯಿತೋ—

ಹೆಂಡತಿ : ಸಾಕಪ್ಪಾ ಸಾಕು.

ಗಂಡ : ಆದರೆ ನನ್ನ ಹಜಾಮ ಸ್ಪೈಲೆಂಟ—ಆದಕ್ಕೇ ಅವನು ನನಗೆ ಇಷ್ಟ. ಕಪ್ಪನೆಯ ವ್ಯಕ್ತಿ, ಅವನ ಕೆಲಸ ಆಯ್ತು, ಅವನಾಯ್ತು.

ಹೆಂಡತಿ : ಇಷ್ಟೇನಾ ಕತೆ ?

ಗಂಡ : ಇಷ್ಟೇ ಆಗಿದ್ರೆ ನಾನ್ಯಾತಕ್ಕೆ ಹೇಳ್ತಿದ್ದೆ ? ಅವನು ಸುಮ್ನೆ ಕ್ಷೌರ ಮಾಡ್ತಿದ್ದ ಇದ್ದಕ್ಕಿದ್ದ ಹಾಗೆ ಮಾತಾಡಿದ.

ಹೆಂಡತಿ : ಹೌದ ? ಏನಂದ ?

ಗಂಡ : ತಮಗೆ ತಂದೆ ಇದಾರಾ ಸಾರ ಅಂದ—

[ಮೌನ]

ಹೌದು ಅಂದೆ. ಇದ್ದಾರೆ—ಊರಲ್ಲಿದ್ದಾರೆ ಅಂದೆ.

[ಮೌನ]

ನೀವೊಬ್ಬರೇ ಮಕ್ಕಳಾ ಸಾರ ಅಂದ -- ಹೌದು ನಾನೊಬ್ಬನೇ ಅಂದೆ.

[ಮೌನ]

ತಮಗೆ ಮಕ್ಕಳು ಇದ್ದಾರಾ ಅಂದ—ಇಬ್ಬರು ಇದ್ದಾರೆ ಅಂದೆ.

ಹೆಂಡತಿ : ಆಮೇಲೆ ?

ಗಂಡ : ಅಷ್ಟಕ್ಕೆ 'ಸುಮ್ಮನಾದ—ಮತ್ತೇನಾದರೂ ಕೇಳಬಹುದು ಅಂತ ನೋಡಿದೆ—ಆದರೆ ಮಾತನಾಡಲಿಲ್ಲ.

[ಮೌನ—ನಕ್ಕು]

ವಿಚಿತ್ರ ಅಲ್ಲವಾ, ಪೈಲಿ ಮುಖದ ಆ ಮನುಷ್ಯ ಎಷ್ಟೋ ವರ್ಷದಿಂದ ನನ್ನನ್ನು ನೋಡ್ತಿದಾನೆ. ಮಾತೇ ಆಡ್ತಿರಲಿಲ್ಲ—ಈಗ ಇದ್ದಕ್ಕಿದ್ದ ಹಾಗೆ ಮಾತಾಡಿದ — ಅವನ ಮಾತಿಗೆ ವಿಚಿತ್ರ ಶಕ್ತಿ ಇತ್ತು.

[ಮೌನ]

ನಾನು ಅವನನ್ನು ಪ್ರಶ್ನೆ ಕೇಳಬೇಕು ಅಂದುಕೊಂಡೆ — ಆದರೆ ಅವನ ಮೌನ ನೋಡಿ ಸುಮ್ಮನಾದೆ. ಮಾತಿಲ್ಲದೆ ನಮ್ಮ ಮಧ್ಯೆ ಸಂಬಂಧ ಬೆಳೆದಹಾಗಿತ್ತು.

ಹೆಂಡತಿ : ಅವ್ನು ನೋಡೋಕೆ ಹೇಗಿದ್ದಾನೆ.

ಗಂಡ : ಕಪ್ಪಗಿದ್ದಾನೆ. ಯಾವಾಗಲೂ ಗಂಭಿರವಾಗಿರ್ತಾನೆ.

ಹೆಂಡತಿ : ಖುಷಿ ಖುಷಿಯಾಗಿರ್ತಾನಾ

ಗಂಡ : ಇಲ್ಲ, ಖುಷಿಯೂ ಇಲ್ಲ, ದುಃಖವು ಇಲ್ಲ.

[ಹೊರಗಡೆ ಬಾಗಿಲು ತಟ್ಟಿದ ಶಬ್ದ. ಯಾರ್ ನೋಡು ಅನ್ನುವನು. ಅವಳು ಪ್ರೇಕ್ಷಕರಿಗೆ ಕಾಣಿಸುವ ಬಾಗಿಲು ತೆಗೆದು ಹೊರಗೆ ನೋಡುತ್ತ ಯಾರು ಬೇಕಿತ್ತು ಎನ್ನುವಳು. ವ್ಯಕ್ತಿ ಪ್ರೇಕ್ಷಕರಿಗೆ ಕಾಣುವುದಿಲ್ಲ. ಮತ್ತ ಯಾರು ಬೇಕಿತ್ತು, ಎನುವಳು. ಈ ವಿಚಿತ್ರ ರೀತಿಗೆ ಗಂಡ ಎದ್ದು ತಾನೂ ಬಂದು ನೋಡುವನು. ವ್ಯಕ್ತಿಯನ್ನು ಗುರುತಿಸಿ]

ಗಂಡ : ಓ! ನೀನಾ.

[ಸಂತೋಷದಿಂದ]

ಅರೆ ಅವನೇ ಕಣೆ, ನಾನು ಈಗ ಹೇಳುತ್ತಿರಲಿಲ್ಲವಾ, ಅವನೆ! ನೀನು ಒಳಗೆ ಹೋಗು.

[ಅವಳು ಒಳಗೆ ಹೋಗುವಳು]

ಬಾರಯ್ಯ ಯಾಕೆ ಗೇಟ ಹತ್ತಿರಾನೇ ನಿಂತಿದ್ದೀ, ಮಾತಾಡಿ ಸಿದ್ರೆ ಯಾರು ಅಂತ ಹೇಳಬಾರದ? ಒಳಗೆ ಬಾ.

[ಎಂದು ಪ್ರೇಕ್ಷಕರಿಗೆ ಕಾಣಿಸುವ ಬಾಗಿಲು ದಾಟಿ ಒಳಗೆ ಬರುವನು. ವ್ಯಕ್ತಿಯ ಪ್ರವೇಶ ಅವನು ಬಾಗಿಲ ಹೊರಗೇ ನಿಂತಿರುವನು.]

ಏನು ಬಂದೆ, ಯಾಕೆ ಸಪ್ಪಗಿದ್ದೀ, ಏನಾಯ್ತು?

[ಮೌನ]

ನಿನ್ನನ್ನು ನಿನ್ನ ಷಾಪಿನಿಂದ ಹೊರಗೆ ನಾನು ನೋಡುತ್ತಿರುವುದು ಇದೇ ಮೊದಲು! ಏನು ವಿಶೇಷ?

ವ್ಯಕ್ತಿ : ನನ್ನ ತಂದೆ ತೀರ್ಕೊಂಡ್ರು ಸಾರ್—

ಗಂಡ : ಹೌದೇ? ನಿನ್ನ ತಂದೆ ತೀರ್ಕೊಂಡ್ರೆ? ಏನಾಗಿತ್ತು? ಯಾವಾಗ ತೀರ್ಕೊಂಡ್ರು? ಬೆಳಿಗ್ಗೆ ಅದಕ್ಕೆ ಸಪ್ಪಗಿದ್ದೀ ಅಲ್ವಾ?

ವ್ಯಕ್ತಿ : ಎರಡು ದಿನ ಜ್ವರ ಬಂದಿತ್ತು ಸಾರ್, ಮಧ್ಯಾಹ್ನ ತೀರಿ ಕೊಂಡ್ರು.

ಗಂಡ : ಬೆಳಿಗ್ಗೆ ನನಗೆ ಯಾಕೆ ಹೇಳ್ಲಿಲ್ಲ? ಅಯ್ಯೋ ಹಾಳಾದವನೇ, ಆಸ್ಪತ್ರೆಗಾದ್ರೂ ಸೇರಿಸಬಹುದಾಗಿತ್ತು.

[ಮೌನ]

ವ್ಯಕ್ತಿ : ಹೆಣ ಹಾಗೆ ಬಿದ್ದಿದೆ ಸಾರ್, ಮೂವತ್ತು ರೂಪಾಯಿ ಬೇಕಾಗಿತ್ತು.

ಗಂಡ : ಮೂವತ್ತೆ? ಎರಡು ಗಂಟೆ ಬಿಟ್ಕೊಂಡು ಬಾ, ಇವತ್ತು ಮೊದಲನೇ ತಾರೀಖು, ಆಫೀಸಿಗೆ ಹೋಗಿ ಬರ್ತೀನಿ.

ವ್ಯಕ್ತಿ : ಆಗಲಿ ಸಾರ್.

[ಮೌನ—ಹೋಗುವನು]

ಗಂಡ : ಲೇ ಗಂಗೂ, ಬಾ ಇಲ್ಲಿ.

[ಬರುವಳು, ಭುಜದ ಮೇಲೆ ಹಿಂಡಿದ ಬಟ್ಟೆ]

ಅವನು ಯಾರು ಗೊತ್ತಾ, ನನ್ನ ಮಾಮೂಲು ಜವಾನ.

ಹೆಂಡತಿ : ಹೌದಾ, ಹ್ಯಾಗೆ ನಿಂತಿದ್ದ! ಕಳ್ಳನ ಥರ!

ಗಂಡ : ಸಂಕೋಚ ಕಣೇ—ತುಂಬ ಒಳ್ಳೆಯ ಮನುಷ್ಯ—ಅವನ ತಂದೆ ಇವತ್ತು ತೀರ್ಕೊಂಡ್ರಂತೆ.

[ಹೋಗಲಿರುವಳು]

ನಿಲ್ಲು—ನೋಡು, ಅವನಿಗೆ ಇವತ್ತು ಇಪ್ಪತ್ತು ರೂಪಾಯಿ ಬೇಕಂತೆ, ತಂದೆಯ ಶವಸಂಸ್ಕಾರಕ್ಕೆ.

ಗಾಯಿತ್ರಿ : [ಪ್ರವೇಶಿಸಿ] ಇಪ್ಪತ್ತಲ್ಲಮ್ಮ ಅವನು ಕೇಳಿದ್ದು ಮೂವತ್ತು ಅಲ್ಲವೇನಪ್ಪಾ?

ಗಂಡ : [ಸಿಟ್ಟಿನಿಂದ] ಹೌದು ಮೂವತ್ತು—ನೀನು ಯಾಕೆ ಕೇಳಿಸಿ ಕೊಂಡೆ?

ಗಾಯಿತ್ರಿ : ನಾನು ಸುಮ್ಮನೇ ನಿಂತಿದ್ದೆ ಕಣಪ್ಪಾ, ಕೇಳಿಸ್ತು.

ಗಂಡ : ಒಳಗೆ ಓದ್ಕೊ ಅಂದ್ರೆ ಯಾಕೆ ಕೇಳಿಸ್ಕೊಂಡೆ ?

ಗಾಯತ್ರಿ : ಓದುವಾಗಲೆಲ್ಲ ಕಿವಿಗೆ ಪ್ಲಾಸ್ಟರ ಹಾಕ್ಕೊಳ್ಳೇಕೇನೋ ?

ಹೆಂಡತಿ : ಹೋಗ್ಲಿ ಬಿಡಿ, ನೀವು ಯಾಕೆ ಸುಳ್ಳು ಹೇಳ್ಬೇಕು ?

ಗಂಡ : ಹತ್ತು ರೂಪಾಯಿಗೆ ನಾನು ಸುಳ್ಳು ಹೇಳಬೇಕಾಗಿಲ್ಲ ಅವನು ಕೇಳಿದ್ದು ಮೂವತ್ತು—ನಾನು ಕೊಡಲೇಬೇಕು.

ಹೆಂಡತಿ : ಮೂವತ್ತ್ಯಾಕೆ, ಐವತ್ತು ಕೊಡಿ.

ಗಂಡ : ಕೊಡ್ತೇನೆ.

ಹೆಂಡತಿ : ಆದರೆ ಅದಕ್ಕೆ ಸುಳ್ಳು ಹೇಳಬೇಕಿಲ್ಲ.

ಗಂಡ : ನಿನ್ನ ಮನಸ್ಸಿನಲ್ಲಿ ಏನಿದೆ ಅಂತ ನನಗೆ ಗೊತ್ತು—ನೀನು ಕೊಡಿ ಅಂತ ಸರಿಯಾಗಿ ಹೇಳಬೇಕು.

ಹೆಂಡತಿ : [ಕೃತಕವಾಗಿ ನಕ್ಕು] ಸರಿಯಾಗೇ ಹೇಳ್ತಿದೇನೆ, ಕೊಡಿ—

ಗಂಡ : ನೋಡು, ಈ ನಗರದಲ್ಲಿ ಲೆಕ್ಕವಿಲ್ಲದಷ್ಟು ಜನರಿದ್ದಾರೆ, ಲಕ್ಷ ಲಕ್ಷ ಜನ. ಅದರಲ್ಲಿ ನಮಗೆ ಗೊತ್ತಿರೋರು ಇಪ್ಪತ್ತೋ, ಮೂವತ್ತೋ ಜನ. ಮಾತಾಡಿ, ಬರೆದು ಗಿಲೀಟು ಮಾಡಿ, ಜೂಜಾಡಿ, ದುಡಿದು ತಿನ್ನೋಜನ—ಪೂಜೆಯ ಮಂದಿ, ಮಂತ್ರದ ಮಂದಿ, ಮಾತಿನ ಮಂದಿ, ಮೋಸದ ಮಂದಿ, ಬೀದೀಲಿ ಹೋಗ್ತಾ ಇದ್ದಾಗ ಇರುವೆಯ ಗುಂಪಿನಂತಹ ಜನ, ಒಬ್ಬರಿಗೊಬ್ಬರು ಗೊತ್ತಿಲ್ಲದ, ಹುಷಾರಾಗಿ ಬದುಕೋ ಜನ. ತಮ್ಮ ನಿರಾಶೆಯನ್ನು, ಸೋಲನ್ನ, ಕಣ್ಣೀರನ್ನ—ಬಚ್ಚಿಟ್ಟ ಜನ: ಇದ್ದ ಒಂದೇ ಬಟ್ಟೆಯನ್ನು ರಾತ್ರಿ ಒಗೆದು ಬೆಳಿಗ್ಗೆ ಹಾಕ್ಕೊಳ್ಳೊ ಜನ. ಇದ್ದ ಒಂದೇ ಒಂದು ವ್ಯಕ್ತಿಯನ್ನು ಕಳೆದುಕೊಂಡು ಒಬ್ಬಂಟಿಯಾದ ಜನ—ನೋಡು ಗಂಗು ನಾವು ಈ ಊರಿಗೆ ಬಂದ ಮೇಲೆ ಒಬ್ಬರಿಗೂ ಒಂದು ರೂಪಾಯಿ ದಾನ ಮಾಡಿಲ್ಲ.

ಈ ವ್ಯಕ್ತಿಗೆ ನಾವು ಸಹಾಯ ಮಾಡಬೇಕು.

ಹೆಂಡತಿ : ಅವನ ಹೆಸರೇನು ?

ಗಂಡ : ಗೊತ್ತಿಲ್ಲ.

ಹೆಂಡತಿ : ಅವನು ಎಲ್ಲಿದ್ದಾನೆ.

ಗಂಡ : ಗೊತ್ತಿಲ್ಲ.

ಹೆಂಡತಿ : ಅವನಿಗೆ ನಮ್ಮ ಮನೆ ಹೇಗೆ ಗೋತ್ತಾಯ್ತು ?

ಗಂಡ : ಗೊತ್ತಿಲ್ಲ, ಗೊತ್ತಿಲ್ಲ, ಸರಿ, ಕೊಟ್ಬುಕೊಳ್ಳಿ, ನನಗೂ ಅದಕ್ಕೂ ಸಂಬಂಧವಿಲ್ಲ – ನೀವು ದುಡಿಯೋರು, ನೀವು ಕೊಡೋರು. ನನಗ್ಯಾಕೆ ?

[ಹೋಗವಳು, ಗಾಯಿತ್ರಿ ಬಾಗಿಲು ಹಾಕಿಕೊಂಡು ಬರುವಳು. ಅಪ್ಪ ಕೂತಿರುವನು, ಕೊಂಚ ಮೌನ]

ಗಾಯತ್ರಿ : ಅವನು ತುಂಬಾ ಒಳ್ಳೆಯವನ ಹಾಗಿದ್ದಾನೆ. ಅಲ್ವೇನಪ್ಪ ?

[ಅವಳನ್ನೇ ನೋಡುವನು]

ಅಪ್ಪ : [ಕುತೂಹಲದಿಂದ] ಹೌದ ? ಹ್ಯಾಗೆ ಒಳ್ಳೆಯವನು ಅಂತಿ ?

ಗಾಯತ್ರಿ : ಕೆಲವರನ್ನು ನೋಡಿದ್ರೆ ಒಳ್ಳೆಯವರು ಅನಿಸುತ್ತೆ.

ಅಪ್ಪ : ಅವನ ತಂದೆ ಸತ್ತಿದ್ದು ನಿಜವಿರಬಹುದೆ ?

ಗಾಯತ್ರಿ : ಸುಳ್ಳು ಯಾಕಪ್ಪ ಹೇಳ್ತಾನೆ ?

ಅಪ್ಪ : ಯಾಕೆ ಹೇಳಬಾರದು ?

ಗಾಯತ್ರಿ : ಎಲ್ರೂ ಸುಳ್ಳು ಹೇಳಲ್ಲ,

ಅಪ್ಪ : ಇಂದವರೇ ಸುಳ್ಳು ಹೇಳ್ತಾರೆ, ಇಂತಹವರು ಹೇಳಲ್ಲ ಅಂತ ಹ್ಯಾಗೆ ಹೇಳೋದು ? ಲಕ್ಷಾಂತರ ಜನ ಇರೋ ಊರು ಇದು. ಏನನ್ನಾದ್ರೂ ಹೇಳಬಹುದು — ಏನನ್ನಾದ್ರೂ ನಂಬಿಸಬಹುದು.

ಗಾಯತ್ರಿ : ಹಾಗಾದ್ರೆ ಯಾರನ್ನು ನಂಬೋಕಾಗೋಲ್ಲ ?

ಅಪ್ಪ : ಮೂವತ್ತು ರೂಪಾಯಿ ಹೆಚ್ಚಲ್ಲ.

ಗಾಯತ್ರಿ : ಮತ್ತೆ ?

ಅಪ್ಪ : ಮೋಸ—

ಗಾಯತ್ರಿ : ಅಂದ್ರೆ ?

ಅಪ್ಪ : ಮೋಸ ಹೋದ್ರೆ ಅದೇ ಯೋಚನೆ ಮನಸ್ಸನ್ನು ತಿನ್ನುತ್ತೆ ನನ್ನ ಆತ್ಮ ಗೌರವಕ್ಕೆ ಧಕ್ಕೆ ಬರುತ್ತೆ.

ಗಾಯತ್ರಿ : ಹಾಗಂದ್ರೇನಪ್ಪ.

ಅಪ್ಪ : ಇದೊಂದು ಯುದ್ಧ ಗಾಯಿತ್ರಿ. ಶತ್ರುಗಳು ದಂಡೆತ್ತಿ ಬರ್ತಾರೆ. ನಾವು ಅವರನ್ನು ಎದುರಿಸಲೇಬೇಕು. ಅದಕ್ಕೆ ತಕ್ಕ ರೀತಿಯಲ್ಲಿ ಸೈನ್ಯವನ್ನು ತರಬೇತಿ ಮಾಡಬೇಕು. ವ್ಯೂಹ ರಚಿಸಬೇಕು.

ಗಾಯತ್ರಿ : [ಇದ್ದಕ್ಕಿದ್ದಂತೆ ನಕ್ಕು] ಹೌದ ? ದೊಡ್ಡ ಸೈನ್ಯಾನಾ ? ಕತ್ತಿ ಬಂದೂಕು, ಫಿರಂಗಿ—

ಅಪ್ಪ : ನಿನಗೆ ತಿಳಿಯೋಲ್ಲ.

ಗಾಯತ್ರಿ : ಅಂತೂ ಅವನಿಗೆ ದುಡ್ಡು ಕೊಡಬಾರದು.

ಅಪ್ಪ : ಆದ್ರೆ ಈತ ಒಳ್ಳೇ ಮನುಷ್ಯ.

ಗಾಯತ್ರಿ : ಹ್ಯಾಗೆ ಗೊತ್ತು ?

ಅಪ್ಪ : ನೀನೇ ಹೇಳಿದೆಯಲ್ಲ—

ಗಾಯತ್ರಿ : [ಗೆಲುವಿನಿಂದ] ಹಾಂ ನಾನೇ ಗೆದ್ದೆ.

[ಒಳಕ್ಕೆ]

ಅಮ್ಮಾ, ನಾನೇ ಗೆದ್ದೆ—

ಅಪ್ಪ : [ಅಷ್ಟೇ ಧ್ವನಿ ಎತ್ತರಿಸಿ] ಆದ್ರೆ ಒಳ್ಳೇ ತನ ಇಟ್ಟುಕೊಂಡು ಏನು ಮಾಡಬೇಕು ? ತಂದೆ ಶವ ಸುಡೋದಕ್ಕೆ

ಅಂತ ನಾಲ್ಕು ಕಾಸು ಕೊಡಿಟ್ಟಿಲ್ಲ ಮುತ್ಮಾಳ—

[ಹೆಂಡತಿ ಪ್ರವೇಶ]

ಹೆಂಡತಿ : ಪರವಾಗಿಲ್ಲ ನಿಮಗೂ ಮುತ್ಮಾಳರು ಗೊತ್ತು.

ಗಂಡ : ಗೊತ್ತು. ಆದರೆ ಮುತ್ಮಾಳರಿಗೂ ತಂದೆ, ತಾಯಿ ಇರ್ತಾರೆ —ಸ್ನೇಹಿತರಿರ್ತಾರೆ–ಅವರ ಹೆಣವನ್ನು ಸುಡಬೇಕಾಗುತ್ತದೆ, ಪರಿಚಯ ಇರೋರು ಸಹಾಯ ಮಾಡಬೇಕಾಗುತ್ತೆ.

ಹೆಂಡತಿ : ಇಷ್ಟಕ್ಕೆಲ್ಲ ನೀವು ಯಾಕೆ—

ಗಂಡ : ಹಣ ಹೋಗುತ್ತೆ. ಬರುತ್ತೆ. ಆದರೆ ನಮ್ಮ ಗೋಳು, ನಮ್ಮ confusion ಉಳಿಯುತ್ತೆ. ಯಾರು ಕೆಟ್ಟವರು, ಯಾರು ಒಳ್ಳೆಯವರು: ಯಾರು ಬೇಕು. ಯಾರು ಬೇಡ: ಯಾವುದು ಜಿಂಕೆ, ಯಾವುದು ಹುಲಿ: ಯಾವುದನ್ನು ಕೊಲ್ಲಬೇಕು ಯಾವುದನ್ನು ಬದುಕಿಸಬೇಕು—

ಹೆಂಡತಿ : ಹೀಗೆ ಮಾತಾಡಿದ್ರೆ ಹ್ಯಾಗೆ ಅರ್ಥವಾಗಬೇಕು—

ಗಂಡ : [ಗಮನಿಸದೆ] ಹತ್ತು ವರ್ಷದಿಂದ ನಾನು ಬಲ್ಲ ಸ್ನೇಹಿತರು ನನಗಿನ್ನೂ ಸಮಸ್ಯೆ. ಹತ್ತು ಜನರ ಪರಿಚಯ ನನ್ನ ಇಳಕ್ಕೆ ಇಳಿದು ಮನಸ್ಸನ್ನು ಅಲ್ಲಾಡಿಸುತ್ತೆ. ಅವರ ಚರ್ಮ ಹೊಕ್ಕು ನೋಡುವ ದಾರಿ ನಮಗಿಲ್ಲ. ಅವರನ್ನು ಮುಟ್ಟಿ ನೋಡಿದರೆ ಗೊತ್ತಾಗೋಲ್ಲ. ಅವರೊಂದಿಗೆ ಹರಟಿದರೆ ಗೊತ್ತಾಗೋಲ್ಲ. ಅವರೊಂದಿಗೆ ಜಗಳ ಆಡಿದರೆ ಗೊತ್ತಾಗೋಲ್ಲ.

[ಅವಳ ದಿಗ್ಭ್ರಮೆ ಗಮನಿಸಿ ನಕ್ಕು]

ಕೊಂಚ ಕಾಫಿ ಕೊಡು ಗಂಗೂ, ಯಾಕೆ ಹೀಗೆ ನೋಡ್ತೀದ್ದೀ ನನಗೇನೂ ಆಗಿಲ್ಲ. ಕಾಲು ಚೀಲ ತೊಳೆದಿದ್ದೀಯ? ಶರ್ಟಿನ ಇಸ್ತ್ರಿ ಆಗಿದೆಯಾ ?

[ಕತ್ತಲು ತೆರೆ]

## ಎರಡನೆಯ ದೃಶ್ಯ

[ಬಾಗಿಲು ಬಡಿದ ಸದ್ದು. ಗಂಡ ಬಟ್ಟೆ ಬದಲಿಸಿ ಹೆಗಲ ಮೇಲೆ ಟವಲ ಹಾಕಿಕೊಂಡಿದ್ದಾನೆ. ಸದ್ದು ಕೇಳಿ ಬಾಗಿಲವರೆಗೆ ಬಂದು ನೋಡುತ್ತಾನೆ.]

ಗಂಡ : ಓ, ಹೊರಗೆ ಯಾಕೆ ನಿಂತಿದ್ದೀ—ಬಾ.

[ವ್ಯಕ್ತಿ ಬರುತ್ತಾನೆ]

ಇಷ್ಟು ದಿನ ನಿನ್ನನ್ನು ನೋಡಿದ್ದೇನೆ. ನಿನ್ನ ಹೆಸರೇ ನನಗೆ ಗೊತ್ತಿಲ್ಲವಲ್ಲ ?

[ಮೌನ]

ಕಿವಿ ಕೇಳಿಸೋಲ್ವಾ ? ನಿನ್ನ ಹೆಸರೇನು ?

ವ್ಯಕ್ತಿ : ಮುನಿಸ್ವಾಮಿ, ಸಾರ್.

ಗಂಡ : ನಿನ್ನ ತಂದೆ ಹೆಸರೇನು ?

ವ್ಯಕ್ತಿ : ವೆಂಕಟಸ್ವಾಮಿ, ಸಾರ್.

ಗಂಡ : ಆತ ಏನು ಕೆಲಸ ಮಾಡ್ತಿದ್ದ ?

ವ್ಯಕ್ತಿ : ನನ್ನ ಹಾಗೇ ಸಾರ್.

ಗಂಡ : ತಿಂಗಳಿಗೆ ನಿನ್ನ ಆದಾಯ ಎಷ್ಟು ?

[ಮೌನ]

ಕೇಳಿಸಲಿಲ್ಲವೇ ? ತಿಂಗಳಿಗೆ ಎಷ್ಟು ದುಡೀತಿ ?

ವ್ಯಕ್ತಿ : ಐವತ್ತೋ ಅರವತ್ತೋ ಸಲ.

ಗಂಡ : ನಿನ್ನ ಮನೆ ಎಲ್ಲಿ ?

ವ್ಯಕ್ತಿ : ಎಡಿಯೂರ ಹತ್ರ ಸಾರ.

ಗಂಡ : ಬಾಡಿಗೆ ಎಷ್ಟು ಕೊಡ್ತಿ ?

ವ್ಯಕ್ತಿ : ಐದು ರೂಪಾಯಿ, ಸಾರ.

ಗಂಡ : ಅಂತೂ ಒಂದು ಪೈಸೆ ಕೂಡ ಉಳಿಸಿಲ್ಲ ?

[ಮೌನ]

ತಂದೆಯ ಶವಸಂಸ್ಕಾರಕ್ಕೆ ದುಗ್ಗಾಣಿ ಇಲ್ಲ ?

[ಮೌನ]

ನಿನಗೆ ಕಾಯಿಲೆ ಆದ್ರೆ ಗತಿ ಏನು ?

[ಮೌನ]

ನಿನ್ನ ತಾಯಿಗೆ ಕಾಯಿಲೆ ಆದ್ರೆ ಏನು ಮಾಡ್ತೀ ?

[ಮೌನ]

ನನ್ನ ಮಾತು ಕಿವಿ ಮೇಲೆ ಬೀಳ್ತಾ ಇದೆಯೋ ? ನೀನು ಕೈ ಚಾಚಿದಾಗಲೆಲ್ಲ ಯಥಾಯೋಗ್ಯ ನಿನಗೆ ದುಡ್ಡು ಕೊಡ್ತಾರೆ ?

[ತನ್ನ ಕ್ರೌರ್ಯಕ್ಕೆ ತಾನೇ ನಾಚಿಕೊಂಡು]

ನೋಡು, ನಾನು ನಿನ್ನ ಒಳ್ಳೇಯದಕ್ಕೆ ಹೇಳ್ತಿರೋದು. ಇಂಥ ಪಟ್ಟಣದಲ್ಲಿ ನಮ್ಮ ಹುಷಾರಿ ನಮ್ಮ ಕೈಯಲ್ಲಿರ ಬೇಕು.

[ಹಿತವಚನವು ಅಸಂಗತವೆನಿಸಿ]

ಆಮೇಲೆ, ಒಂದರ್ಧ ಗಂಟೆ ಬಿಟ್ಕೊಂಡು ಬಾ, ಮೂವತ್ತು

ರೂಪಾಯಿ ಆಗಲ್ಲ ಅಂತ ಕಾಣುತ್ತೆ. ಇಪ್ಪತ್ತು ಕೊಡ ಬಹುದು.

[ಆತ ನಿಧಾನಕ್ಕೆ ಹೋಗುವಸು ಗಾಯಿತ್ರಿಯ ಪ್ರವೇಶ]

ಗಾಯತ್ರಿ : ಯಾಕಪ್ಪ ಹಾಗೆ ಅವನ್ನ ಬೈತಿದ್ದೆ ?

ಅಪ್ಪ : ನೀನು ಸುಮ್ಮನಿರಮ್ಮ.

ಗಾಯತ್ರಿ : ಅವನು ಮೋಸಗಾರ ಅಲ್ಲ ಅನ್ಸುತ್ತೆ.

ಅಪ್ಪ : ಸರಿ, ಅವನು ಮೋಸಗಾರ ಅಲ್ಲ.

ಗಾಯತ್ರಿ : ಹಾಗಾದರೆ ಬೈದದ್ದು ಯಾಕೆ ?

ಅಪ್ಪ : ತಮಾಷೆಗೆ ಬೈದೆ,

ಗಾಯತ್ರಿ : ಹೌದೆ ? ತಮಾಷೆಗೆ ಬೈತಾರೆಯು ?

ಅಪ್ಪ : ಯಾಕೆ ಬೈಯೋಲ್ಲ ? ನಾಟಕದಲ್ಲಿ ಬೈಯೋಲ್ಲವೆ ?

ಗಾಯತ್ರಿ : ನೀನು ಬೈದದ್ದು ತಮಾಷೆಗಲ್ಲ—ನನಗ್ಗೊತ್ತು.

ಅಪ್ಪ : ಹೌದು. ಸೀರಿಯಸ್ಸಾಗಿಯೇ ಬೈದೆ.

ಗಾಯತ್ರಿ : ಯಾಕೆ ?

ಅಪ್ಪ : ತಮಾಷೆಗೆ—ಸೀರಿಯಸ್ಸಾಗಿ ಬೈದೆ—

[ಅವನ ಉತ್ತರ ಬೇಸರಗೊಂಡು ಬೇರೆ ವಿಷಯ ಎತ್ತುವಳು]

ಗಾಯತ್ರಿ : ಅಪ್ಪಾ, ಇವತ್ತು ಏನಾಯ್ತು ಗೊತ್ತ ?

ಅಪ್ಪ : ಏನಾಯ್ತು ?

ಗಾಯತ್ರಿ : ನಮ್ಮ ಸ್ಕೂಲಿನಲ್ಲಿವತ್ತು ಕಪ್ಪೆ ಕೊಟ್ಟದ್ರು—ಡಿಸ್ಸೆಕ್ಷನಗೆ.

ಅಪ್ಪ : ಗೊತ್ತು. ಅದನ್ನು ನೀನು ಕತ್ತರಿಸಿದೆ.

ಗಾಯತ್ರಿ : ಥತ. ಸುಮ್ನೀರಪ್ಪ ಅಂತೀನಿ—ಅದನ್ನು ಹಿಡಿದು ತರೋವಾಗ ಸಾಯಿಸೇ ಇರಲಿಲ್ಲ.

ಅಪ್ಪ : ಸರಿ, ನೀನು ಸಾಯಿಸಿದೆ.

ಗಾಯತ್ರಿ : ಮಧ್ಯೆ ಬಾಯಿ ಹಾಕಬೇಡಪ್ಪ ಅಂದ್ರೆ—

ಅಪ್ಪ : ಬೇಗ ಬೇಗ ಹೇಳಿಬಿಡು.

ಗಾಯತ್ರಿ : ಅದನ್ನ ನೋಡಿದೆ, ಹ್ಯಾಗೆ ಪಿಳಿ ಪಿಳಿ ಕಣ್ಣು ಬಿಡ್ತಿತ್ತು ಅಂತೀಯ. ಅದರ ಜೀವ ಎಲ್ಲಿರುತ್ತೆ, ಹ್ಯಾಗೆ ಹೋಗುತ್ತೆ ಅಂತ ನೋಡಬೇಕು ಅಂತ—ಕತ್ತರಿಸಿದೆ. ನಿಧಾನಕ್ಕೆ ಕತ್ತರಿಸಿದೆ. ಹೊಟ್ಟೆ ಕತ್ತರಿಸಿದೆ. ನರಾನೆಲ್ಲ ಬಿಡಿಸಿದೆ—ಆದ್ರೆ ಜೀವ ಹೊರಟೇಹೋಗಿತ್ತು.

ಅಪ್ಪ : ಹಾಗೆ ಗೊತ್ತಾಗೋಲ್ಲ, ಜೀವ ಹ್ಯಾಗಿರುತ್ತೆ ಅಂತ ಗೊತ್ತಾಗೋದು ಅದು ಒಟ್ಟಿಗೆ ಇದ್ದಾಗ, ಕತ್ತರಿಸೋಕೆ ಮುಂಚೆ.

ಗಾಯತ್ರಿ : ಹಾಗಾದ್ರೆ ಕತ್ತರಿಸದೇ ಇದ್ದದ್ದಕ್ಕೆಲ್ಲ ಜೀವ ಇರುತ್ತಾ ?

ಅಪ್ಪ : ಹಾಗಲ್ಲ, ಜೀವ ಇದ್ರೆ ಒಂದು ಕಳೆ ಇರುತ್ತೆ.

ಗಾಯತ್ರಿ : ಅಲ್ದೆ ಇದ್ರೆ ?

ಅಪ್ಪ : ಇಲ್ಲದೇ ಇದ್ರೆ—ಹೆಣ, ತಣ್ಣಗಿರುತ್ತೆ.

ಗಾಯತ್ರಿ : ಇಲ್ಲದೇ ಇದ್ರೆ ?

ಅಪ್ಪ : ಹೆಣವಲ್ಲದೇ ಇದ್ರೆ ?
ಉಸಿರಾಡುತ್ತೆ, ಬೆಚ್ಚಗಿರುತ್ತೆ.
ಮೊಟ್ಟೆ ಇಡುತ್ತೆ, ಮರಿ ಮಾಡುತ್ತೆ.

ಗಾಯತ್ರಿ : ಹಾ ! ಸಿಕ್ಕಿ ಹಾಕ್ಕೊಂಡೆ. ಮನುಷ್ಯರು ಮೊಟ್ಟೆ ಇಡೋಲ್ಲ !

ಅಪ್ಪ : ಪೆದ್ದೀ, ಮನುಷ್ಯರಿಗೆ ಜೀವ ಇದ್ರೆ ಗೊತ್ತಾಗೋಲ್ವ ?

ಗಾಯತ್ರಿ : ಗೊತ್ತು, ಉಸಿರಾಡ್ತಾರೆ. ಬೆಚ್ಚಗಿರ್ತಾರೆ.
ಮೊಟ್ಟೆ ಇಡ್ತಾರೆ, ಮರಿ ಮಾಡ್ತಾರೆ.

ಅಪ್ಪ : ಸರಿ, ಇವತ್ತಿಗೆ ನಿನ್ನ ಜ್ಞಾನಾರ್ಜನೆ ಇಷ್ಟು ಸಾಕು. ಹೋಗು.

ಗಾಯತ್ರಿ : ತಮಾಷೆ ಮಾಡೊಲ್ಲ. ಹೇಳಪ್ಪ. ಮನುಷ್ಯರ ಜೀವ ಹ್ಯಾಗೆ ಗೊತ್ತಾಗುತ್ತೆ ?

ಅಪ್ಪ : ಸುಖ, ದುಃಖ, ಪ್ರೀತಿ ವಿಶ್ವಾಸ—ಎಲ್ಲಾ ಇರುತ್ತೆ.

[ಹೆಂಡತಿ ಪ್ರವೇಶ]

ಹೆಂಡತಿ : ಪ್ರೀತಿ–ವಿಶ್ವಾಸದ ಮಾತು ಮುಗೀತ ? ನೋಡಿ ಖರ್ಚಿನ ಲಿಸ್ಟ ತಂದಿದೀನಿ.

ಗಂಡ : ತಂದೆಯಾ ? ಬಾ, ಎಷ್ಟು ? ಬೇಳೆ ಮೂರು ಕೇಜಿ ತಾನೆ ?

ಹೆಂಡತಿ : ಕೊತ್ತುಂಬರಿ ಅರ್ಧ ಕೇಜಿ.

ಗಂಡ : ಕಡ್ಲೆಕಾಯಿ ಎಣ್ಣೆ ಎರಡು ಕೇಜಿ, ರವೆ ನಾಲ್ಕು ಕೇಜಿ.

ಹೆಂಡತಿ : ಬೆಣ್ಣೆ ಎರಡು ಕೇಜಿ, ಅಕ್ಕಿ ಇಪ್ಪತ್ತು ಕೇಜಿ.

ಗಂಡ : ಸರಿ, ಈರುಳ್ಳಿ ನಲವತ್ತು ಕೇಜಿ, ಸೀರೆ ಐವತ್ತು ಕೇಜಿ.

ಹೆಂಡತಿ : ಸಿಗರೇಟು ನೂರು ಕೇಜಿ....

ಗಂಡ : [ಸಿಗರೇಟು ಹಚ್ಚಿ]

ಹ ಹಾ ! ಸಿಗರೇಟಿನ ಹೊಗೆ ವರ್ತುಳ ವರ್ತುಳ
ಧೂಪ ಧೂಮ ಲೀಲೆ
ವಿವಿಧ ರೂಪ ವಿಹ್ವಲ ವಿಲಾಪಗಳು
ವಿಕೃತ ಚಿತ್ರಗಳು ಗಾಳಿಯಲೆಯ ಮೇಲೆ ತೇಲೆ...

ಹೆಂಡತಿ : ಅದೇನು ಆನಂದವೋ

ಗಂಡ : ತೇಲೆ, ತೇಲೆ, ತೇಲೆ
ಹೊಗೆಯದು ಗಾಳಿಯಲೆಯ ಮೇಲೆ...

ಹೆಂಡತಿ : ನಾನಿನ್ನು ಬರ್ತೀನಿ. ಈ ಹುಚ್ಚು ನೋಡೋಕಾಗೋಲ್ಲ.

ಗಂಡ : ಹುಚ್ಚಲ್ಲ. ಸಂತೋಷ. ಉಪ್ಪಿಟ್ಟು ರೆಡೀನ ? ತಗೊಂಡು ಬಾ. ಹಲ್ಲು ಉಜ್ಜುತ್ತೇನೆ. ಬಾಯಿ ತೋಳೀತೇನೆ. ಅಚ್ಚು ಕಟ್ಟಾಗಿ ತಿಂತೇನೆ. ಮಗು ಎಲ್ಲಿ, ಪಕ್ಕದ ಮನೆಗೆ ಕಳಿಸಿ ದೆಯಾ ? ಸರಿ. ನಮ್ಮ ಮನೆ ಎಷ್ಟು ಚೆನ್ನಾಗಿದೆ. ನಮಗೆ ಇಬ್ಬರೇ ಮಕ್ಕಳು.
ಒಂದು ಹೆಣ್ಣು, ಒಂದು ಗಂಡು,
ಒಬ್ಬಳೇ ಹೆಂಡತಿ...
ಇವತ್ತು ಹವೆ ಎಷ್ಟು ಚೆನ್ನಾಗಿದೆ. ಲಾಲಬಾಗನಲ್ಲಿ ಹೂ ಈಚೆಗೆ ಎಷ್ಟು ಚೆನ್ನಾಗಿ ಅರಳಿವೆ ಅಂತೀಯಾ ? ಅಲ್ವೆ ಆ ದರಿದ್ರ ಸೀರೇಲೂ ಎಷ್ಟು ಚೆನ್ನಾಗಿ ಕಾಣಿಸ್ತೀಯಾ ? ಯಾಕೆ. ಹಾಗೆ ನೋಡ್ತಿದೀಯ ?

ಹೆಂಡತಿ : ನಿಮ್ಮ ಪ್ಲಾನ ನನಗೆ ಗೊತ್ತು. ನಿಮ್ಮ ಹಜಾಮ ಈಗ ಬರ್ತಾನೆ ತಾನೆ ?

ಗಂಡ : ಹುಚ್ಚಿ, ಅವನಿಗೆ ಚೆನ್ನಾಗಿ ಬೈದು ಕಳಿಸಿದೀನಿ. ಮುಖ ಎತ್ತದ ಹಾಗೆ ಮಾತಾಡಿ ಕಳಿಸಿದೇನೆ.

ಹೆಂಡತಿ : ಏನಂತ ಬೈದಿರಿ ?

ಗಂಡ : ನಿನ್ನ ಹೆಸರೇನು, ಅಂದೆ ;
ನಿಮ್ಮಪ್ಪನ ಹೆಸರೇನು ಅಂದೆ ;
ನಿನ್ನ ವಾಸ ಎಲ್ಲಿ ಅಂತ ಕೇಳಿದೆ ;
ನೀನು ಎಷ್ಟಯ್ಯ ದುಡೀತಿ ತಿಂಗಳಿಗೆ, ಅಂತ ಕೇಳಿದೆ ;
ಕಂಡ ಕಂಡವರನ್ನು ದುಡ್ಡು ಕೇಳೋಕೆ ನಾಚಿಕೆ ಆಗೋಲ್ಲವಾ ಅಂತ ಕೇಳಿದೆ—

ಹೆಂಡತಿ : ಅಷ್ಟಕ್ಕೆಲ್ಲಾ ನಾಚ್ಕೊಳ್ತಾನಾ ? ನೋಡಿ ಬಂದೇ ಬರ್ತಾನೆ.

ಗಂಡ : ಅವನು ಮಿಕ್ಕೋರ ಹಾಗಲ್ಲ. ತುಂಬಾ ಸಂಕೋಚದ ಮನುಷ್ಯ.

ಹೆಂಡತಿ : ನಿಮಗಿನ್ನೂ ಅವನ ಮೇಲಿನ ನಂಬಿಕೆ ಹೋಗಿಲ್ಲ ?

ಗಂಡ : ಮೂವತ್ತು ರೂಪಾಯಿಗೆ ನಂಬಿಕೇನ ಕೊಡಾಕಾಗೋಲ್ಲ, ಕೊಳ್ಳಾಕಾಗೊಲ್ಲ.

ಹೆಂಡತಿ : ಸರಿ, ನಾನು ವಾದ ಮಾಡೋಲ್ಲ. ಆದ್ರೆ ಹೇಳಿ, ಆತ ಯಾಕೆ ದುಡ್ಡು ಕೇಳಬೇಕಿತ್ತು ?

ಗಂಡ : ಚಿಕ್ಕ ವಯಸ್ಸು, ಸಿನಿಮಾಕ್ಕೆ ಹೋಗಬಹುದು. ರೇಸ ಆಡಬಹುದು—

ಹೆಂಡತಿ : ಅದಕ್ಕಲ್ಲ ನಾವು ದುಡ್ಡು ಕೊಟ್ಟು—

ಗಂಡ : ಸರಿ, ಆ ವಿಷಯ ಬಿಡು, ಪಾಪನ್ನ ಕರಕೊಂಡು ಬಾ. ಕಬ್ಬನ್ ಪಾರ್ಕ್‌ನಲ್ಲಿ ಪುಟ್ಟ ರೈಲಿದೆ ಇವತ್ತು ಸವಾರಿ ಮಾಡ್ಸೋಣ.

ಹೆಂಡತಿ : ಹಿಟ್ಟು ರುಬ್ಬಿದ್ದೇನೆ. ದೋಸೆ ಮಾಡ್ತೇನೆ ಹಾಗಾದ್ರೆ—

ಗಾಯತ್ರಿ : ರೇಸ ಹ್ಯಾಗಿರುತ್ತಪ್ಪ ?

ಹೆಂಡತಿ : ತೆಪ್ಪಗಿರೆ. ರೇಸ ಹ್ಯಾಗಿರುತ್ತಂತೆ.

ಗಂಡ : ಅಥವಾ ನಂದಿಗೆ ಹೋಗಬಹುದು. ಹ್ಯಾಗೂ ನಾಳೆ ರಜಾ. ಏನಂತಿ ? ನಾವು ಈಚೆಗೆ ಎಲ್ಲೂ ಹೋಗಿಲ್ಲ. ಅಲ್ಲೇ ಇದ್ದು ಬಿಟ್ಟು ನಾಳೆ ಬರಬಹುದು.

ಹೆಂಡತಿ : ಹೌದಲ್ಲವಾ ? ಎಷ್ಟು ಚೆನ್ನಾಗಿರುತ್ತೆ. ಚಳಿಯಾಗುತ್ತೆ— ಮಗೂಗೊಂದು ಸ್ವೆಟರ ತಗೊಳ್ಳಿ.

ಗಾಯತ್ರಿ : ಅಪ್ಪ, ಒಂದೊಂದು ರೇಸನಲ್ಲಿ ಎಷ್ಟು ಕುದುರೆ ಇರುತ್ತಪ್ಪ ?

ಗಂಡ : ನನಗೊತ್ತಿಲ್ಲ, ಮರಿ.

ಗಾಯತ್ರಿ : ಅಷ್ಟೂ ಗೊತ್ತಿಲ್ಲ ? ಏನು ಪೆದ್ದಪ್ಪ, ಅಪ್ಪ ನೀನು, ಮುನಿಸ್ವಾಮಿಗೆ ಎಲ್ಲಾ ಗೊತ್ತು.

ಗಂಡ : ಸರಿ ಅವನನ್ನೇ ಕೇಳು.

ಹೆಂಡತಿ : ಅಲ್ಲ ನಮ್ಮ ಪಾಪಂಗೆ ಜಾರುಬಂಡೆ ಅಂದ್ರೆ ಎಷ್ಟು ಇಷ್ಟಾಂತ,

ಗಂಡ : ಹೂ ಅಂದ್ರೂ ಅಷ್ಟೆ.

ಹೆಂಡತಿ : ಮಕ್ಕಳು, ಪುಟಾಣಿ ಮಕ್ಕಳ ಕಂಡ್ರೆ ಅಪ್ಪಿಕೊಂಡು ಆಡುತ್ತೆ.

ಗಂಡ : ಅವನಿಗೊಂದು ಗೊಂಬೆ ಕೊಡಿಸ್ತೇನೆ.

[ಅಷ್ಟರಲ್ಲಿ ಬಾಗಿಲಲ್ಲಿ ಕಟಕಟ ಸದ್ದು. ಎಲ್ಲರೂ ಥಟ್ಟನೆ ನಿಶ್ಶಬ್ದದಿಂದ ನಿಲ್ಲುವರು. ಗಂಡ ಹೆಂಡತಿಯ ಕಡೆಗೆ ತಿರುಗಿದೊಡನೆ ಆಕೆ ಬಾಗಿಲ ವರೆಗೆ ಹೋಗಿ ನೋಡಿ ಬರುವಳು]

ಹೆಂಡತಿ : [ಪಿಸುಗುಟ್ಟುತ್ತಾ]

ಅವನೇ—

ಗಂಡ : ಹೌದ ?

ಹೆಂಡತಿ : ಈಗೇನು ಮಾಡೋದು ?

ಗಂಡ : ನಾನು ಮನೇಲಿಲ್ಲ ಅಂತ ಹೇಳು.

ಗಾಯಂತ್ರಿ : (ಗಟ್ಟಿಯಾಗಿ)

ಯಾಕಪ್ಪ ಪಿಸುಗುಟ್ತೀರಿ ?

ಹೆಂಡತಿ : ಶ್ಯ....

[ಬಾಗಿಲಲ್ಲಿ ನಿಲ್ಲುವಳು. ವ್ಯಕ್ತಿ ಸುಮ್ಮನೆ ನಿಂತಿರುವನು]

ಯಾರು ?

ವ್ಯಕ್ತಿ : ನಾನಮ್ಮ.

ಹೆಂಡತಿ : ನೀನು ಅಂದ್ರೆ ಯಾರಪ್ಪ ?

ವ್ಯಕ್ತಿ : ಕೊಂಚ ಯಜಮಾನ್ರನ್ನ ನೋಡಬೇಕಿತ್ತು.

ಹೆಂಡತಿ : ನೀನು ಅಂದ್ರೆ ಯಾರಪ್ಪ ?

ವ್ಯಕ್ತಿ : ಮುನಿಸ್ವಾಮಿನಮ್ಮ.

ಹೆಂಡತಿ : ಯಾವ ಮುನಿಸ್ವಾಮಿ ? ಏನು ಬೇಕಿತ್ತು ?

ವ್ಯಕ್ತಿ : ನಾನು ಕ್ಷೌರದವನು ತಾಯಿ. ಯಜಮಾನ್ರನ್ನ ನೋಡಬೇಕಿತ್ತು.

ಹೆಂಡತಿ : ಯಾಕೆ ?

[ಮೌನ]

ವ್ಯಕ್ತಿ : ಕೊಂಚ ಕೆಲಸ ಇತ್ತು.

ಹೆಂಡತಿ : (ಕೊಂಚ ರೇಗಿ)

ಎಂಥ ಕೆಲಸ ?

ಅವರು ಊರಲ್ಲಿಲ್ಲ.

(ಮೌನ)

ವ್ಯಕ್ತಿ : ಬಾ ಅಂತ ಹೇಳಿದ್ರು ?

ಹೆಂಡತಿ : ಅವರು ಊರಲ್ಲಿಲ್ಲವಲ್ಲ ?

(ಮೌನ)

ವ್ಯಕ್ತಿ : ಏನಾದ್ರೂ ಹೇಳಿದ್ರಾ ?

ಹೆಂಡತಿ : ಇಲ್ಲ.

(ಮೌನ)

ವ್ಯಕ್ತಿ : ಕೊಂಚ ದುಡ್ಡು ಕೊಡ್ತೇನೆ ಅಂದಿದ್ರು—

ಹೆಂಡತಿ : ಅವರು ಊರಲ್ಲಿಲ್ಲವಲ್ಲ ?

ವ್ಯಕ್ತಿ : ಕೊಡಲಿಲ್ಲವಾ ?

ಹೆಂಡತಿ : ಒಂದು ಸಲ ಹೇಳಿದರೆ ಆಗೋಲ್ಲವೇನಯ್ಯಾ ? ಅವರು ಊರಲ್ಲಿಲ್ಲ, ತಿಳೀತೆ ? ಏನೂ ಹೇಳಿಲ್ಲ. ಏನೂ ಕೊಟ್ಟಿಲ್ಲ: ನಾನು ಹೇಳೋದು ಕೇಳಿಸ್ತಿದೆಯಾ ?

ಗಾಯತ್ರಿ : ಅಪ್ಪಾ.

(ಅವಳ ಮಾತು ಎಲ್ಲರಿಗೂ ಕೇಳಿಸಿದೆ, ಮೌನ)

ವ್ಯಕ್ತಿ : ಸರಿ, ನಾನು ಬಂದಿದ್ದೆ ಅಂತ ಹೇಳಿ.

ಹೆಂಡತಿ : ಆಗಲಿ.

ವ್ಯಕ್ತಿ : (ಸ್ವಲ್ಪವೇ ವ್ಯಂಗ್ಯದಿಂದ)

ತಾವು ಆಗ ಊರಲ್ಲಿರಲಿಲ್ಲ ಅಂತ ಹೇಳಿ.

ಹೆಂಡತಿ : ಆಗಲಿ.

(ನಿಧಾನಕ್ಕೆ ಹೋಗುವನು. ಅವನು ಹೋದ ನೆಂಬಷ್ಟರಲ್ಲೇ)

ಗಾಯತ್ರಿ : ಅಪ್ಪಾ. ಯಾಕಪ್ಪಾ ಸುಳ್ಳು ಹೇಳಿದೆ ?

ಅಮ್ಮಾ, ಯಾಕಮ್ಮ ಬೈದೆ ?

ನಾನು ಹೇಳ್ತೇನೆ !

(ಕೊಂಚ ಕೊಂಚವೇ ಗಡುಸಾಗಿ ಮಾತ ನಾಡುತ್ತಾ, ಜಗತ್ತಿಗೇ ಸಾರುವವಳಂತೆ ಕೂಗು ವಳು)

ಅಪ್ಪ, ಅವನಪ್ಪ ಸತ್ತೀದಾನೆ, ನನಗ್ಗೊತ್ತು. ಅವನಪ್ಪ ಸತ್ತೀದಾನೆ. ಅವನು ಸುಳ್ಳು ಹೇಳ್ತಿಲ್ಲ....

ಅಪ್ಪ, ಇದಾರೆ. ನನ್ನಪ್ಪ ಮನೇಲೇ ಇದಾರೆ, ಎಲ್ಲೂ ಹೋಗಿಲ್ಲ...

(ನಿಧಾನಕ್ಕೆ ತಂದೆಯ ಹತ್ತಿರ ಬಂದು, ಅವನ ಮುಖ ನೋಡುತ್ತಾ)

ಅಪ್ಪ ಸತ್ತನಂತರ ಮುಖ ಹೇಗಿರುತ್ತಪ್ಪ ?

—ತೆರೆ—

ಪಾತ್ರಗಳು

ಪೋಲಿಸ
ರಾಜಿ
ಗೌರಮ್ಮ
ರತ್ನ
ವಿಶ್ವನಾಥ
ಫೋಟೋಗ್ರಾಫರ

[ಚಡ್ಡಿ, ಬನೀನ ಮಾತ್ರ ಧರಿಸಿರುವ ರಾಜಣ್ಣ
ಹಾಸಿಗೆಯಿಂದ ಮೆಲ್ಲಗೆ ಹೊದಿಕೆ ಸರಿಸಿ,
ಶಬ್ದವಾಗದಂತೆ ಜಾಗರೂಕತೆಯಿಂದ ಮೇಲೇ
ಳುತ್ತಾನೆ. ಮಂದವಾದ ಬೆಳಕಿನಲ್ಲಿ ಅವನ
ಹೆಂಡತಿ ರಾಜಿ, ಮಗಳು ರತ್ನ, ಮಗ
ವಿಶ್ವನಾಥ ಮತ್ತು ತಾಯಿ ಗೌರಮ್ಮ ಅವನ
ಸುತ್ತ ಮಲಗಿರುವದು ಕಾಣಸುತ್ತದೆ. ಅವರ
ನ್ನೆಲ್ಲಾ ಒಮ್ಮೆ ಸೂಕ್ಷ್ಮವಾಗಿ ಪರೀಕ್ಷಿಸಿ
ಅವರಿಂದ ಏನೂ ಅಪಾಯವಿಲ್ಲವೆಂದು ಖಚಿತ
ಪಡಿಸಿಕೊಂಡು ತನ್ನ ತಲೆದಿಂಬಿನಡಿಯಿಂದ
ಒಂದು ಸಿಮೆಂಟ ಚೀಲವನ್ನು ಹೊರಗೆಳೆಯು
ತ್ತಾನೆ. ಅನಂತರ ಮೆಲ್ಲನೆ ನಡಿಗೆ ಹಾಕುತ್ತಾ
ಮೂಲೆಯಲ್ಲಿದ್ದ ದೊಡ್ಡ ಉಕ್ಕಿನ ಪೆಟ್ಟಿಗೆಯ
ಬಾಗಿಲು ತೆಗೆದು ಅದರೊಳಗಿಂದ ಶರ್ಟು,
ಪ್ಯಾಂಟು. ಟವೆಲ, ಲಂಗೋಟಿ, ದುಪಟಿ,
ಪೈಜಾಮ, ಜುಬ್ಬ, ಬನೀನು, ಸೀರೆ,
ಕುಪ್ಪಸ. ಲಂಗ, ಲಾಡಿ. ಬೆಲ್ಟ. ಉಡಿದಾರ,
ಹರಕು ಬಟ್ಟೆಯ, ತುಂಡುಗಳು, ಲೋಟ,
ಚೆಂಬು, ಉದ್ಧರಣೆ, ಗಿಲಕಿ, ಸೌಟು, ಚಮಚೆ,
ಬಾಣಲೆ, ತಟ್ಟೆ, ಪೆನ್ನು, ಬಾಟಲುಗಳು,
ಪೆನ್ಸಿಲ, ಕಾಗದಗಳು, ಪುಸ್ತಕಗಳು, ಹಳೇ
ಕ್ಯಾಲೆಂಡರಗಳು, ಪಂಚಾಂಗಗಳು, ಮೊಳೆ,
ಹಗ್ಗ, ಚಾಕು, ಬಲ್ಬುಗಳು, ಚಪ್ಪಲಿಗಳು,
ಚೆಂಡು, ಬುಗುರಿ ಮುಂತಾದ ಆಟದ
ಸಾಮಾನುಗಳು, ಕಟ್ಟು ಹಾಕಿದ ಫೋಟೋ

ಗಳು, ಆಲ್ಬಮು, ಮಾಸಿದ ಹೂವಿನ ಹಾರ ಮುಂತಾದ ವಿವಿಧ ಪದಾರ್ಥಗಳನ್ನು ಆತುರಾತುರವಾಗಿ ಸಿಮೆಂಟ ಚೀಲಕ್ಕೆ ತುಂಬಿ, ತುರುಕಿ ಭರ್ತಿ ಮಾಡುತ್ತಾನೆ. ಚೀಲ ತುಂಬಿ ಮತ್ತೇನೂ ಹಿಡಿಸದಾದಾಗ ಬಲವಂತವಾಗಿ ಅಮುಕಿ ತುರುಕುತ್ತಾನೆ. ಕಡೆಗೆ ಇನ್ನೇನೂ ಹಾಕಲು ಸಾಧ್ಯವೇ ಇಲ್ಲವೆಂದು ಮನವರಿಕೆಯಾಗಿ ಚೀಲದ ಬಾಯನ್ನು ಕಟ್ಟಿ ಎಳೆದು ಬಾಗಿಲಿಗೆ ತಂದಿಟ್ಟು. ಗೂಟದಲ್ಲಿದ್ದ ಶರ್ಟ್, ಪ್ಯಾಂಟು ಧರಿಸಿ ಭಾರವಾದ ಚೀಲವನ್ನು ಪ್ರಯಾಸದಿಂದ ಮೇಲೆತ್ತಿ ಬೆನ್ನ ಮೇಲಿಟ್ಟುಕೊಂಡು ನಿಧಾನವಾಗಿ, ಆದರೆ ಕಾತುರದಿಂದ ಹೆಜ್ಜೆಹಾಕುತ್ತಾ ಬಾಗಿಲು ತೆರೆದು ಒಮ್ಮೆ ಹಿಂತಿರುಗಿ, ಮನೆಯಲ್ಲಿ ಮಲಗಿದ್ದವರನ್ನೆಲ್ಲಾ ನೋಡುತ್ತಾನೆ. ಒಮ್ಮಿಂದೊಮ್ಮೆಗೇ ಬೆಳಕು ಪ್ರಖರವಾಗಿ ನಿದ್ರಿಸುತ್ತಿದ್ದವರ ಮೇಲೆ ಬಿದ್ದು, ಅವರೆಲ್ಲಾ ಸ್ಪಷ್ಟವಾಗಿ ರಾಜಣ್ಣನಿಗೆ ಗೋಚರಿಸುತ್ತಾರೆ. ಬೆನ್ನ ಮೇಲೆ ಮೂಟೆ ಹೊತ್ತ ಅವನು ಅವರನ್ನೆಲ್ಲಾ ನೋಡುತ್ತಾ ಬಾಗಿಲು ತೆರೆದು ಹೊರಕ್ಕೆ ಹೆಜ್ಜೆಯಿಡುತ್ತಾನೆ. ಕತ್ತಲು.]

ಪೋಲೀಸ ಸ್ಟೇಶನ

[ಒಬ್ಬ ಪೋಲೀಸ ಅಧಿಕಾರಿ ಅವನ ಮುಂದೆ ರಾಜಿ ಕುರ್ಚಿಯಲ್ಲಿ ಕೂತಿದ್ದಾಳೆ.]

ಪೋಲೀಸ : ನಿಮ್ಮ ಮದುವೆಯಾಗಿ ಎಷ್ಟು ವರ್ಷ ಆಯ್ತು ?

ರಾಜಿ : ಊಂ, ಇಪ್ಪತ್ತು.

ಪೋಲೀಸ : ಈ ಮೊದಲು ಹೀಗೇನಾದ್ರೂ ಆಗಿತ್ತೇ ?

ರಾಜಿ : ಹೀಗೆ, ಅಂದ್ರೆ-ಇಲ್ಲ-ಆದ್ರೆ-

ಪೋಲೀಸ : ಆದ್ರೆ ? ಏನಾಗಿತ್ತು ?

ರಾಜಿ : ಏನೂ ಇಲ್ಲ ಒಮ್ಮೆ ಮಾತ್ರ, ಉಹುಂ, ಏನೂ ಆಗಿದ್ದಿಲ್ಲ.

ಪೋಲೀಸ : ಹುಷಾರ ಈಗ್ಲೇ ಹೇಳಿದೀನಿ, ನೀವು ಏನೋ ಮುಚ್ಚಿಡ್ತಿದೀರಿ.

ರಾಜಿ : ಏನೂ ಮುಚ್ಚಿಟ್ಟಿಲ್ಲ.

ಪೋಲೀಸ : ನನಗೆ ಸಂಶಯ.

ರಾಜಿ : ನಿರಾಧಾರವಾದದ್ದು.

ಪೋಲೀಸ : ಆಮೇಲೆ ನಿಮ್ಮ ಯಜಮಾನರು ಸಿಕ್ಕದೆ ಇದ್ರೆ ತಪ್ಪು ನಮ್ಮದಲ್ಲ.

ರಾಜಿ : ನಮ್ಮದೇ ?

ಪೋಲೀಸ : ನಮಗೆ ಸಂಪೂರ್ಣ ಸಹಕಾರ ಕೊಡದಿದ್ರೆ. ನಿಮ್ಮ ರಾಜಣ್ಣನ್ನ ನಾವು ಕಂಡುಹಿಡಿಯೋಕೆ ಸಾಧ್ಯವಾಗದೆ ಇರಬಹುದು...ಹೇಗೆ, ಒಮ್ಮೆ ಏನೋ ಆಗಿರಬೇಕು. ಇಂಥದು, ಜ್ಞಾಪಿಸಕೊಳ್ಳಿ. ನಮ್ಮ ಹತ್ತಿರ ಹೇಳೋಕೆ ನಾಚಿಕೆ

ಪಟ್ಕೊಳ್ಳಬಾರದು. ನಾವು ನಿಮ್ಮ ಸಹಾಯಕ್ಕೆ ಇರುವದು ನಿಮ್ಮ ಪರಿವಾರಾನ ಯಥಪ್ರಕಾರ ಪ್ರತಿಷ್ಠಾನ ಮಾಡೋದೇ ನಮ್ಮ ಕರ್ತವ್ಯ. ನಮ್ಮ ಹತ್ತಿರ ನೀವು ಏನನ್ನೂ ಮುಚ್ಚಿಡ ಬಾರದು.

ರಾಜಿ : ಏನೂ ಇಲ್ಲ...ನಮ್ಮ ಮೊದಲ ಮಗು ಹುಟ್ಟಿದಾಗ....

ಪೋಲೀಸ : ಹಾಂ ಹಾ, ಹೇಳಿ ಏನಾಯ್ತು.

ರಾಜಿ : ಅವರು ಮೂರು ದಿನ ಮನೇಗೆ ಬರಲಿಲ್ಲ. ಅಷ್ಟೆ. ಆಮೇಲೆ ಬಂದ್ರು. ಎಲ್ಲಾ ಸರಿಯೋಯ್ತು ಅನ್ನಿ.

ಪೋಲೀಸ : ಎಲ್ಲಿಗೆ ಹೋಗಿದ್ರು ಆಗ ?

ರಾಜಿ : ಫ್ಯಾಕ್ಟರೀಲಿ ಓ.ಟಿ ಮಾಡ್ತಿದ್ದರಂತೆ,

[ಪೋಲೀಸ ತಕ್ಷಣ ತನ್ನ ನೋಟಬುಕ್ಕಿನಲ್ಲಿ ಬರೆದುಕೊಳ್ಳುತ್ತಾನೆ]

ಪೋಲೀಸ : ಬಹಳ ಉಪಕಾರವಾಯ್ತು ಮತ್ತೇನಾದ್ರೂ ಹೇಳೋದಿದ್ಯಾ ?

ರಾಜಿ : ಉಹುಂ ಮತ್ತೇನೂ ಇಲ್ಲ.

ಪೋಲೀಸ : ಚೆನ್ನಾಗಿ ಜ್ಞಾಪಿಸಿಕೊಳ್ಳಿ ಎರಡನೇ ಮಗು ಹುಟ್ಟಿದಾಗ?

ರಾಜಿ : ಆಗ ಆ ತರಹ ಏನೂ ಆಗಲಿಲ್ಲ, ಆದ್ರೆ....

ಪೋಲೀಸ : ಹಂ ನಂಗೊತ್ತು ಏನಾದ್ರೂ ಜರುಗಿರಬೇಕು. ಹೇಳಿ ಹೇಳಿ-

[ನೋಟ ಬುಕ, ಪೆನ ಸಿದ್ಧಮಾಡಿಕೊಂಡು ಅವಳನ್ನೇ ದಿಟ್ಟಿಸುತ್ತಾನೆ]

ರಾಜಿ : ಎರಡು ದಿನ ಒಂದೇ ಸಮಗೆ ನಿದ್ರೆ ಮಾಡಿದ್ರು....ನಲವತ್ತೆಂಟು ಗಂಟೆ.

ಪೋಲೀಸ : ವಿಚಿತ್ರ. ಆದ್ರೂ ಬಹಳ ಮುಖ್ಯವಾದ ಸಂಗತಿ. (ಬರೆದು ಕೊಳ್ಳುತ್ತಾನೆ) ನೀವೇನೂ ಚಿಂತಿಸಬೇಡಿ. ನೀವು ಈಗ ಒದಗಿಸಿರೋ ಮಾಹಿತಿಯಿಂದ ನಮಗೆ ಬಹಳ ಸಹಾಯವಾಗುತ್ತೆ ಅದಷ್ಟು ಬೇಗ....

[ಅವನು ಮಾತು ಮುಗಿಸುವ ಮೊದಲೇ ಗೌರಮ್ಮ ಒಳಗೆ ಬರುತ್ತಾಳೆ. ರಾಜಿ ಹೊರಗೆ ಹೋಗುತ್ತಾಳೆ]

ಗೌರಮ್ಮ : ನಮ್ಮ ಮಗು ಚಿಕ್ಕ ಹುಡುಗ ಇದ್ದಾಗ...

ಪೋಲೀಸ : ಏನಾಯ್ತು ? ಥಡಾರ ಆಗಿತ್ತ ? ನಾಯಿಕೆಮ್ಮು ಬಂದಿತ್ತೆ? ಬಾಲಗ್ರಹವೇ ?

ಗೌರಮ್ಮ : ಸ್ವಲ್ಪ ನಿಧಾನ ಮಾಡಿ, ಎಲ್ಲಾ ಹೇಳ್ತೀನಿ ಒಂದೊಂದಾಗಿ, ಚಿಕ್ಕ ಮಗುವಾಗಿದ್ದಾಗ ಯಾವಾಗ್ಲೂ ನನ್ನ ಸೆರಗು ಕಚ್ಚೀಕೊಂಡೇ ಇರ್‍ತಿದ್ದ. ಎಲ್ಲಾದ್ರೂ ತಪ್ಪಿಸಿಕೊಂಡು ಬಿಟ್ಟೇನು ಅನ್ನೋ ಭಯ. ಪಾಪ ಜೂಜಾಟ ಆಡೋವಾಗ್ಲೂ ಅಷ್ಟೆ. ಯಾವಾಗ್ಲೂ ಅಜ್ಜಿಯಾಗಿರ್‍ತಿದ್ನೇ ವಿನಾ, ಓಡ್ತಾ ಇರ್‍ಲಿಲ್ಲ, ಹಿಡೀತಾ ಇರ್‍ಲಿಲ್ಲ.

ಪೋಲೀಸ : ನೀವೇನು ಮಾಡಿದ್ರಿ ಅದಕ್ಕೆ ?

ಗೌರಮ್ಮ : ನಾವೇನು ಮಾಡೋದು ? ಒಂದು ತಾಯತ ಕಟ್ಟೀಸಿದ್ವಿ.

ಪೋಲೀಸ : ಹೋಗ್ಲಿ ಬಿಡಿ, ಮೊಮ್ಮಕ್ಕಳು ಎಲ್ಲಾ ಚೆನ್ನಾಗಿದಾರಾ ?

ಗೌರಮ್ಮ : ಏನೋ ಇದಾರೆ, ಒಂಥರಾ. ಮುಂದೆ ಬೆಳೆದು ದೊಡ್ಡೋರಾದ್ಮೇಲೆ ತಾನೇ ನಿಜವಾದ ಬಣ್ಣ ತಿಳಿಯೋದು.

ಪೋಲೀಸ : ಹೌದು ಹದಿನಾರಾಣೆ ಸತ್ಯ.

ಗೌರಮ್ಮ : ಈಗ ನೋಡಿದ ರಾಜ ಹೀಗ್ಮಾಡ್ತಾನೆ ಅಂತ ಯಾರಿಗೆ ತಾನೆ ಗೊತ್ತಿತ್ತು ?

ಪೋಲೀಸ : ಗೊತ್ತಿದ್ರೆ ಮೊದಲೇ ಕ್ರಮ ತೆಗೆದುಕೊಳ್ಳಬಹುದಾಗಿತ್ತು.

ಗೌರಮ್ಮ : ಈಗ ತಡವಾಯ್ತು ಅಂತೀರಾ ?

ಪೋಲೀಸ : ಹಾಗೆಲ್ಲಿ ಅಂದೆ ? ನಮ್ಮ ಕೆಲಸದಲ್ಲಿ ಯಾವಾಗಲೂ ಹೀಗೇ ನಮ್ಮ ಪೂರ್ಣ ಸಹಕಾರ ಬೇಕು. ಎಲ್ಲಾ ವಿಷಯಗಳನ್ನೂ ಸ್ವಲ್ಪವು ಮುಚ್ಚಿಡದೆ ತಿಳಿಸಬೇಕು. ನಾವು ಕರೆದಾಗ ಹಾಜ

ರಾಗಬೇಕು. [ಪೋಲೀಸನ ಪ್ರತಿ ಮಾತಿಗೂ ಗೌರಮ್ಮ ಸಮ್ಮತಿ ಸೂಚಕವಾಗಿ ತಲೆದೂಗುತ್ತಾಳೆ] ಮತ್ತೇನಾದ್ರೂ ಹೇಳೋವಂಥ ವಿಷಯ ಇದ್ಯಾ ?

ಗೌರಮ್ಮ : ಇನ್ನೂ ಏನೇನು ಸಾಮಾನುಗಳು ಹೋಗಿವ್ಯೋ ಸರಿಯಾಗಿ ನೋಡಿಕೊಂಡಿಲ್ಲ.

ಪೋಲೀಸ : ಮನೇಗೆ ಹೋಗಿ ನೋಡಿ, ಪಟ್ಟಿ ಬರೆದು ತಂದುಕೊಡಿ.

ಗೌರಮ್ಮ : ಹೂಂ ಹಾಗೇ ಮಾಡ್ತೀನಿ. ನೀವು ಸಹಾಯ ಮಾಡಿದ್ರೆ ಮಾತ್ರ ನಾವು ಬದುಕ್ತೀವಿ.

ಪೋಲೀಸ : ನೀವೇನೂ ಯೋಚನೆ ಮಾಡಬೇಡಿ. ಎಂಥೆಂಥಾ ಕೇಸುಗಳನ್ನು ನೋಡಿದೀವಿ. ಇದ್ಯಾವ ಮಹಾ ಗನಂಧಾರಿ ಕೇಸು.

ಗೌರಮ್ಮ : ನಿಮಗೆ ದೊಡ್ಡದಲ್ಲದಿರಬಹುದು. ನಮ್ಮನೇಲಿ ಇಷ್ಟೇ ಮೊದಲು ಹೀಗಾಗಿದ್ದು ಇರೋದು ನಮಗೆ ಇದೇ ಅಗಾಧ.

ಪೋಲೀಸ : ಒಳ್ಳೇದು, ನೋಡೋಣ, ನಮ್ಮ ಕೈಲಾದದ್ದನ್ನೆಲ್ಲಾ ಮಾಡ್ತೀವಿ.

ಗೌರಮ್ಮ : ನಮ್ಮ ಕಷ್ಟ ನಿಮಗೆ ಅರ್ಥವಾಗುತ್ತೆ ಅಂತ ತಿಳಕೊಂಡಿದೀವಿ. ನನಗೋ ವಯಸ್ಸಾಯ್ತು ಯಾವತ್ತೂ ಮನೆ ಬಿಟ್ಟು ಹೊರಗ ಹೋದೋಳಲ್ಲ. ಇನ್ನೊ ಮೊಮ್ಮಕ್ಕಳು ಓದ್ತಾ ಇದಾರೆ. ಕೆಲಸಕ್ಕೆ ಹೋಗೋ ವಯಸ್ಸಲ್ಲ ಬೇಡ, ಹೋಗ್ಲೀ ಅಂತಂದ್ರು ಕೆಲ್ಸ ಎಲ್ಲಿ ಸಿಕ್ಕಬೇಕು ?

ಪೋಲೀಸ : ಹೌದು, ಬಹಳ ಕಷ್ಟ. ಅರ್ಥವಾಗುತ್ತೆ ?

ಗೌರಮ್ಮ : ನನ್ನ ಸೊಸೆ ನೋಡಿದ್ರೆಲ್ಲ. ಅವಳ ಸ್ಥಿತಿ [ಮೆಲುದನಿಯಲ್ಲಿ] ಮೂರು ತಿಂಗಳು ತುಂಬಿದೆ...

ಪೋಲೀಸ : ಹೌದಾ ? ನಾನು ಅದನ್ನೆಲ್ಲಾ ಗಮನಿಸಲೇ ಇಲ್ಲ, ಬಹಳ

ಮುಖ್ಯವಾದ ಅಂಶ. ಗೊತ್ತೇ ಆಗಲಿಲ್ಲ, ನೋಡಿ. [ಬರೆದುಕೊಳ್ಳುತ್ತಾನೆ]

ಗೌರಮ್ಮ : ಈಗಿನ ಕಾಲದ ಹೆಣ್ಣುಮಕ್ಕಳು ಅದೇನು ಫ್ಯಾಶನ್ನೋ ನಾ ಬೇರೆ ಕಾಣೆ...ಮುಚ್ಚಿಟ್ಕೋತಾರೆ...ನಮ್ಮ ಕಾಲದಲ್ಲಿ ನಾವೆಲ್ಲಾ ಹೆಮ್ಮೆ ಪಡ್ತಾ ಇದ್ವಿ.

ಪೋಲೀಸ : ಅಂತೂ ವಿಷಯ ತಿಳೀತಲ್ಲ. ಸಧ್ಯ ಅದು ಮುಖ್ಯ. ಏನೂ ಮುಚ್ಚಿಟ್ಕೊಬಾರದು ಅಂತ ಅವರಿಗೆ ಎಚ್ಚರಿಕೆ ಕೂಡ ಕೊಟ್ಟಿದ್ದೆ.

ಗೌರಮ್ಮ : ಹಾಂ ಮತ್ತೊಂದು ವಿಷಯ.

ಪೋಲೀಸ : ಹೇಳಿ ಹೇಳಿ [ಬರೆಯಲು ಸಿದ್ಧವಾಗಿದ್ದಾನೆ]

ಗೌರಮ್ಮ : ಹೈಸ್ಕೂಲಿನಲ್ಲಿ ಎಸ್ಸೆಲ್ಸಿ ಓದುವಾಗ ಒಂದಿನ...

ಪೋಲೀಸ : ಹೂಂ- ಹೇಳಿ-

ಗೌರಮ್ಮ : ಒಂದು ರಾತ್ರಿ, ಮಧ್ಯರಾತ್ರೀಲಿ ಎದ್ದು ಸ್ಕೂಲಿಗೆ ಹೋಗ್ಬಿಟ್ಟಿದ್ದ.

ಪೋಲೀಸ : ಆಮೇಲೆ ?

ಗೌರಮ್ಮ : ಆಮೇಲೆ ನಮಗೆಚ್ಚರ ಆಗಿ ಎಲ್ಲಿ ಹೋದ್ನಪ್ಪಾ ಅಂತ ಪರದಾಡ್ತಾ ಲಾಟೀನ ಹಿಡಕೊಂಡು ಬೀದಿ ಎಲ್ಲಾ ಅಲೀತಿದ್ದಾಗ ಚಳೀಲಿ ನಡುಗ್ತಾ ವಾಪಸ ಬಂದ. ಎಲ್ಲಿ ಹೋಗಿದ್ಯೋ ಅಂತ ಕೇಳಿದ್ರೆ ಮಾತಿಲ್ಲ, ಕತೆ ಇಲ್ಲ. ಸೀದಾ ಹೋಗಿ ಹಾಸಿಗೆ ಮೇಲೆ ಉರುಳಿ ಮುಸುಕು ಹಾಕ್ಕೊಂಡು ಬಿಟ್ಟ. ಅಯ್ಯೋ ದೇವ್ರೇ ಇದೇನ ಗ್ರಾಚಾರ ಅಂತ ನಾವೆಲ್ಲಾ ನಿದ್ದೆ ಬರದೆ ಹೊರಳಾಡಿದ್ವು ಆ ರಾತ್ರಿ ಎಲ್ಲಾ.

ಪೋಲೀಸ : (ಬರೆದುಕೊಳ್ಳುತ್ತಾ) ನಿದ್ದೆ ಬರದೆ ಹೊರಳಾಡಿದ್ದು ಬಹಳ ಸ್ವಾರಸ್ಯವಾಗಿದೆ .

ಗೌರಮ್ಮ : ಇನ್ನೂ ಇದೆ ಕೇಳಿ....

[ಪೋಲೀಸ ಗಡಿಯಾರ ನೋಡಿಕೊಂಡು ಅವಳತ್ತ ತಿರುಗುತ್ತಾನೆ.]

ಪೋಲೀಸ : ಹೂಂ ಹೇಳಿ...

ಗೌರಮ್ಮ : ಬೆಳಗ್ಗೆ ಎದ್ದಾಗ ಪುನಃ ಕೇಳ್ದೆ ಆಗ್ಲೂ ಬಾಯಿ ಬಿಡಲಿಲ್ಲ. ಹೋಗ್ಲಿ. ಸ್ಕೂಲಗಾದ್ರೂ ತೊಲಗು, ಅಂತಬೈದೆ. ಹೋಗ್ತೀನಿ ಅಂತ ಹೊರಟ. ಪುಸ್ತಕ ತೊಗೊಂಡು ಹೋಗೋ ಪ್ರಾರಬ್ಧ. ಟೋಪಿ ಹಾಕ್ಕೊಳ್ಳಲ್ವೇನೊ... ಬರಿಗಾಲಿನಲ್ಲಿ ಹೋಗಬಾರ್ದು ಅಂತ ಎಷ್ಟು ದಿನ ಬಡ ಕೊಂಡಿದೀನಿ. ಅಂತ ನಾನು ಒದರ್‍ತಾ ಇರೋದನ್ನೂ ಕಿವೀ ಮೇಲೆ ಹಾಕ್ಕೊಳ್ದೇ ಎಲ್ಲಾ ಸ್ಕೂಲ ಬಾಗ್ಲಲ್ಲೆ ಇಟ್ಟುಬಿಟ್ಟು ಬಂದಿದೀನಿ ನಿನ್ನೇ ರಾತ್ರೀನೆ ಅಂತ ಓಡಿ ಹೋದ.

ಪೋಲೀಸ : ತುಂಬಾ ಇಂಡರೆಸ್ಟಿಂಗ ಆಗಿದೆ. ಹೂಂ, ಹೂಂ, ಆಮೇಲೆ?

ಗೌರಮ್ಮ : ಸಾಯಂಕಾಲ ಅವನು ಮನೇಗೆ ಬಂದಾಗ ತಲೇಮೇಲೆ ಟೋಪಿ, ಕೈಯಲ್ಲಿ ಬ್ಯಾಗು, ಕಾಲಲ್ಲಿ ಚಪ್ಲಿ ನಮಗೆಲ್ಲಾ ತುಂಬಾ ಸಂತೋಷ ಆಗಿ, ಅದೇ ಡ್ರೆಸನಲ್ಲಿ ಅವನ ಪೋಟೋ ತೆಗೆಸಿದ್ವಿ. ಕಟ್ಟು ಹಾಕಿಸಿ ಗೋಡೇ ಮೇಲೆ ನೇತು ಹಾಕಿದ್ವಿ.

ಪೋಲೀಸ : ಹೌದಾ, ಬಹಳ ಸಂತೋಷ ಆ ಪೋಟೋ ಕೊಡಿ ನನ್ನ ಹತ್ತಿರ.

ಗೌರಮ್ಮ : ಇಲ್ಲಾಂತ ಕಾಣುತ್ತೆ.

ಪೋಲೀಸ : ಇನ್ನೊಂದು ಸಲ ಹುಡುಕಿ. ಆ ಪೋಟೋ ಸಿಕ್ಕಿದ್ರೆ ನಿಮ್ಮ ಮಗ ಸಿಕ್ಕಿದ ಹಾಗೆ ಅಂತ ತಿಳಕೊಳ್ಳಿ.

ಗೌರಮ್ಮ : ಆಗ್ಲಿ ಇನ್ನೊಂದ್ಸಲ ಹುಡುಕ್ತೀನಿ.

[ಹೋಗುತ್ತಾಳೆ]

[ರತ್ನ ಒಳಗೆ ಬರುವಳು]

ರತ್ನ : ಅವರು ನಮ್ಮ ತಂದೆ ಸಾರ. ನಮಗೆ ಅವರನ್ನು ಕಂಡ್ರೆ ಬಹಳಾ ಪ್ರೀತಿ ಸಾರ.

ಪೋಲೀಸ : ಅವರಿಗೆ ನಿಮ್ಮನ್ನು ಕಂಡ್ರೆ ?

ರತ್ನ : ಅದೆಲ್ಲಾ ಯಾಕೆ ಸಾರ ಈಗ ? ನಾನು ಬೀಯೆ ಫೈನಲನಲ್ಲಿದ್ದೀನಿ. ಎಕ್ಸಾಮ ಫೀ ತುಂಬಿಲ್ಲ ಇನ್ನೂ ಟ್ವೆಂಟಿಥರ್ಡ ಲಾಸ್ಟ ಡೇಟ ಸಾರ.

ಪೋಲೀಸ : ಐಯಾಮ ಸೋ ಸಾರಿ ಮಿಸ್ ?

ರತ್ನ : ರತ್ನ ಸಾರ ನನ್ನ ಹೆಸರು. ಮಿಸ ರತ್ನ ಸಂಗೀತ ಕಲೀಬೇಕು ಅಂತ ತುಂಬಾ ಆಸೆ ಸಾರ ನಮ್ಮಪ್ಪನ ಹತ್ತಿರ ಹೇಳ್ತಾ ಇದ್ದೆ ಸಾರ. ಆಗ್ಲಿ ಅಂದಿದ್ದ್ರು ಬೀಯೇ ಮುಗಿದ ಮೇಲೆ ಎಂ.ಎ.ಗೆ ಹೋಗ್ಬೇಕೂಂತಿದ್ದೆ. ಫಿಲಾಸಫಿ ಅಥವಾ ಸೈಕಾಲಜಿ ಅಥವಾ ಸೋಷಿಯಲ ವರ್ಕ, ತುಂಬಾ ಕಷ್ಟ ಪಟ್ಟು ಓದ್ತೀನಿ. ಮನೇಲಿ ಕಾಲೇಜಿನಲ್ಲಿ ಯಾವಾಗೂ ನಾನೇ ಫಸ್ಟ ಹೈಯರ ಸ್ಟಡೀಸಗೆ ಸ್ಟೇಟ್ಸಗೆ ಹೋಗಬೇಕೂಂತ ನನ್ನ ಫ್ರೆಂಡ್ಸು ಪ್ರೊಫೆಸರುಗಳು ಎಲ್ರೂ ಬಲವಂತ ಮಾಡ್ತಾ ಇದಾರೆ ಸಾರ....

ಪೋಲೀಸ : ನೀವು ಒಪ್ಪಿಕೊಂಡು ಬಿಟ್ಟಿದೀರ ?

ಗೌರಮ್ಮ : [ತಲೆ ತಗ್ಗಿಸಿ ತಪ್ಪೊಪ್ಪಿಕೊಳ್ಳುವಂತೆ] ಹೂಂ ಸಾರ.

ಪೋಲೀಸ : [ಚಿಂತಾಕ್ರಾಂತನಾಗಿ] ಹೂಂ. [ಬಂದು ರತ್ನಳ ಕುರ್ಚಿಯ ಹಿಂದೆ ನಿಲ್ಲುತ್ತಾನೆ.]

ಮದುವೆ ವಿಚಾರ ಏನಾದ್ರೂ ಮಾಡಿದೀರ ?

[ತಲೆ ತಗ್ಗಿಸಿ ನಿಂತಿರುತ್ತಾಳೆ ಮಾತನಾಡುವುದಿಲ್ಲ.]

ಪೋಲೀಸ : ನೀವು ಹೀಗೆ ಮಾತಾಡದೆ ನಿಂತುಕೊಂಡು ಬಿಟ್ರೆ ನಿಮ್ಮ ತಂದೆ ಸಿಕ್ತಾರೆ ಅಂತ ತಿಳಕೊಂಡಿದೀರ? ನಮ್ಮ ಜೊತೆ ಕೋ ಆಪ ರೇಟ ಮಾಡಬೇಕು...

ರತ್ನ : ಆಗಲಿ ಸಾರ.

[ಪೋಲೀಸು ತನ್ನ ಕುರ್ಚಿಯತ್ತ ಬರುತ್ತಾನೆ]

ಪೋಲೀಸ : ವೆರಿ ಗುಡ. (ಬರೆದುಕೊಳ್ಳುತ್ತಾನೆ) ಮತ್ತೇನಾದ್ರೂ ಹೇಳೋದಿದ್ಯಾ ?

ರತ್ನ : (ಸ್ವಲ್ಪ ತಲೆ ಎತ್ತಿ) ಸ್ಟೇಟ್ಸಗೆ ಹೋದಾಗ ಸಾಧ್ಯವಾದರೆ ಕಾಂಟಿನೆಂಟ ಟೂರ ಮಾಡಬೇಕೂಂತಿದೀನಿ ಸಾರ.

ಪೋಲೀಸ : ನಿಮ್ಮ ಪರಿಚಯದೋರು ಯಾರಾದ್ರೂ ಇದಾರ ಅಲ್ಲಿ ?

ರತ್ನ : ಇಲ್ಲ ಸಾರ. ಹೋದ ಮೇಲೆ ಪರಿಚಯ ಮಾಡ್ಕೋಬೇಕೂಂತಿದೀನಿ.

ಪೋಲೀಶ : ಆ ಫೋಟೋ ವಿಷಯ ನಿಮಗೇನಾದರೂ ಗೊತ್ತಾ ? ನಿಮ್ಮ ತಂದೆ ಸ್ಕೂಲ ಬ್ಯಾಗ ಹಿಡಿದು ಟೋಪಿ, ಚಪ್ಪಲಿ ಹಾಕ್ಕೊಂಡು ತೆಗಿಸಿಕೊಂಡಿದ್ದು ?

ರತ್ನ : ಹೌದು ಸಾರ, ಆ ಥರ ಫೋಟೋ ಒಂದು ನಡುಮನೆ ಗೋಡೇ ಮೇಲಿತ್ತು. ಅದ್ಯಾರದ್ದೋ ಅಂತ ಅಂದ್ಕೊಂಡಿದ್ವಿ.

ಪೋಲೀಸ : ಅದು ನಿಮ್ಮ ತಂದೇದು. ನೀವು, ಈ ವಿಚಾರ ತಿಳಕೊಂಡಿರಬೇಕು.

ರತ್ನ : ಐಯಾಮ ಸಾರಿ ಸಾರ.

ಪೋಲೀಸ : ಈಗ ಎಲ್ಲಿದೆ ?

ರತ್ನ : ಬಹುಶಃ ಅವರೇ ತಗೊಂಡು ಹೋಗಿರಬೇಕು. ಬೆಳಿಗ್ಗೆ ನೋಡ್ದಾಗ ಗೋಡೆ ಮೇಲೆ ಬಿಳೀ ಚೌಕ ಕಾಣಿಸ್ತಿತ್ತು.

ಪೋಲೀಸ : ನಾವು ಮೊದಲು ಆ ಫೋಟೋ ಸಂಪಾದಿಸಬೇಕು.

ರತ್ನ : ಇನ್ನೊಂದ್ಸಲ ಮನೇಲಿ ಹುಡುಕ್ತೀನಿ ಸಾರ. ಸಿಕ್ಕಿದ್ರೆ ತಕ್ಷಣ ತಂದುಕೊಟ್ಟುಬಿಡ್ತೀನಿ.

ಪೋಲೀಸ : ತಡಮಾಡಬೇಡಿ ಮತ್ತೆ.

ರತ್ನ : ಇಲ್ಲಾ ಸರ. (ಹೋಗುತ್ತಾಳೆ)

(ವಿಶ್ವನಾಥ ಪ್ರವೇಶಿಸಿ ಮೌನವಾಗಿ ನಿಲ್ಲುತ್ತಾನೆ)

ಪೋಲೀಸ : ಅದೇನು ಹೇಳೋದಿದ್ಯೋ ಬೇಗ ಬೇಗ ಹೇಳಿ ಮುಗಿಸು.

ವಿಶ್ವನಾಥ : ಏನೂ ಇಲ್ಲ.

ಪೋಲೀಸ : ಅಂ ಏನೂ ಇಲ್ಲ, ಮತ್ತೆ ಯಾಕೆ ಬಂದೆ ಇಲ್ಲಿ ?

ವಿಶ್ವನಾಥ : ನೀವು ಕರೆಸಿದಿರಿ ಅಂತ ಬಂದೆ. ನಮ್ಮಜ್ಜಿ, ಅವ್ವ, ಅಕ್ಕ ಎಲ್ಲರೂ ಹೇಳಿಕೆ ಕೊಟ್ಟಾಯ್ತಲ್ಲ ?

ಪೋಲೀಸ : ಆದ್ರೆ ನಿನ್ನ ಹೇಳಿಕೇನೂ ಬೇಕು. ನೀನೇ ನಮ್ಮ ಮುಖ್ಯ ಸಾಕ್ಷಿ.

ವಿಶ್ವನಾಥ : ನನಗೇನೂ ಗೊತ್ತಿಲ್ಲ ?

ಪೋಲೀಸ : ನೋಡಪ್ಪ, ಹೀಗೆಲ್ಲಾ ವಡ್ಡೊಡ್ಡಾಗಿ ಮಾತಾಡಿದ್ರೆ ಪ್ರಯೋಜನವಿಲ್ಲ.

ವಿಶ್ವನಾಥ : ನನಗೆ ಬಹಳ ಸಂತೋಷವಾಗಿದೆ.

ಪೋಲೀಸ : ಆ ಫೋಟೋ ವಿಚಾರ ಏನಾದ್ರೂ ಗೊತ್ತಾ ?

ವಿಶ್ವನಾಥ : ಅದನ್ನು ನಮ್ಮಪ್ಪ ತಗೊಂಡು ಹೋಗಿರಬಹುದು.

(ಪೋಲೀಸ ಬರೆದುಕೊಳ್ಳುತ್ತಾನೆ)

ಪೋಲೀಸ : ಬೇರೆ ಏನಾದ್ರೂ ಹೇಳೋದಿದ್ಯಾ ?

ವಿಶ್ವನಾಥ : ಅವರ ಪಾಡಿಗೆ ಅವರನ್ನ ಬಿಡಬಹುದೂಂತ ಕಾಣುತ್ತೆ.

ಪೋಲೀಸ : ಏ, ಏನಯ್ಯಾ ನೀನು ಹೇಳೋದು ?

ವಿಶ್ವನಾಥ : ಶ್ರೀಮಾನ ರಾಜಣ್ಣನವರನ್ನು ಹುಡುಕುವ ಶ್ರಮವನ್ನು ತಾವು ತೆಗೆದುಕೊಳ್ಳಬೇಕಾಗಿಲ್ಲವೆಂದು ಅರ್ಜಿದಾರನ ನಮ್ರ ವಿನಂತಿ.

ಪೋಲೀಸ : ಮತ್ತೆ ? ನಿನ್ನ ತಾಯಿ, ಅಕ್ಕ, ಅಜ್ಜಿ ?

ವಿಶ್ವನಾಥ : ನನಗ್ಗೊತ್ತು ಆದ್ರೂ ನಮ್ಮಪ್ಪನ್ನ ನಾವು ಅವನೂ ಒಬ್ಬ ಮನುಷ್ಯ ಅಂತ ನೋಡಬೇಕು. ನೀವು ಬರೆದುಕೋಬೇಕು ಈ ಮಾತ್ನ.

ಪೋಲೀಸ : ನಾನು ಏನು ಮಾಡಬೇಕು ಅಂತ ಹೇಳಬೇಕಾಗಿಲ್ಲ.

ವಿಶ್ವನಾಥ : ಆದ್ರೂ ಮುಖ್ಯ ವಿಷಯ ಅಂತ ಹೇಳ್ತಾಇದೀನಿ ಅವನೂ ಒಬ್ಬ ಮನುಷ್ಯ ಅಂತ, ದಯವಿಟ್ಟು ಬರಕೊಳ್ಳಿ...

ಪೋಲೀಸ : [ಎದುರ ರಂಗದ ಮೇಲೆ ಸುತ್ತಾಡುತ್ತಾನೆ]

ಅದು ಹೇಗೆ ಸಾಧ್ಯ ಅಂತೀನಿ ?

ವಿಶ್ವನಾಥ : ಪ್ಲೀಸ....

ಪೋಲೀಸ : ಇಲ್ಲಿ ನೋಡಪ್ಪ. ನಾನು ಅವಶ್ಯಕವಾಗಿ ನಿನಗೆ ತೊಂದರೆ ಕೊಡೋಕೆ ಇಷ್ಟಪಡೋದಿಲ್ಲ. ನಿಮ್ಮ ಮನೆಯವರು ಇದುವರೆಗೆ ನಮಗೆ ತುಂಬಾ ಸಹಕಾರ ನೀಡಿದ್ದಾರೆ. ನೀನೂ ಕೂಡ ಅವರ ಹಾಗೆ ಮಾಡಿ ನಿಮ್ಮ ಮನೆತನಕ್ಕೆ ಒಳ್ಳೆ ಹೆಸರು ತರಬೇಕೂಂತ ನನ್ನ ಅಪೇಕ್ಷೆ.

ವಿಶ್ವನಾಥ : [ಏಳುತ್ತಾನೆ] ಹಾಗಾದ್ರೆ ನೀವು ಬರೆದುಕೊಳ್ಳೋದಿಲ್ಲ ? ನಿಮಗೆ ನನ್ನ ಭಾಷೆ ಅರ್ಥವಾಗೋದಿಲ್ಲ ?

[ಪೋಲೀಸ ಅಧಿಕಾರಿ ಕಪಾಟಿನಲ್ಲಿದ್ದ ಒಂದು ದಪ್ಪ ಪುಸ್ತಕವನ್ನು ತೆಗೆದು, ಹಾಳೆಗಳನ್ನು ತಿರುವಿ, ಮಧ್ಯಭಾಗದಲ್ಲಿ ಹಾಳೆಯ ಮೇಲೆ ಬೆರಳನ್ನೊಡಿಸುತ್ತಾ ಓದುತ್ತಾನೆ]

ಪೋಲೀಸ : "ಯಾರಿಗೆ ಆಗಲಿ ಇದರಿಂದ ತಪ್ಪಿಸಿಕೊಳ್ಳುವ ಹಕ್ಕಿಲ್ಲ.

ಹಾಗೇನಾದೂ ಮಾಡಲು ಪ್ರಯತ್ನಪಟ್ಟಲ್ಲಿ ಅಥವಾ ಮಾಡಿದಲ್ಲಿ ಅದು ಅತ್ಯಂತ ಹೇಯವಾದ ಅಪರಾಧವಾಗುತ್ತದೆ. ಸರ್ವೇಜನಾಃ ಸುಖಿನೋ ಭವಂತು ಎಂಬ ಡೈರೆಕ್ಟಿವ ಪ್ರಿನ್ಸಿಪಲ ಅನ್ನು ಎಂಥದೇ ಸಂದರ್ಭದಲ್ಲೂ ಎತ್ತಿ ಹಿಡಿಯಬೇಕಾದುದು ಪ್ರತಿಯೊಬ್ಬರ ಕರ್ತವ್ಯವಾಗಿದೆ. ವ್ಯಕ್ತಿ ತನ್ನ ಕರ್ತವ್ಯವನ್ನು ಅರಿತುಕೊಂಡು." [ವಿಶ್ವನಾಥನತ್ತ ತಿರುಗಿ ನೋಡುತ್ತಾ] ನೋಡಿದ್ರ್ಯಾ ?

ವಿಶ್ವನಾಥ : ಆದ್ರೆ ನಮ್ಮ ಮಾತು ನಿಮಗೆ ಅರ್ಥವಾಗಿಲ್ಲ....

(ಪೋಲೀಸ ಮತ್ತೊಂದು ಪುಸ್ತಕವನ್ನು ತೆಗೆದು ಓದುತ್ತಾನೆ]

ಪೋಲೀಸ : "ವಿಧೇಯತೆ ಮಾನವ ಬೆಳೆಸಿಕೊಂಡು ಉಳಿಸಿಕೊಂಡು ಬಂದಿರುವ ಒಂದು ಉತ್ಕೃಷ್ಟವಾದ ಮೌಲ್ಯ. ಒಂದು ರೀತಿಯಲ್ಲಿ ಈ ಮೌಲ್ಯ ತಾಯಿ ಮೌಲ್ಯ. ಉಳಿದ ಮೌಲ್ಯಗಳನ್ನು ಪಾಲಿಸಬೇಕಾದರೆ, ಅರ್ಥವತ್ತಾಗಿ ಪೋಷಿಸಬೇಕಾದರೆ, ತಳಹದಿ ವಿಧೇಯತೆ. ನಾಯಿಗಳು ಈ ಪಾಠವನ್ನು ಮನುಷ್ಯನಿಂದ ಕಲಿತಿವೆಯೆಂಬುದು ಪ್ರಾಣಿ ಮನೋವಿಜ್ಞಾನದ ಸತ್ಯ. ಮನುಕುಲದ ಹೆಮ್ಮೆ. ಈ ಮೌಲ್ಯದ ಆಶ್ರಯವಿಲ್ಲದೆ ಸಮಾಜದ ಧರ್ಮ. ಸಂಸ್ಕೃತಿ, ನಾಗರಿಕತೆ ಕಲೆ, ವಿಜ್ಞಾನ, ಇತಿಹಾಸ, ಭೂಗೋಳ, ವಿದ್ಯಾಭ್ಯಾಸ, ಕೃಷಿ, ನಗರನೈರ್ಮಲ್ಯ ರಾಜಕೀಯ, ಸಮೂಹ ಸಂಸ್ಕೃತಿ, ಪುರಾಣ ಯಾವುದೂ ಬದುಕಿಗೆ ಅರ್ಥ ನೀಡಲು ಅಸಮರ್ಥವಾಗಿ, ಬದುಕು ಬರಡಾಗಿ..."

(ಓದುತ್ತಿರುವ ಪುಸ್ತಕವನ್ನು ಮೇಜಿನ ಮೇಲೆ ಓರಣವಾಗಿಟ್ಟು, ಕಪಾಟಿನಿಂದ ಮತ್ತೊಂದು ಪುಸ್ತಕವನ್ನು ಎತ್ತಿಕೊಂಡು ಪೇಜು ತಿರುವುತ್ತಿರುತ್ತಾನೆ)

ವಿಶ್ವನಾಥ : "ವ್ಯಕ್ತಿಗಳು ನಡೆಯಲು ಸಾರ್ವಜನಿಕ ರಸ್ತೆಗಳನ್ನು ಮಾಡಲಾಗಿದೆ ಜನ ದಿಕೆಟ್ಟು ಭ್ರಾಂತರಾಗದೆ ಪರಂಪರೆ ಮುಂದುವರಿಯಬೇಕಾದರೆ ಈ ದಾರಿಗಳಲ್ಲಿ ನಡೆಯಬೇಕು. ದಾರಿ ತಪ್ಪದೆ ನಡೆದರೆ ಸರ್ವರಿಗೂ ನೆಮ್ಮದಿ ಕಟ್ಟಿಟ್ಟ ಬುತ್ತಿ. ಇದನ್ನು ಬಿಟ್ಟು ಮನಸ್ಸು ಬಂದಂತೆ ನಡೆದು ವ್ಯವಸ್ಥೆಯನ್ನು ಸಡಿಲುಗೊಳಿಸುವ ಪ್ರವೃತ್ತಿ ಸರ್ವಥಾ ಖಂಡನೀಯ. ನಮ್ಮ ಪೋಲೀಸ ಇಲಾಖೆಯು ದಕ್ಷ ಆಡಳಿತ ಇಂತಹ ಅನಾರೋಗ್ಯಕರವಾದ ಬೆಳವಣಿಗೆಯನ್ನು ನಿರ್ಮೂಲ ಮಾಡುವ ಗುರುತರವಾದ ಜವಾಬ್ದಾರಿಯನ್ನು ಹೊತ್ತಿದೆ. ಈ ಕಾರ್ಯದಲ್ಲಿ ಸತ್ಪ್ರಜೆಗಳು ಇಲಾಖೆಗೆ ಎಲ್ಲಾ ಬಗೆಯ ಸಹಕಾರ ಪ್ರೋತ್ಸಾಹಗಳನ್ನು ಕೊಡತಕ್ಕದ್ದು. ಹಾಗೆ ಮಾಡದಿದ್ದಲ್ಲಿ ಶಿಕ್ಷಾರ್ಹ ಅಪರಾಧವೆಂದು ಪರಿಗಣಿಸಿ ಸೂಕ್ತ ಕ್ರಮವನ್ನು ಸಂಬಂಧಪಟ್ಟವರ ಮೇಲೆ ಕೈಗೊಳ್ಳಲು ಇಲಾಖೆಗೆ ಎಲ್ಲಾ ಅಧಿಕಾರವು ಇದೆ. ಅಲ್ಲದೆ....

ಪೋಲೀಸ : (ವಿಶ್ವನಾಥನನ್ನು ಅನೇಕ ದೃಷ್ಟಿಯಿಂದ ನೋಡುತ್ತಾ, ಕೈಲಿದ್ದ ಪುಸ್ತಕವನ್ನು ಮುಚ್ಚಿ ಮೇಜಿನಮೇಲೆ ಒಗೆದ) ಭೇಷ, ಭೇಷ ನೀವು ನಮ್ಮ ಇಲಾಖೆಗೆ ಸೇರಿದರೆ ತುಂಬಾ ಪ್ರಯೋಜನವಾಗುತ್ತೆ.

ವಿಶ್ವನಾಥ : ಯಾರಿಗೆ ?

ಪೋಲೀಸ : ಇಷ್ಟೆಲ್ಲಾ ಬುದ್ಧಿವಂತನಾಗಿದ್ರೂ ನಿನ್ನ ವಕ್ರತನ ಮಾತ್ರ ಸಹಿಸಿಕೊಳ್ಳೋದು ಕಷ್ಟ.

(ರಾಜೀಯ ಪ್ರವೇಶ. ಪೋಲೀಸ ಮತ್ತು ವಿಶ್ವನಾಥ ಇಬ್ಬರೂ ಅವಳನ್ನು ನೋಡುತ್ತಾ, ತಮ್ಮ ಮಾತುಗಳನ್ನು ನಿಲ್ಲಿಸುತ್ತಾರೆ. ರಾಜೀಯ ಉಬ್ಬಿದ ಹೊಟ್ಟೆ ಎದ್ದು ಕಾಣುತ್ತದೆ)

ರಾಜಿ : ಕ್ಷಮಿಸಬೇಕು. ಏನೋ ತಿಳೀದೇ ಮಾಡಿದ್ದು ಅಪರಾಧ.

ಪೋಲೀಸ : ನಾನು ನಿಮಗೆ ಮೊದಲೇ ಎಚ್ಚರಿಕೆ ಕೊಟ್ಟಿರಲಿಲ್ಲಾ ?, ಏನೂ ಮುಚ್ಚಿಟ್ಟುಕೊಳ್ಳಬೇಡೀಂತ ?

ರಾಜಿ : ಹೌದು, ಆದ್ರೆ...ಆದ್ರೆ....ನಿಮಗೆ ಮೋಸ ಮಾಡಬೇಕೂಂತ ಹಾಗೆ ಮಾಡಲಿಲ್ಲ.

ಪೋಲೀಸ : ಮತ್ತೆ ಯಾಕೆ ಮೊದಲೇ ತಿಳಿಸಲಿಲ್ಲ ?

ರಾಜಿ : ಈಗ ಹೇಳಿ ಹೋಗೋಣಾಂತ ಬಂದಿದೀನಿ....

ಪೋಲೀಸ : ನನ್ನ ಪ್ರಶ್ನೆಗೆ ಉತ್ತರ ಕೊಡಲಿಲ್ಲ ನೀವು ಮೊದಲೇ ಯಾಕೆ....

(ರಾಜಿ ತಲೆ ತಗ್ಗಿಸಿ ಮೌನವಾಗಿ ನಿಂತಿರುತ್ತಾಳೆ)

ವಿಶ್ವನಾಥ : ನಾನು ಹೇಳ್ತೀನಿ ಉತ್ತರ–

(ರಾಜಿ ತಕ್ಷಣ ಕತ್ತೆತ್ತಿ ವಿಶ್ವನಾಥನನ್ನು ನೋಡುತ್ತಾಳೆ)

ಪೋಲೀಸ : ನೀನು ?

ವಿಶ್ವನಾಥ : ನಮ್ಮಕ್ಕನಿಗೆ ಇಪ್ಪತ್ತು ವರ್ಷ. ನನಗೆ ಹದಿನೆಂಟು ವರ್ಷ. ಈಗ ಮತ್ತೆ ನಮ್ಮಮ್ಮ ಬಸುರಿ ನಾಚಿಕೆಯಾಗದೆ ಇರುತ್ತದೆಯೇ ನೀವೇ ಹೇಳಿ . . .

ಪೋಲೀಸ : ನಿಮ್ಮ ಮಗ ಹೇಳೋದು ನಿಜಾನೇ ?

[ರಾಜಿ ಮತ್ತೆ ತಲೆತಗ್ಗಿಸಿ ನಿಲ್ಲುತ್ತಾಳೆ]

ವಿಶ್ವನಾಥ : ಹದಿನೆಂಟು ವರ್ಷಗಳ ಕಾಲ ನಮ್ಮಮ್ಮನ ಜೊತೆ ದಾಂಪತ್ಯ ಜೀವನ ನಡೆಸದೆ ಇದ್ದಕ್ಕಿದ್ದಂತೆ ಈಗ....

ರಾಜಿ : ಸಾಕು ಬಾಯಿಮುಚ್ಚು.....

ವಿಶ್ವನಾಥ : ಕಾಯಿದೆ ಪ್ರಕಾರ ನಾನು ಪೋಲೀಸರೊಂದಿಗೆ ಸಹಕರಿಸ್ತಾ ಇದ್ದೇನೆ ಅಷ್ಟೆ.

ಪೋಲೀಸ : ನಿಮ್ಮ ಮಗ ಬಹಳಷ್ಟು ಕಾಯದೆ ತಿಳಿಕೊಂಡಿದಾನೆ.. ಆದ್ರೆ ಅದನ್ನು ಪಾಲಿಸೋಕ್ಕಿಂತ ಮುರಿಯೋದೇ ಹೆಚ್ಚು ಖಾಯಸ ಅವನಿಗೆ...

ರಾಜಿ : ಈಗ ಅವರನ್ನು ಪತ್ತೆ ಹಚ್ಚೋದು ಸುಲಭ ಅಲ್ಲವೇ ?

ಪೋಲೀಸ : ನೋಡೋಣ ಈ ವಿಷಯದಿಂದ ಎಷ್ಟರಮಟ್ಟಿಗೆ ಪ್ರಯೋಜನ ಆಗುತ್ತೋ...

(ಗೌರಮ್ಮನ ಪ್ರವೇಶ)

ಗೌರಮ್ಮ : ನಾನೇ ಹೇಳಿ ಕಳಿಸಿದೆ. ಎಲ್ಲಾ ಹೇಳಿದಳು ತಾನೆ?

ರಾಜಿ : ಎದುರಿಗೆ ಬಂದು ನಿಂತಿರುವಾಗ ಬಾಯಿಬಿಟ್ಟು ಹೇಳೋ ಅಗತ್ಯವೇನಿದೆ ?

ವಿಶ್ವನಾಥ : ಆದ್ರೂ, ನಿನ್ನ ಬಾಯಿಂದ ಶಬ್ದ ರೂಪದಲ್ಲಿ ಬರೋವರೆಗೆ ಅದು ಹೇಳಿಕೆ ಆಗೋದಿಲ್ಲ. ಪೋಲೀಸರು ಅದನ್ನು ಗಮನಕ್ಕೆ ತೆಗೆದುಕೊಳ್ಳೋದಿಲ್ಲ.

ಪೋಲೀಸ : ಕರೆಕ್ಟ.

ಗೌರಮ್ಮ : ಹೇಳಿಬಿಡು ಬೇಗ, ಅದ್ರಲ್ಲೇನಿದೆ ನಾಚ್ಕೊಳ್ಳೋಕೆ...

ಪೋಲೀಸ : ಇದರಲ್ಲಿ ನಾಚಿಕೊಳ್ಳೋ ಅವಶ್ಯಕತೆ ಏನೂ ಇಲ್ಲ. ಹದಿನೆಂಟು ಆದ್ರೆನಾಯ್ತು ? ನಿಮಗೆ ಅದಕ್ಕೂ ಮುಂಚೆ ಮದುವೆಯಾಗಿದೆ ಅನ್ನೋದು ಮುಖ್ಯ. ಅದೇ ನಿಮ್ಮ ಡಿಫೆನ್ಸ್.

ವಿಶ್ವನಾಥ : ಅದೂ ಅಲ್ಲದೆ ನಮ್ಮಪ್ಪ ಮನೆಬಿಟ್ಟು ಹೋದದ್ದು ನಿನ್ನೆ ತಾನೆ . . .

ಗೌರಮ್ಮ : ನೀನು ಸುಮ್ಮನೆ ಇರು ತಲೆಹರಟೆ ಮಾಡಬೇಡ.

ಪೋಲೀಸ : ನನಗೆ ನಿಮ್ಮ ಹೇಳಿಕೆಗಳಷ್ಟೇ ಬೇಕು. ನಿಮ್ಮ ಮನೆ ಜಗಳ ಅಲ್ಲ.

ಗೌರಮ್ಮ : ಜಗಳ-ಗಿಗಳ ಏನೂ ಇಲ್ಲ (ವಿಶ್ವನಾಥನತ್ತ ಬೊಟ್ಟು ಮಾಡಿ) ಇವನು ನೆಟ್ಟಗಿದ್ದಿದ್ರೆ ನನ್ಮಗ ಮನೆಬಿಟ್ಟು ಹೋಗೋ ಪರಿಸ್ಥಿತಿ ಬರ್‍ತಾನೇ ಇರಲಿಲ್ಲ. ಪೋಲಿ ಸಹವಾಸಕ್ಕೆ ಬಿದ್ದು ಕೆಟ್ಟು ಹೆಸರು . . .

ವಿಶ್ವನಾಥ : (ನಗುತ್ತಾ) ಎ ಬ್ಲಾಟ ಆನ ದಿ ಫ್ಯಾಮಿಲಿ ಎಸ್ಕಚನ್

(ಪೋಲೀಸ ತಕ್ಷಣ ಬರೆದುಕೊಳ್ಳುತ್ತಾನೆ)

ರಾಜಿ : ನೀನು ರಾತ್ರಿ ಮನೇಗೆ ಸರಿಯಾಗಿ ಬರದೇ ಇರೋದೇ ಅವರಿಗೆ ದೊಡ್ಡ ಚಿಂತೆಯಾಗಿತ್ತು.

ವಿಶ್ವನಾಥ : ಅಪ್ಪನಿಗಿಂತ ನಿನಗೇ ಜಾಸ್ತಿ ಚಿಂತೆಯಾಗಿತ್ತು. ಆದ್ರೂ ಈಗ ನಾನು ಏನು ಹೇಳಿಕೆ ಕೊಟ್ಟಿದೀನಿಂದ್ರೆ.

ಪೋಲೀಸ : "ಶ್ರೀಮಾನ ರಾಜಣ್ಣನವರನ್ನು ಹುಡುಕುವ ಶ್ರಮವನ್ನು ತಾವು ತೆಗೆದುಕೊಳ್ಳಬೇಕಾಗಿಲ್ಲ."

ವಿಶ್ವನಾಥ : ಮತ್ತು ಅವರನ್ನು ಒಬ್ಬ ಮನುಷ್ಯರಂತೆ ನೋಡುವುದು ಆಗತ್ಯ. ಮನೇಲಿ ಏನು ನಡೀತಿತ್ತು ಅಂತ ನನಗ್ಗೊತ್ತು. ಅದನ್ನು ನೋಡಲಾರದೆ ಕಾಣಲಾರದೆ ನಾನು ಸಾಧ್ಯ ವಿದ್ದಷ್ಟು ಹೊತ್ತು ಮನೆಯಿಂದ ಹೊರಗಿರ್‍ತಿದ್ದೆ.

ರಾಜಿ : ಅವರನ್ನು ದೇವರೂಂತ ಪೂಜಿಸ್ತಿದ್ದೆ.

ವಿಶ್ವನಾಥ : ಮನೇಲಿ ಜೋರಾಗಿ ಉಸಿರಾಡೋದಕ್ಕೂ ಅಪ್ಪಂಗೆ ಅವ ಕಾಶ ಇರಲಿಲ್ಲ.

ಗೌರಮ್ಮ : ಧಾರಾಳವಾಗಿ ಉಸಿರಾಡ್ತಿದ್ದ, ಒಂದೊಂದ್ಸಲ ಅವನ ನಿದ್ದೆ ಗೊರಕೆ ಹೊಡಿಯೋ ಶಬ್ದಕ್ಕೆ ನಮಗ್ಯಾರಿಗೂ ನಿದ್ದೆ ಬರ್‍ತಿರ್ಲಿಲ್ಲ.

ರಾಜಿ : ನಾನಂತೂ ತುಂಬಾ ಸ್ವಾತಂತ್ರ್ಯ ಕೊಟ್ಟಿದ್ದೆ. ಪ್ರತಿ ದೀಪಾವಳಿಗೆ ಒಂದು ಜೊತೆ ಎಕ್ಕಡ, ಒಂದು ಶರ್ಟು, ಒಂದು ಪಂಚೆ ತೆಗೆದುಕೊಡ್ತಿದ್ದೆ.

ಗೌರಮ್ಮ : ಆಫೀಸ ಟೈಮಿಗೆ ಸರಿಯಾಗಿ ಅಡಿಗೆ ಮಾಡಿ ಊಟ ಬಡಿಸ್ತಿದ್ದೆ.

ರಾಜಿ : ರಜಾ ದಿನ ಬೆಳಿಗ್ಗೆ ಉಪ್ಪಿಟ್ಟೋ ರೊಟ್ಟೀನೋ ಮಾಡಿ ಕೊಡ್ತಿದ್ದೆ. ಕಾಲರ ಹರಿದ ಶರ್ಟನ್ನು ಹೊಲಿದು ಕೊಡ್ತಿದ್ದೆ. ಗುಂಡಿ ಕಿತ್ತೋಗಿದ್ರೆ ಅದನ್ನೂ ಹಾಕ್ಕೊಡ್ತಿದ್ದೆ.

ಗೌರಮ್ಮ : ನಮ್ಮ ಜೊತೆ ಸುಖವಾಗಿದ್ದ.

(ವಿಶ್ವನಾಥ ನಗುತ್ತಾನೆ)

ರಾಜಿ : ನಾವೆಲ್ಲಾ ಹಗಲೂ ಇರುಳೂ ಅವರ ಸುಖಕ್ಕೆ ದುಡಿತಿದ್ವು.

ವಿಶ್ವನಾಥ : ಪಾಪ ಲಭ್ಯವಿಲ್ಲ, ನಮ್ಮಪ್ಪನ ಹಣೇಲಿ ಬರೆದಿರಲಿಲ್ಲ ಸುಖ ಪಡೋದು.

ಪೋಲೀಸ : ನೀವೇನೂ ಯೋಚಿಸಬೇಡಿ. ಆದಷ್ಟು ಬೇಗ ಅವರೆಲ್ಲಿದ್ರೂ ಕಂಡುಹಿಡೀತೀವಿ. ನಮ್ಮ ಇಲಾಖೆಯ ಒಳ್ಳೆ ಹೆಸರನ್ನು ಉಳಿಸಿಕೊಳ್ಳೋದಕ್ಕಾದ್ರೂ ಕಂಡುಹಿಡೀಲೇಬೇಕು.

(ರತ್ನ ಓಡಿ ಬರುತ್ತಾಳೆ. ಎಲ್ಲರೂ ಅವಳತ್ತ ಗಮನ ಹರಿಸುತ್ತಾರೆ)

ರತ್ನ : (ಏದುಸಿರುಬಿಡುತ್ತಾ) ಸಾರ—ಸಾರ — ಮನೇಲೆಲ್ಲೂ ಇಲ್ಲ ಸಾರ ಫೋಟೋ. ಗೋಡೆ ಮೇಲಿದ್ದ ಬಿಳೀ ಚೌಕ ಕೂಡ ಮಾಯವಾಗಿದೆ. ಫೋಟೋ ಹಾಕಿದ ಗುರುಗು ಕೂಡ ಇಲ್ಲ,

ರಾಜಿ : [ವಿಶ್ವನಾಥನನ್ನು ನಿರ್ದೇಶಿಸಿ] ಎಲ್ಲಾ ಇವನದ್ದೇ ಕೆಲಸ, ನಂಗೊತ್ತು.

ಪೋಲೀಸ : ನಿಮ್ಮ ಮಗ ಮೊದಲಿಂದಲೂ ಅಡ್ಡ ಮಾತ್ನೇ ಆಡ್ತಿದಾನೆ. ಸ್ವಲ್ಪಾನೂ ಸಹಕಾರ ಕೊಡ್ತಾ ಇಲ್ಲ ಬೇಜವಾಬ್ದಾರಿ.

ಗೌರಮ್ಮ : ಏನು ದುರ್ಬುದ್ಧಿ ಬಂತೋ ಮಗು ನಿಂಗೆ, ಹೀಗ್ಯಾಕೆ ಮಾಡ್ತೀಯೋ ನನ್ನ ಹೊಟ್ಟೆ ಉರಿಸೋಕೆ ?

ಪೋಲೀಸ : ನೀವೇನೂ ಚಿಂತಿಸಬೇಡಿಯಮ್ಮ ನಾನು ಕಂಡುಹಿಡೀತೀನಿ ಅಂತ ಹೇಳಿದ ಮೇಲೆ ಮುಗಿದು ಹೋಯ್ತು—ಎಲ್ಲಿದ್ರೂ ಸರಿ.

ವಿಶ್ವನಾಥ : ಆತ್ಮಹತ್ಯ ಮಾಡಿಕೊಂಡಿದ್ರೆ ?

ರಾಜಿ : ಗೌರಮ್ಮ : ರತ್ನ : ಆಂ

ರಾಜಿ : ಅಪಶಕುನದ ಮುಂಡೇದೆ.

[ರತ್ನ, ರಾಜಿ, ಗೌರಮ್ಮ ಮುಸಿಮುಸಿ ಅಳಲು ಶುರು ಮಾಡುತ್ತಾರೆ. ಪೋಲೀಸ ವಿಶ್ವನಾಥ ನನ್ನು ದುರುಗುಟ್ಟಿಕೊಂಡು ನೋಡುತ್ತಾನೆ. ನಿಧಾನವಾಗಿ ಕತ್ತಲು ಆವರಿಸುತ್ತದೆ.]

ವಿಶ್ವನಾಥನ ಧ್ವನಿ : ಇನ್ಸಪೆಕ್ಟರೇ, ನಮ್ಮಕ್ಕನ ಹೊಟ್ಟೆ ಕಡೆ ನಿಮ್ಮ ದೃಷ್ಟಿ ಹರಿಯದಿದ್ದದ್ದು ಪರಮಾಶ್ಚರ್ಯ.

[ಸಂಪೂರ್ಣ ಕತ್ತಲೆ]

ಪೋಲಿಸನ ಧ್ವನಿ : ಅನ್ಯಾಕ್ಷಿಚಿತಯಂತೋ ಮಾಂ ಯೋಜನಾ....

3

[ಮಬ್ಬು ಬೆಳಕು ರಂಗದ ಎಡಭಾಗದಿಂದ ರಾಜಣ್ಣ ಮೂಟೆಯನ್ನು ಎಡಗೈಲಿ ಹಿಡಿದು ನಿಧಾನವಾಗಿ ಕಾಲೆಳೆದುಕೊಂಡು ಬರುತ್ತಾನೆ. ರಂಗದ ಮಧ್ಯಭಾಗದಲ್ಲಿ ಮೂಟೆಯನ್ನು ಬಲ ಗೈಗೆ ಬದಲಾಯಿಸುತ್ತಾನೆ. ಭಾರತಾಳ ಲಾರದೆ ಒಂದೆರಡು ಹೆಜ್ಜೆ ಇಡುವಷ್ಟರಲ್ಲೇ ಸುಸ್ತಾಗಿ, ಎರಡೂ ಕೈಗಳಿಂದ ಎತ್ತಿಕೊಂಡು ಹೆಗಲಿನ ಮೇಲಿಟ್ಟು ಕೊಂಡು ರಂಗದ ಮತ್ತೊಂದು ಪಾರ್ಶ್ವದಲ್ಲಿ ನಿರ್ಗಮಿಸುತ್ತಾನೆ. ಬಲಪಾರ್ಶ್ವದಿಂದ ಮತ್ತೆ ಬಂದಾಗ ಮೂಟೆ, ಹೆಗಲಿನ ಮೇಲಿದೆ. ಭಾರದಿಂದ ಕುಗ್ಗಿ ಬಳಲಿ ದ್ದಾನೆ. ಎಡ ಭಾಗದ ರಂಗದ ಮೇಲು ಭಾಗದ ಮೂಲೆಯಲ್ಲಿ ಮೂಟೆಯನ್ನಿಟ್ಟು, ಮೈ ಮುರಿದು ತೃಪ್ತಿಯಿಂದ ರಂಗದ ಬಲಕ್ಕೆ ತಿರುಗಿ ನಡೆಯಲಾರಂಭಿಸುತ್ತಾನೆ. ಮುಕ್ಕಾಲು ಭಾಗ ದೂರ ಕ್ರಮಿಸಿದ್ದಾಗ ನಿಲ್ಲುತ್ತಾನೆ. ಕಪ್ಪು ಕನ್ನಡಕ ಧರಿಸಿದ ನಾಲ್ವರು ವ್ಯಕ್ತಿಗಳು ಅವನ ದಾರಿಯಲ್ಲಿ ಅಡ್ಡ ನಿಂತಿದ್ದಾರೆ. ವ್ಯಕ್ತಿ ಗಳು ಅವನು ಮುಂದೆ ಹೋಗಲು ಸಾಧ್ಯವಿಲ್ಲ ದಂತೆ ನಿಧಾನವಾಗಿ ಅವನತ್ತ ಹೆಜ್ಜೆ ಹಾಕುತ್ತಾ ಅವನು ಭೀತಿಯಿಂದ ಹಿಂದೆ ಸರಿಯುವಂತೆ ಮಾಡುತ್ತಾರೆ. ರಾಜಣ್ಣ ತನ್ನ ಮುಂದೆ ಬರುತ್ತಿರುವವರನ್ನು ಎದುರಿಸಲಾರದೆ ಹಿಂದೆ ಹಿಂದೆ ಸರಿಯುತ್ತಾನೆ. ವ್ಯಕ್ತಿಗಳು ಅವನನ್ನು ಮೂಲೆಯಲ್ಲಿದ್ದ ಮೂಟೆಯ ಸಮೀಪಕ್ಕೆ ಒತ್ತಲಿಸುತ್ತಾರೆ. ಇಬ್ಬರೂ ವ್ಯಕ್ತಿಗ ಮೂಟೆಯನ್ನು ಎತ್ತಿ ಅವನ ತಲೆಯ ಮೇ ಡುತ್ತಾರೆ. ಮತ್ತಿಬ್ಬರು ಅವನ ಕೈಗಳ್ನ ಎತ್ತಿ ಅವನು ಮೂಟೆಯನ್ನು ಭದ್ರವಾಗಿ

ಹಿಡಿದುಕೊಳ್ಳುವಂತೆ ಮಾಡುತ್ತಾರೆ. ಒಬ್ಬ ರಂಗದ ಮಧ್ಯೆ ಬಂದು ಸಂಚಾರವನ್ನು ನಿಯಂತ್ರಿಸುವ ಪೋಲೀಸನಂತೆ ಎಡಗೈಯನ್ನೆತ್ತಿ ಬಲಗೈಯನ್ನು ನೀಡಿ ಮಾರ್ಗದರ್ಶನ ಮಾಡುತ್ತಾನೆ. ಉಳಿದ ಮೂವರು ರಾಜಣ್ಣನ ಬೆನ್ನಿನ ಮೇಲೆ ತಮ್ಮ ಕೈಯನ್ನಿಟ್ಟು ನೂಕುತ್ತಾರೆ. ರಾಜಣ್ಣ ನಿಧಾನವಾಗಿ ನಿರ್ದೇಶಿತ ದಿಕ್ಕಿನಲ್ಲಿ ಹೆಜ್ಜೆ ಹಾಕುತ್ತಾನೆ. ಕತ್ತಲು]

4

[ಮತ್ತೆ ಮಬ್ಬು ಬೆಳಕು. ಆದರೆ ಹಿಂದಿನ ದೃಶ್ಯಕ್ಕಿಂತ ಹೆಚ್ಚು ಸ್ಪಷ್ಟವಾಗಿದೆ. ರಾಜಣ್ಣ ರಂಗದ ಬಲ ತುದಿಯಲ್ಲಿ ಮೂಟೆಯನ್ನು ಇಳಿಸಿ ಸರಸರನೆ ಹೆಜ್ಜೆ ಹಾಕಿ ಎಡಗಡೆಗೆ ನಡೆಯುತ್ತಾನೆ. ನಾಲ್ಕಾರು ಹೆಜ್ಜೆ ಹಾಕಿರುವಷ್ಟರಲ್ಲಿ, ಹತ್ತಾರು ಅಡಿ ಉದ್ದದ ತುದಿಯಲ್ಲಿ ಪರಚಲು ಸಿದ್ಧವಾಗಿರುವಂತೆ ಬೆರಳುಗಳನ್ನು ಬಿಡಿಸಿದ ಮರದ ಕೈಯನ್ನು ಜೋಡಿಸಿರುವ ಬೊಂಬೊಂದು, ಬಲ ಪಾರ್ಶ್ವದಿಂದ ಹೊರಟು ಅವನ ಶರ್ಟಿನ ಕಾಲರಿಗೆ ಸಿಕ್ಕಿಕೊಳ್ಳುತ್ತದೆ. ರಾಜಣ್ಣ ಬೆಚ್ಚಿ ನಿಲ್ಲುತ್ತಾನೆ. ಬೊಂಬು ಅವನನ್ನು ಸಾವಕಾಶವಾಗಿ ಹಿಂದಕ್ಕೆ ಎಳೆದು ಅವನು ಮೂಟೆಯ ಸಮೀಪ ಬಂದಾಗ, ಅವನನ್ನು ಬಿಟ್ಟು ಒಳಕ್ಕೆ ಸರಿಯುತ್ತದೆ. ಈಗ ಬೆಳಕು ಹೆಚ್ಚು ಪ್ರಖರವಾಗುತ್ತಿದೆ. ರಾಜಣ್ಣ ಮತ್ತೊಮ್ಮೆ ಮೂಟೆಯನ್ನು ಎತ್ತಿ ತಲೆಯ ಮೇಲಿಟ್ಟುಕೊಂಡು ಎಡ ದಿಕ್ಕಿಗೆ

ಹೊರಡುತ್ತಾನೆ. ರಂಗದ ಮಧ್ಯ ಹಿಂತುದಿಯಲ್ಲಿ ಮೂಟೆಯನ್ನಿಳಿಸಿ. ಅದರೊಳಗಿಂದ ಒಂದು ಸೀರೆಯನ್ನು ತೆಗೆದು, ಮೂಟೆಗೆ ಹೊದಿಸುತ್ತಾನೆ. ಪೂರ್ತಿ ಮುಚ್ಚಿದೆಯೆಂದು ಒಮ್ಮೆ ಚೆನ್ನಾಗಿ ಪರೀಕ್ಷಿಸಿ, ರಂಗದ ಬಲ ಪಾರ್ಶ್ವದಿಂದ ನಿರ್ಗಮಿಸುತ್ತಾನೆ. ಈಗ ಮೂಟೆಯ ಮೇಲೆ ಬೆಳಕು ಕೇಂದ್ರೀಕೃತವಾಗಿದೆ. ರಂಗದುದ್ದಕ್ಕೂ ಎಡದಿಂದ ಬಲಕ್ಕೆ ನೆಲದಿಂದ ಸುಮಾರು ಐದು ಅಡಿ ಎತ್ತರದಲ್ಲಿ ಹಾಯ್ದಿರುವ ಹಗ್ಗ ಕಾಣಿಸುತ್ತದೆ. ಹಗ್ಗ ಬಲದಿಂದ ಎಡಕ್ಕೆ ಸರಿಯುತ್ತಿದೆ. ರಂಗದ ಎಡಭಾಗದಿಂದ ಕುತ್ತಿಗೆಗೆ ಕುಣಿಕೆ ತೊಟ್ಟಿರುವ ರಾಜಣ್ಣ ಹಿಂದು ಮುಂದಾಗಿ ರಂಗದ ಮೇಲಕ್ಕೆ ಎಳೆಯಲ್ಪಡುತ್ತಾನೆ. ಈಗ ರಾಜಣ್ಣನ ಮೇಲೆ ಬೆಳಕು ಪ್ರಖರವಾಗಿ ಬೀಳುತ್ತದೆ. ಅವನು ನಿಲ್ಲುತ್ತಾನೆ ನೇರವಾಗಿ ಮುಖದ ಮೇಲೆ ಬೀಳುವ ಬೆಳಕನ್ನು ಎದುರಿಸಲಾರದೆ ಕಣ್ಣು ಮುಚ್ಚಿಕೊಳ್ಳುತ್ತಾನೆ. ಹಿಂದೆ ತಿರುಗಿ ಮೂಟೆಯನ್ನೂ ನೋಡುತ್ತಾನೆ. ಮತ್ತೆ ಪ್ರೇಕ್ಷಕರತ್ತ ತಿರುಗಿದಾಗ, ಹಗ್ಗ ಅವನ ಎದೆಯ ಸುತ್ತ ಸುತ್ತಿಕೊಂಡಿದೆ. ಹೀಗೆ ನಾಲ್ಕಾರು ಬಾರಿ ತಿರುಗಿ ಅವನ ಎದೆಯ ಭಾಗದಲ್ಲಿ ಹಗ್ಗ ಬಲವಾಗಿ ಸುತ್ತಿಕೊಳ್ಳುತ್ತದೆ; ಮೊಣಕಾಲೂರಿ ಕುಳಿತುಕೊಂಡು ಪ್ರಯಾಸಪಟ್ಟು, ಜೇಬಿನಿಂದ ಒಂದು ಕೊಳಲು ತೆಗೆದು, ಬಾರಿಸಲು ಪ್ರಾರಂಭಿಸುತ್ತಾನೆ. ನಾಲ್ಕಾರು ಅಪಸ್ವರಗಳು ಹೊರಡುತ್ತವೆ. ಕ್ರಮೇಣ ಕತ್ತಲಾಗುತ್ತದೆ.]

5

[ಕಪ್ಪು ಕನ್ನಡಕ ಧರಿಸಿದ ನಾಲ್ಕು ವ್ಯಕ್ತಿಗಳು ಚಚೌಕವಾಗಿ ಒಬ್ಬರ ಕೈಯನ್ನು ಒಬ್ಬರು ಹಿಡಿದು ರಂಗದ ಬಲ ಬಾಗದಲ್ಲಿ ನಿಂತಿದ್ದಾರೆ. ಅವರ ಮಧ್ಯೆ ಹಗ್ಗ ಸುತ್ತಿಕೊಂಡ ರಾಜಣ್ಣ ನಿಂತಿದ್ದಾನೆ. ರಂಗದ ಮಧ್ಯಭಾಗದಲ್ಲಿ ಒಂದು ಮೇಜಿನ ಮೇಲೆ ಮೂಟೆ ಇದೆ ]

[ಬಲಭಾಗದಿಂದ ಪೋಲೀಸ, ಗೌರಮ್ಮ, ರಾಜಿ ರತ್ನ ಮತ್ತು ವಿಶ್ವನಾಥ ಒಬ್ಬರ ಹಿಂದೊಬ್ಬರು ಪ್ರವೇಶಿಸುತ್ತಾರೆ. ಪೋಲೀಸ ಮೂಟೆಯಲ್ಲಿದ್ದ ವಸ್ತುಗಳನ್ನು ಮೇಜಿನ ಮೇಲೆ ಚೆಲ್ಲಿ ಹರಡುತ್ತಾನೆ.]

ಪೋಲೀಸ : ಗೌರಮ್ಮನವರೇ. ಈ ವ್ಯಕ್ತೀನ ನೀವು ಹಿಂದೆ ಎಲ್ಲಾದರೂ ನೋಡಿದ್ರಾ ?

ಗೌರಮ್ಮ : ಇದೇನಪ್ಪ ಹೀಗೆ ಕೇಳ್ತೀರಿ, ರಾಜಣ್ಣ ನನ್ನ ಮಗನಲ್ಲವೇ ?

ಪೋಲೀಸ : ಇರಬಹುದು ಆದ್ರೂ ನನ್ನ ಪ್ರಶ್ನೆಗೆ ಉತ್ತರ ಹೇಳಿ: ನೋಡಿದ್ರಾ ಅಥವಾ ನೋಡಿಲ್ಲವಾ ?

ಗೌರಮ್ಮ : ನೋಡದೆ ಉಂಟೇ ? ನೋಡಿದೀನಿ.

ಪೋಲೀಸ : ಎಲ್ಲಿ ನೋಡಿದ್ರಿ ?

ಗೌರಮ್ಮ : ಎಲ್ಲೀಂದ್ರೆ ? ದಿನಾ ಮನೇಲಿ ನೋಡ್ತಾ ಇರ್ತಿದ್ದೆ ?

ಪೋಲೀಸ : ಈ ಹಿಂದೆ ಕಡೇ ಸಲ ಯಾವಾಗ ನೋಡಿದ್ರಿ ?

ಗೌರಮ್ಮ : ಮೂರು ದಿನದ ಹಿಂದೆ, ರಾತ್ರಿ ಊಟ ಮಾಡಿ ಮಲಕ್ಕೊಳ್ಳೋಕೆ ಮುಂಚೆ ಬೆಳಗಾಗೆದ್ದು ನೋಡಿದ್ರೆ ಇರಲಿಲ್ಲ.

ಪೋಲೀಸ : ಒಳ್ಳೇದು, ನಿಮಗೂ ಇವರಿಗೂ ಏನು ಸಂಬಂಧ ?

ಗೌರಮ್ಮ : ಆಗ್ಲೇ ಎಲ್ಲಾ ಹೇಳಿದ್ನಲಪ್ಪಾ, ನನ್ನ ಮಗ ಸ್ವಂತ ಮಗ.

ಪೋಲೀಸ : ಮೊದಲು ಹೇಳಿರಬಹುದು, ಆದ್ರೆ ಕೋರ್ಟಿನಲ್ಲಿ ಪುನಃ ಹೇಳಬೇಕಾಗುತ್ತೆ, ಚೆನ್ನಾಗಿ ನೋಡಿ ಹೇಳಿ, ಇವರೇ ತಾನೆ ನಿಮ್ಮ ಮಗ? ಮೂರು ದಿನದಿಂದ ಪತ್ತೆ ಇಲ್ಲದೆ ಹೋದೋರು?

ಗೌರಮ್ಮ : ಹೌದೌದು ಇವನೇ ರಾಜಣ್ಣ ಏನೂ ಸಂಶಯ ಇಲ್ಲ.

ಪೋಲೀಸ : ಒಳ್ಳೇದು ಇವರೇ ನಿಮ್ಮ ಮಗ ಅನ್ನೋದಕ್ಕೆ ಏನಾದ್ರೂ ಸಾಕ್ಷಿ ಇದೆಯಾ?

ಗೌರಮ್ಮ : ಸಾಕ್ಷಿ? ಇದಕ್ಕೆಲ್ಲಾ ಸಾಕ್ಷಿ ಯಾಕಪ್ಪಾ? ನಾನು ಹೇಳಿದ್ರೆ ಸಾಲದೆ?

ಪೋಲೀಸ : ಉಹುಂ ಎಲ್ಲಾದಕ್ಕೂ ಸಾಕ್ಷೀ ಬೇಕೇ ಬೇಕು.

[ಮೇಜಿನ ಮೇಲೆ ಹರಡಿದ್ದ ಸಾಮಾನುಗಳಲ್ಲಿ ಹುಡುಕಿ ಕಟ್ಟು ಗಾಜು ಹಾಕಿದ್ದ ಒಂದು ಫೋಟೋ ತೆಗೆದು ಗೌರಮ್ಮನ ಮುಂದೆ ಹಿಡಿದು]

ನೋಡಿ, ಚೆನ್ನಾಗಿ ನೋಡಿ, ಈ ಫೋಟೋದಲ್ಲಿರೋ ವ್ಯಕ್ತಿ ಯಾರು ಹೇಳಿ?

[ಗೌರಮ್ಮ ಫೋಟೋವನ್ನು ಕೈಯಲ್ಲಿ ಹಿಡಿದು ಕೊಂಡು ನೋಡುತ್ತಾಳೆ.]

ಗೌರಮ್ಮ : ಅಯ್ಯೋ, ಹೌದು ಇದೇ ಫೋಟೋ ನಮ್ಮಗೂದು. ಮನೇಲಿ ಗೋಡೆ ಮೇಲೆ ಹಾಕಿದ್ವಲ್ಲ. ಅಲ್ವೇನೇ ರಾಜಿ?

[ರಾಜಿ ಹೌದೆಂದು ತಲೆ ಹಾಕುತ್ತಾಳೆ.]

ಚಿಕ್ಕ ಹುಡುಗ ಆಗಿದ್ದಾಗ ತೆಗೆಸಿದ್ದು ನೋಡಿ ಟೋಪಿ ಹಾಕ್ಕೊಂಡಿದ್ದಾನೆ. ಚಪ್ಪಲಿ ಹಾಕ್ಕೊಂಡಿದಾನೆ. ಸ್ಲೇಟುಂ

ಪುಸ್ತಕದ ಚೀಲ ಹೌದೌದು............ಅನುಮಾನವೇ ಇಲ್ಲ ರಾಜಣ್ಣನೇ,

ಪೋಲೀಸ : ಪೋಟೋಗ್ರಾಫರ ಬರಲಿ.

(ಮುದಿ ವಯಸ್ಸಿನ ಒಬ್ಬ ವ್ಯಕ್ತಿ ಬರುತ್ತಾನೆ)

ಪೋಲೀಸ : ನಿಮ್ಮ ಹೆಸರೇನು ? ನಿಮ್ಮ ಉದ್ಯೋಗ ?

ಪೋಟೋ : ನನ್ನ ಹೆಸರು ಪೋಟೋವಾಲಾ. ನಾನೊಬ್ಬ ನುರಿತ ಪೋಟೋಗ್ರಾಫರ.

ಪೋಲೀಸ : ಈ ಪೋಟೋ ನೀವು ತೆಗೆದಿದ್ದಾ ?

ಪೋಟೋ : (ಪೋಟೋವನ್ನು ತಂಬಾ ತೀಕ್ಷ್ಣವಾಗಿ ಪರೀಕ್ಷಿಸುತ್ತಾ] ಹೌದು, ಹೌದು ಇಂಥಾ ಪೋಟೋ ನಾನಲ್ಲದೆ ಬೇರೆ ಯಾರು ತೆಗೆಯೋಕೆ ಸಾಧ್ಯ. ಬಹಳ ಹಿಂದೆ ತೆಗೆದದ್ದು ಆದ್ರೂ ಮೊನ್ನೆ ಮೊನ್ನೆ ತೆಗೆದ ಹಾಗಿದೆ.

ಪೋಲಿಸ : ಪೋಟೋ ತೆಗೆಸಿಕೊಂಡ ವ್ಯಕ್ತಿ ಇವರೇನಾ ?

[ಪೋಟೋಗ್ರಾಫರ ರಾಜಣ್ಣ ಮತ್ತ ಪೋಟೋವನ್ನು ಹೋಲಿಸುವಂತೆ ನೋಡುತ್ತಾನೆ]

ಪೋಟೋ : ಅನುಮಾನವೇ ಇಲ್ಲ.

ಪೋಲೀಸ : ಬಹಳ ಥ್ಯಾಂಕ್ಸ.

[ಪೋಟೋವನ್ನು ವಾಪಸ ಪಡೆದು ಮೇಜಿನ ಮೇಲಿಡುತ್ತಾನೆ.]

ರಾಜಮ್ಮ ಈ ವ್ಯಕ್ತೀನ ನೀವು ಹಿಂದೆ ನೋಡಿದ್ರಾ ?

[ಪೋಟೋಗ್ರಾಫರ ಎಲ್ಲರಿಗೂ ವಂದಿಸಿ ನಿರ್ಗಮಿಸುತ್ತಾನೆ.]

ರಾಜಿ : ನೋಡಿದೀನಿ.

ಪೋಲೀಸ : ಎಲ್ಲಿ

ರಾಜಿ : ನಮ್ಮನೇಲಿ.

ಪೋಲೀಸ : ನಿಮಗೂ ಅವರಿಗೂ ಏನು ಸಂಬಂಧ ?

ರಾಜಿ : ಅವರು ನಮ್ಮೆಜಮಾನ್ರು.

ಪೋಲೀಸ : ಇವರೇ ನಿಮ್ಮ ಯಜಮಾನ್ರು ಅನೋದಕ್ಕೆ ಏನಾದ್ರೂ ಸಾಕ್ಷಿ ಇದೆಯಾ ?

ರಾಜಿ : ನಾವು ಇಪ್ಪತ್ತೊರ್ಷದಿಂದ ಒಟ್ಟಿಗೆ ಸಂಸಾರ ಮಾಡ್ತಿದ್ದದೇ ಸಾಕ್ಷಿ.

[ರಾಜಿ ತನ್ನ ಮಕ್ಕಳತ್ತ ನೋಡಿ, ಸೂಕ್ಷ್ಮವಾಗಿ ಹೊಟ್ಟೆ ಮುಟ್ಟಿ ನೋಡಿಕೊಳ್ಳುತ್ತಾಳೆ]

ಪೋಲೀಸ : ಬೇರೇನೂ ಸಾಕ್ಷಿ ಇಲ್ಲವೇ ?

ರಾಜಿ : [ಅಸಹಾಯಕಳಾಗಿ] ಬೇರೆ ಏನು ಬೇಕು ?

[ಪೋಲೀಸ ಮೇಜಿನ ಹರದದಿಂದ,ಒಂದು ಲಗ್ನ ಪತ್ರಿಕೆಯನ್ನು ಹುಡುಕಿ ತೆಗೆದು ರಾಜಿಯ ಕೈಲಿ ಕೊಡುತ್ತಾನೆ.]

ಪೋಲೀಸ : ಓದಿ.

ರಾಜಿ : ಲಗ್ನಪತ್ರಿಕೆ ಚೈತ್ರ ಶುದ್ಧ ದಶಮಿಯಂದು ಸೂರ್ಯೋದಯಾದಿ ಎರಡೂವರೆ ಘಳಿಗೆಗೆ ಸಲ್ಲುವ ಶುಭ ಮಿಥುನ ಲಗ್ನದಲ್ಲಿ ನನ್ನ ದ್ವಿತೀಯ ಪುತ್ರ ಚಿ. ರಾ. ರಾಜಣ್ಣ ಮತ್ತು ಲೇಟ ನಾರಣಪ್ಪನವರ ಜ್ಯೇಷ್ಠ ಪುತ್ರಿ ಹ. ಕುಂ. ಶೋ. ರಾಜೇಶ್ವರಿ ಇವರ ಶುಭ ವಿವಾಹವನ್ನು ಭಗವತ್ಪ್ರೇರಣೆಯಿಂದ ಗುರು ಹಿರಿಯರು........

ಪೋಲೀಸ : ಹೂಂ, ಸಾಕು, ಇದೇ ನಿಮ್ಮ ಸಾಕ್ಷಿ...

ರಾಜಿ : ನಮ್ಮ ಮದುವೆ ಲಗ್ನ ಪತ್ರಿಕೆ.

[ಲಗ್ನಪತ್ರಿಕೆಯನ್ನು ಅವಳ ಕೈಯಿಂದ ಇಸಿದುಕೊಂದು ಮೇಜಿನ ಮೇಲಿದ್ದ ಫೋಟೋದ ಮೇಲಿಡುತ್ತಾನೆ.]

ಪೋಲೀಸ : ರತ್ನ ಮಿಸ ರತ್ನ.

ರತ್ನ : (ಉತ್ಸುಹಕತೆಯಿಂದ ಮುಂದೆ ಬಂದು)

ಏನ್ಸರ ?

ಪೋಲೀಸ : ಈ ವ್ಯಕ್ತಿ ಪರಿಚಯು ಇದ್ಯಾ ನಿಮಂಗೆ ?

ರತ್ನ : ಇವರು ನಮ್ಮ ತಂದೆ ಸಾರ.

ಪೋಲೀಸ : ಈ ವಿಷಯು ನಿಮಗೆ ಹೇಗೆ ಗೊತ್ತು ?

ರತ್ನ : ಇದೇನ ಸಾರ ಹೀಗೆಲ್ಲಾ ಕೇಳ್ತೀರಿ ?

ಪೋಲೀಸ : ಇದು ಕೋರ್ಟ, ಕೇಳಿದ ಪ್ರಶ್ನೆಗೆ ಸರಿಯಾಗಿ ಉತ್ತರ ಹೇಳಬೇಕು.

ರತ್ನ : ಆಗ್ಲಿ ಸಾರ ಪ್ರಯುತ್ನಪಡ್ತೀನಿ.

ಪೋಲೀಸ : ಹೂಂ ಹೇಳಿ ಇವರು ನಿಮ್ಮ ತಂದೆ ಅಂತ ನಿಮಗೆ ಯಾರಾದ್ರೂ Introdue ಮಾಡಿಕೊಟ್ಟಿದ್ರಾ ?

ರತ್ನ : (ಪೆಚ್ಚಾಗಿ) ಇಲ್ಲಾ ಸಾರ.

ಪೋಲೀಸ : ನಿಮ್ಮ ತಾಯಿ, ಅಜ್ಜ ಯಾರು ಹೇಳಲೇ ಇಲ್ಲವೇ ?

ರತ್ನ : ಅಂಥ ಪರಿಸ್ಥಿತಿ ಇದುವರೆಗೂ ಬಂದೇ ಇಲ್ಲ ಸಾರ. ಈಗ ಕೇಳ್ತೀನಿ (ತಾಯಿಯ ಕಡೆ ತಿರುಗಿ) ಏನಮ್ಮಾ, ನೀನು ಹೇಳಿದೆ ಅಂತ ಸಾಕ್ಷಿ ಹೇಳಲೇ ?

ರಾಜಿ : ಹೇಳಮ್ಮ, ಪರವಾಗಿಲ್ಲ.

ರತ್ನ : ಹೌದು ಸಾರ. ನಮ್ಮ ತಾಯಿ ಹೇಳಿದ್ರು.

ಪೋಲೀಸ : ಏನಂತ ?

ರತ್ನ : ಇವರೇ ನಮ್ಮ ತಂದೆ.

ಪೋಲೀಸ ; ಒಳ್ಳೇದು. ನಿಮ್ಮ ತಾಯಿ ಸಾಕ್ಷ್ಯಾನ ನಾವು ಆಗಲೇ ಒಪ್ಪಿ ಕೊಂಡಿರೋದ್ರಿಂದ, ನಿಮ್ಮ ಸಾಕ್ಷ್ಯಾನು ಒಪ್ಪಿಕೋತೀವಿ.

ರತ್ನ : ಥ್ಯಾಂಕ್ಯೂ ಸರ.

ಪೋಲೀಸ : ವಿಶ್ವನಾಥ ನಿಮ್ಮದೂ ಮುಗಿಸಿ ಬಿಟ್ರೆ ಕೇಸ ಈಗ್ಲೇ ಡಿಸೈಡ ಮಾಡಬಹುದು.

ವಿಶ್ವನಾಥ : ನಾನು ಏನು ಹೇಳಬೇಕು ?

ಪೋಲೀಸ : ಈ ವ್ಯಕ್ತೀನ ನೀವು ಗುರುತಿಸ್ತೀರಾ ?

ವಿಶ್ವನಾಥ : ಹೌದು ನಾವು ಬಹಳ ದಿನ ಒಂದೇ ಮನೇಲಿ ವಾಸವಾಗಿದ್ವಿ.

ಪೋಲೀಸ : ನಿಮ್ಮ ಅವರ ಸಂಬಂಧ ?

ವಿಶ್ವನಾಥ : ಗೊತ್ತಿಲ್ಲ.

ಪೋಲೀಸ : ನೀವು ಈ ವ್ಯಕ್ತಿಯ ಮಗ ಅಲ್ಲವೇ ?

ವಿಶ್ವನಾಥ ; ಗೊತ್ತಿಲ್ಲ.

ಪೋಲೀಸ : ಇದೇನೋ ಪ್ರಾರಬ್ಧವೇ ಹೀಗೆ ಮಾತಾಡ್ತಿದ್ದಿ ?

ಪೋಲೀಸ : ನಿಮ್ಮ ಅಕ್ಕ ರತ್ನ ಹೇಳಿದ ಹಾಗೆ ನೀವು ಹೇಳಬಹುದು.

ವಿಶ್ವನಾಥ : ಇದುವರೆಗೆ ಯಾರೂ ಈತ ನನ್ನ ತಂದೆ ಅಂತ ಪರಿಚಯ ಮಾಡಿಕೊಟ್ಟಿಲ್ಲ.

ಪೋಲೀಸ : ಈಗ ಮಾಡಿಕೊಡಬಹುದು.

ವಿಶ್ವನಾಥ : ಆದ್ರೆ ನನಗೆ ಹೇಗೆ ನಂಬಿಕೆ ಬರಬೇಕು ?

ರಾಜಿ : ನಾನು ಹೇಳ್ತೀನಿ ಹೇಳೋ.

ವಿಶ್ವನಾಥ : ನಂಗೆ ಗೊತ್ತಿರೋಷ್ಟು ವಿಷಯ ಮಾತ್ರ ಹೇಳ್ತೀನಿ. ನಮ್ಮಪ್ಪ ಅಂತ ನೀವೆಲ್ಲಾ ಹೇಳ್ತಾ ಇರೋ ಈ ವ್ಯಕ್ತೀನೂ ಒಬ್ಬ ಮನುಷ್ಯ ಅಂತ ನೋಡಬೇಕು. ಅಂತ ನಾನಾಗ್ಲೇ....

ಪೋಲೀಸ : ಆ ವಿಷ್ಯ ನಮಗೆ ಬಿಡು.

ವಿಶ್ವನಾಥ : ಅದಕ್ಕಿಂತ ಹೆಚ್ಚಿಗೆ ಹೇಳೋದೇನಿಲ್ಲ ನನಗೆ.

ಪೋಲೀಸ : (ಮುಂದೆ ಬಂದು ಪ್ರೇಕ್ಷಕರನ್ನುದ್ದೇಶಿಸಿ)

My lord this witness has turned hostile. I Seek your permission to suppres this witness.

[ಕಪ್ಪು ಕನ್ನಡಕದ ವ್ಯಕ್ತಿಗಳು ತಕ್ಷಣ ವಿಶ್ವನಾಥನ ಮೇಲೆ ಆಕ್ರಮಣ ನಡೆಸಿ, ಅವನನ್ನು ಬಲವಂತವಾಗಿ ಹೊತ್ತುಕೊಂಡು ರಂಗದ ಎಡಬದಿಯಲ್ಲಿ ನಿರ್ಗಮಿಸುತ್ತಾರೆ. ಅವರು ಮೇಲೆ ಬಿದ್ದು ಹೊತ್ತುಕೊಂಡು ಹೋಗುವಾಗ ವಿಶ್ವನಾಥ ಪ್ರತಿಭಟಿಸುತ್ತಾ ಕಿರುಚಾಡುತ್ತಾನೆ. ವ್ಯಕ್ತಿಗಳು ಕೈ ಕೊಡವಿಕೊಂಡು ಸಾವಕಾಶವಾಗಿ ಬಂದು ರಾಜಣ್ಣನ ಸುತ್ತ ಮೊದಲಿನಂತೆ ಕಟಕಟೆಯನ್ನು ನಿರ್ಮಿಸುತ್ತಾರೆ.]

ಗೌರಮ್ಮ : ಹಾಗೇ ಆಗಬೇಕು. ಅನಿಷ್ಟ ಹುಟ್ಟಿಂದೇದಕ್ಕೆ.

ರತ್ನ : ವಿಶ್ವ ಏನಾದ್ರೂ ಸಾಕ್ಷಿ ಕೊಟ್ಟಿದ್ರೆ, ನಮ್ಮ ಕೇಸ ಬಿದ್ದು ಹೋಗ್ತಾ ಇತ್ತು.

ರಾಜಿ : ಅವನೇನು ಹಲುಬುತ್ತಿದ್ನೋ ನನಗಂತೂ ಅರ್ಥವೇ ಆಗ

ಲಿಲ್ಲ. ಒಟ್ನಲ್ಲಿ ನಮ್ಮನ್ನು ಕಾಡೋದಕ್ಕೆ ಹುಟ್ಟಿದಾನೆ ಅಂತ ಕಾಣುತ್ತೆ.

ಪೋಲೀಸ : ನೀವೇನೂ ಯೋಚನೆ ಮಾಡಬೇಡಿ. ಈಗೆ ಎಲ್ಲಾ ಬಂದೋಬಸ್ತು ಮಾಡ್ತೀನಿ (ರತ್ನಳ ಕಡೆ ನೋಡುತ್ತಾ) ಆದ್ರೂ ನೀವು ಸ್ವಲ್ಪ ಕೇರಫುಲ ಆಗಿರಬೇಕು. ಈಗ ಬಿಡಿ, ನಾವೆಲ್ಲಾ ನೋಡ್ಕೋತೀವಿ.

ರಾಜಿ : ಏನೋ ನಿಮ್ಮಂಥ ಪುಣ್ಯಾತ್ಮರು ಇರೋದ್ರಿಂದ ನಮಗೆ ಒಂದು ನೆಮ್ಮದಿ.

ರತ್ನ : ನೆಕ್ಸ್ಟ್ ಟೈಂ ತುಂಬಾ ಕೇರಫುಲ ಆಗಿರ್ತೀನಿ ಅಂತ ಪ್ರಾಮೀಸ ಮಾಡ್ತೀನಿ ಸಾರ.

ಗೌರಮ್ಮ : ಇದೊಂದ್ಸಲ ಪಾರು ಮಾಡಿಬಿಡಿ. ನಿಮ್ಮ ಹೆಸರು ಹೇಳಿ ದೇವರ ಮುಂದೆ ತುಪ್ಪದ ದೀಪ ಹಚ್ಚಿಡ್ತೀವಿ.

ಪೋಲೀಸ : ಆಗ್ಲಿ, ಹೋಗ್ಲಿ, ಸ್ವಲ್ಪ ಸುಮ್ನಿರಿ ನೀವೆಲ್ಲಾ ಈಗ (ಗಡಿಯಾರದ ಕಡೆ ನೋಡುತ್ತಾ) ತೀರ್ಪು ಕೊಡೋ ವೇಳೆ...

[ಪೋಲೀಸ ರಂಗದ ಮೇಲೆಲ್ಲಾ ಸುತ್ತಾಡಿ ರಾಜಣ್ಣ, ಅವನ ಮೂಟೆ ಮತ್ತು ಅವನ ಪರಿವಾರವನ್ನೆಲ್ಲಾ ಠೀವಿಯಿಂದ ನಿರೀಕ್ಷಿಸುತ್ತಾನೆ. ಥಣ ಥಣ ಎಂದು ಗಂಟೆ ಹೊಡೆದ ಸದ್ದು. ಎಲ್ಲಿದ್ದರಲ್ಲಿ ಎಲ್ಲರೂ ಸೆಟೆದು ಗಂಭೀರವಾಗಿ ನಿಲ್ಲುತ್ತಾರೆ.]

[ಈ ಮೊಕದ್ದಮೆಯ ವಿಚಾರಣೆ ಕೊನೆಗೊಂಡು ಆರೋಪಿ ರಾಜಣ್ಣನಿಗೆ ಆಜೀವಪರ್ಯಂತ ಸಶ್ರಮ ಶಿಕ್ಷೆ ವಿಧಿಸಲಾಗಿದೆ ಎಂಬ ತೀರ್ಪು ರಂಗದ ಮೇಲೆ ಮೊಳಗುತ್ತದೆ.]

[ರಾಜಿ, ರತ್ನ ಗೌರಮ್ಮ ಒಬ್ಬರನ್ನೊಬ್ಬರು ತಬ್ಬಿಕೊಂಡು ತಮ್ಮ ಸಂತೋಷ ಸಂತೃಪ್ತಿಗಳನ್ನು ವ್ಯಕ್ತಪಡಿಸುತ್ತಾರೆ.]

ಗೌರಮ್ಮ : ಅಂತೂ ಗೆದ್ದಿ—

ರಾಜಿ : ಕೊನೇಗೂ ನ್ಯಾಯ ಸಿಕ್ತಲ್ಲಾ ಸಧ್ಯ.

ರತ್ನ : (ಪೋಲೀಸಿಗೆ) ಸಾರ, ನೀವು ಇಷ್ಟೊಂದು ಶ್ರಮವಹಿಸದೆ ಇದ್ರೆ ನಮ್ಮ ಗತಿ ಏನಾಗ್ತಿತ್ತೋ ? ತುಂಬಾ ಥ್ಯಾಂಕ್ಸ.

ಪೋಲೀಸ : ಯು ಆರ್ ವೆಲಕಂ.

ರತ್ನ : ಎಸ್ಸರ.

(ಮೇಲಿನ ಮಾತುಗಳು ನಡೆಯುತ್ತಿರುವಾಗ ಕಪ್ಪುಕನ್ನಡಕದ ವ್ಯಕ್ತಿಗಳು ರಾಜಣ್ಣನ ಶರೀರಕ್ಕೆ ಸುತ್ತಿದ ಹಗ್ಗವನ್ನು ಬಿಚ್ಚುತ್ತಾರೆ. ಅವನ ಶರ್ಟು, ಪ್ಯಾಂಟುಗಳನ್ನು ಬಿಚ್ಚಿ ಕಾಲರ ಇಲ್ಲದ ಅರ್ಧ ತೋಳಿನ ಪಟ್ಟಾಪಟ್ಟಿ ಅಂಗಿ, ಟೋಪಿ ಮತ್ತು ಅದೇ ಬಟ್ಟೆಯ ಚಡ್ಡಿಗಳನ್ನು ತಂದು ತೊಡಿಸುತ್ತಾರೆ. ಬಟ್ಟೆ ಬದಲಾಯಿಸುವಾಗ ರಾಜಣ್ಣನ ಕೊಳಲು ಕೆಳಗೆ ಬೀಳುತ್ತದೆ. ಒಬ್ಬ ವ್ಯಕ್ತಿ ಅದನ್ನು ಆಕಸ್ಮಾತ್ ತುಳಿದು ಮುರಿದ ತುಂಡುಗಳನ್ನು ತಂದು ಮೇಜಿನ ಮೇಲಿಡುತ್ತಾನೆ)

ರಾಜಿ ; ಬರ್‍ತೀವಿ ನಾವು, ನಮಸ್ಕಾರ ತುಂಬಾ ಉಪಕಾರ ಆಯ್ತು.

(ವ್ಯಕ್ತಿಗಳು ಸಾಲಾಗಿ ನಿರ್ಗಮಿಸುತ್ತಾರೆ)

ರತ್ನ : ಬರ್‍ತೀವಿ ಸಾರ, ಜ್ಞಾಪಕ ಇರಲಿ ಮರೆತುಬಿಡಬೇಡಿ.

ಗೌರಮ್ಮ : [ಟೇಬಲ ಮೇಲಿದ್ದ ಫೋಟೋವನ್ನು ಎತ್ತಿಕೊಳ್ಳುತ್ತಾ] ಇನ್ಮೇಲೆ ಜೋಪಾನವಾಗಿ ನೋಡ್ಕೊತೇನಿ.

[ಎಲ್ಲರೂ ಹೊರಡುತ್ತಾರೆ. ಪೋಲೀಸ ರಾಜಣ್ಣನತ್ತ ತಿರುಗುತ್ತಾನೆ. ಇದಾವುದರ ಪರಿವೆ ಇಲ್ಲದಂತೆ ರಾಜಣ್ಣ ಕಣ್ಣುಮುಚ್ಚಿ ನಿಂತಿದ್ದಾನೆ. ನಿಧಾನವಾಗಿ ಕತ್ತಲಾಗುತ್ತದೆ. ಇನ್ನೂ ಯಾರೂ ರಂಗದಿಂದ ಪೂರ್ತಿ ನಿಷ್ಕ್ರಮಿಸಧೆ

ಇರುವಾಗ ಕತ್ತಲು. ಒಬ್ಬ ಫೋಟೋಗ್ರಾಫರ ಓಡಿಬಂದು ಕ್ಲಿಕ ಮಾಡುತ್ತಾನೆ. ಫ್ಲಾಷನಲ್ಲಿ ರಾಜಣ್ಣನೊಳಗೊಂಡು ಅವನ ಪರಿವಾರ (ವಿಶ್ವನಾಥ ಇಲ್ಲ) ಅವರ ಹಿಂದೆ ಪೋಲೀಸ ಅಧಿಕಾರಿ ಪೋಸ ಕೊಟ್ಟಿದ್ದಾರೆ.]

(ತೆರೆ)

ಪಾತ್ರಗಳು :

ರಾಘು

ಜಯಾ

ವಿಮಲ

ಸಂಭಾಷ

ಕೇಶವ

ವ್ಯಕ್ತಿ (ನಾಟಕಕಾರ)

[ತೆರೆಯೆದ್ದಾಗ ಕಾಣುವುದು ಒಂದು ಹಳೆಯ ಮಾದರಿಯ ಮನೆಯ ಪಡಸಾಲೆ. ರಂಗದ ಹಿಂಬದಿಗೆ ಪುಸ್ತಕ ತುಂಬಿದ ಹಳೆಯ ಕಪಾಟು. ಅದರ ಮೇಲುಗಡೆ ಗೋಡೆಗೆ ಲೋಕ ಮಾನ್ಯ ಟಿಳಕ, ಸ್ವಾಮಿ ವಿವೇಕಾನಂದರ ಭಾವಚಿತ್ರ ಗಳು. ಅವುಗಳ ಬದಿಗೆ ಅದೇ ಹೊಸತಾಗಿ ಹಾಕಿದಂತಿರುವ ಎನಲಾರ್ಜ ಮಾಡಿದ ಫೋಟೋ, ಅದರಲ್ಲಿಯ ಗಂಡಸಿನ ವಯಸ್ಸು ಐವತ್ತರ ಸುಮಾರು, ಕಣ್ಣು ತೀಕ್ಷ್ಣ ಮೋರೆ ಗಂಭೀರ, ಅದಕ್ಕೊಂದು ಪ್ಲಾಸ್ಟಿಕ ಹೂವಿನ ಹಾರ. ಮೂಲೆಯಲ್ಲಿಯ ಟೀಪಾಯ ಮೇಲೆ ಹಳೆಯ ದೊಡ್ಡ ರೇಡಿಯೋ. ಅದರ ಮೇಲು ಗಡೆ ಗೋಡೆಗೆ ದೊಡ್ಡ ಗಡಿಯಾರ. 1930ರ ಮಾದರಿಯದು. ಕಪಾಟಿನ ಮುಂದುಗಡೆ ನಾಲ್ಕು ಹಳೆಯ ಕುರ್ಚಿಗಳು. ರೇಡಿಯೋದ ಬಳಿ ಚಿಕ್ಕ ಟೇಬಲ್ಲು. ಅಲ್ಲಿ ರಾಘವೇಂದ್ರ, ವಯಸ್ಸು 17 ಪತ್ರ ಬರೆಯುತ್ತಿದ್ದಾನೆ. ಜಯಾ, ವಯಸ್ಸು 19, ರೇಡಿಯೋದ ಮೇಲೆ ಬೇಕಾದ ಸ್ಟೇಶನ ಹಚ್ಚಲು ಯತ್ನಿಸಿ, ಕಡ ಕಡ ಮಾಡಿ ಬಿಡುವುದರಲ್ಲಿದ್ದಾಳೆ. ಮನೆ ಯಲ್ಲಿ ಕಲಾತ್ಮಕತೆ ಇಲ್ಲದಿದ್ದರೂ ಓರಣ ತಾನೇ ತಾನಾಗಿದೆ. ಪಡದೆ ಎತ್ತುತ್ತಿದ್ದಂತೆ ರೇಡಿಯೋ ಗರ ಗರ ಗುಂ ಗಡಗಡ ಮಾಡು ತ್ತದೆ. ರಂಗದ ಎಡಬದಿಗೆ ಮನೆಯ ತಲೆ ಬಾಗಿಲು, ಪರೀಕ್ಷೆ ರದ್ದಾಗಲಿ, ಕ್ರಾಂತಿ ಚಿರಾಯುವಾಗಲಿ, ಇತ್ಯಾದಿ ಘೋಷಣೆಗಳ ಗೊಂಗಾಟ ಕೇಳ ಬರುತ್ತದೆ. ಆ ಕಡೆಯಿಂದ ಜಯಾ ರೇಡಿಯೋ ಬಿಟ್ಟು ತಲೆ ಬಾಗಿಲಿನಲ್ಲಿ

ಹೋಗಿ ನಿಲ್ಲುತ್ತಾಳೆ. ಮತ್ತ ಒಳಗೆ ಬಂದು ರೇಡಿಯೋ ತಿರುವಿದಂತೆ ಮಾಡಿ ಮತ್ತ ತಲೆ ಬಾಗಿಲಿಗೆ ಹೋಗುತ್ತಾಳೆ]

ರಾಘು : [ಜಯಾಳತ್ತ ನೋಡಿ] ಏನ ಆದೂ ? [ಉತ್ತರ ಬರದಾದೊಡನೆ ಎದ್ದು ರಂಗದ ಮಧ್ಯದಲ್ಲಿ ಬರುತ್ತಾನೆ. ಕೈಯಲ್ಲಿ ಹಾಳೆ] ಇನ್ನೊಮ್ಮೆ ಘೋಷಣೆ ಕೇಳಿಬರುತ್ತದೆ. ಪರೀಕ್ಷಾಕ್ಕ ಕೊಡೋದಿದ್ದ ಸರಳ ಕಾಲೇಜಿಗೆ ಹೋಗಬೇಕು. ನಿಷೇಧದ ಮೆರವಣಿಗ್ಯಾಗ ಹೋಗೋದಿದ್ರ ಅಲ್ಲಿ ಹೋಗಬೇಕು. ಆದರ ಯಾವುದಕ್ಕೂ ಧೈರ್ಯ ಮುಖ್ಯ ವ್ಯಾಳೆ ಕೂತ ಬೆಕ್ಕಿನಾಂಗ ಈ ಕಡೆ ಜಿಗಿಲ್ಯೋ ಆ ಕಡಿ ಜಿಗಿಲ್ಯೊ ಅಂತ [ತಾನೇ ಸಾಭಿನಯ ನಗುವನು] ಜಯಾ, ಮೆರವಣಿಗೆ ಹೋತೇನು ?

ಜಯಾ : [ಉಸಿರು ಹಾಕಿದಂತೆ] ಮೆರವಣಿಗಿ ಹೋತಲ್ಲರೀ ಸಾಹೇಬ ? ಇನ್ನಾದರೂ ಹಿಂದಿಂದಾದರೂ ನೋಡಲಿಕ್ಕ ಹರಕತ್ತಿಲ್ಲ. ಎಷ್ಟು ಮಂದೀ ಏನು ಕತೀ ? ಹೆಣ್ಣೂ ಹಂಗ. ಗಂಡೂ ಹಂಗ.

ರಾಘು : ಅಂದರ ನೀ ಮಂದಿನ್ನ ನೋಡಲಿಕ್ಕೇ ನಿಂತಿದ್ದಿ ಅನ್ನು.

ಜಯಾ : ಮತ್ತ ಮೆರವಣಿಗೆ ಅಂದರ ಇನ್ನೇನಿರತದ ?

ರಾಘು : [ಹಣೆಗೆ ಗಂಟು ಹಾಕಿ] ಮೆರವಣಿಗೀ ಮಂದೀ, ಮಂದೀ ಮೆರವಣಿಗಿ. ಹೊಂ ಉದ್ಯೋಗ ಇಲ್ಲ ಮಕ್ಕಳಿಗೆ. [ಇಲ್ಲ. ಇಲ್ಲ ಎಂಬಂತೆ ತಲೆ ಅಲ್ಲಾಡಿಸುತ್ತಾನೆ. ಕೈಯಲ್ಲಿ ಕಾಗದದ ಚೆಂಡು ಮಾಡಿ ಮೂಲೆಗೆಸೆಯುತ್ತಾನೆ. ಕುರ್ಚಿಯ ಕೈತಾಗಿ ಅದು ಮಧ್ಯದಲ್ಲೇ ಬೀಳುತ್ತದೆ]

ಜಯಾ : [ಮೆರವಣಿಗೆ ಹೋದರು ಆಕೆ ಬಾಗಿಲು ಬಿಟ್ಟು ಕದಲಲಿಲ್ಲ] ರಾಘೂ ಆ ಕಾಗದಾ ಎತ್ತು. [ರಾಘು ಅತ್ತ ನೋಡುವುದಿಲ್ಲ] ರಾಘೂ, ನಾ ಹೇಳ್ತೀನಿ ಆ ಕಾಗದಾ ಎತ್ತು.

ರಾಘು : [ರೇಡಿಯೋ ಹಚ್ಚಲು ಯತ್ನಿಸಿ ವಿಫಲನಾಗುತ್ತಾನೆ] ನಿಂದು ಆ ಬಾಗಲದಾಗಿನ ಕೆಲಸ ಮುಗೀತಿಲ್ಲೋ ?

ಜಯಾ : [ಅಪ್ರತಿಭಳಾದಂತೆ] ಯಾಕ, ಅದಕ್ಕೂ ನಿನ್ನ ಹರಕತ್ತೇನು?

ರಾಘು : [ಕೃತ್ರಿಮವಾಗಿ] ಹಂಗಲ್ಲ [ನಗುವನು] ಮೆರವಣಿಗಿ ಈಗ ಕಾಲೇಜು ಮುಟ್ಟಿರಬೇಕು. ಈಗ ನಿನಗ ಬಾಗಿಲದಾಗ ಏನು ಕೆಲಸ ?

ಜಯಾ : ಆಂ [ತಬ್ಬಿಬ್ಬಾದಂತೆ] ಇಲ್ಲೋ, [ಉಸಿರು ಹಾಕಿ] ಅಣ್ಣ ಇನ್ನೂ ಬರಲಿಲ್ಲ. ಕೋರ್ಟಿಗೆ ಹೋದಾಂವಾ. ಅವನ ಹಾದೀ ನೋಡ್ತಿದ್ದೆ.

ರಾಘು : ಆ ಹಾ ಹಾ ಹಾ [ನಗುವನು] ನನಗ ಗೊತ್ತು. ನೀ ಯಾರ ಹಾದೀ ನೋಡತೀಯಂತ [ಹಾಡುವನು] ಇನ್ನೂ ಯಾಕ ಬರಲಿಲ್ಲವ್ವಾ—

ಜಯಾ ; [ಜೋರಾಗಿ] ರಾಘೂ [ಸುಧಾರಿಸಿಕೊಂಡು] ನಿನ್ನ ಕಿವಿ ಉದ್ದ ಆಗಲಿಕ್ಕೆ ಹತ್ತ್ಯಾವ

ರಾಘು : [ಸಲುಗೆಯಿಂದ ಸಮೀಪ ಬಂದು] ಈವತ್ತು ಬರ್ತೇನ್ಯಂತ ಹೇಳ್ಯಾನೇನು ಸುಭಾಷ ? [ಜಯಾ ಮಾತನಾಡುವುದಿಲ್ಲ] ಆಂ ? ಅಂದಹಾಂಗ ಅಂವಾ ನಮ್ಮ ಮನೀಗೆ ಬಂದು ಹೋಗಿ ಎಷ್ಟು ದಿವಸ ಆತಲ್ಲ ? ನಿನಗ ಅಂವಾ ಹೊರಗ ಭೆಟ್ಟಿ ಆಗ್ತಿರಬೇಕು. ಖರೇ.

ಜಯಾ : [ದೈನ್ಯತೆಯಿಂದ] ರಾಘು, ಪ್ಲೀಜ. [ರಾಘು ಅತ್ತಿತ್ತ ಗೋಣು ಅಲ್ಲಾಡಿಸಿ ಕೈ ಕುಣಿಸಿ ಮತ್ತೆ ರೇಡಿಯೋದ ಬಳಿಯ ಕುರ್ಚಿಯ ಮೇಲೆ ಕೂಡ್ರುವನು. ವಿಮಲಾ ಪ್ರವೇಶಿಸುತ್ತಾಳೆ. ವಯಸ್ಸು 40 ಅಕ್ಕಿ ತುಂಬಿದ ಪರಾತದ ಕೈಯಲ್ಲಿ]

ವಿಮಲಾ : [ಅತ್ತಿತ್ತ ನೋಡಿ ಕುರ್ಚಿಯ ಮೇಲೆ ಕೂಡ್ರುವಳು. ತೊಡೆಯ ಮೇಲಿಟ್ಟುಕೊಂಡ ಪರಾತದಲ್ಲಿಯ ಅಕ್ಕಿ ಆರಿಸತೊಡಗುವಳು.

ನಡುವೇ ಆಕೆಯು ಲಕ್ಷ್ಯಸೆಲದತ್ತ ಹೋದಾಗ] ರಾಘೂ, ಏ ರಾಘು ಆ ಕಾಗದಾ ಎತ್ತು, ರಾಘೂ ಹೂಂ ಎಂದು ಮತ್ತೆ ತನ್ನ ಬರೆಯುವ ಕೆಲಸ ಮುಂದುವರಿಸುತ್ತಾನೆ. ವಿಮಲಾ ದನಿಯೇರಿಸಿ, ರಾಘೋ,

ರಾಘು : [ತಾನೂ ಅಷ್ಟೇ ದನಿಯೇರಿಸಿ] ಹೂಂ ಅಂತ ಹೇಳಿದ್ನೆಲಾ. ನಿನ್ನ ಬಾಯಿಯಿಂದ ಶಬ್ದ ಹೊರಬಿದ್ದ ಕೂಡಲೇ ಆಗಲಿಕ್ಕೇ ಬೇಕೇನು ? [ಸಿಟ್ಟು, ಸಿಟ್ಟಿನಿಂದ ಕಾಗದ ಎತ್ತಿ ಬದಿಗಿಡುವನು]

ವಿಮಲಾ : [ಮೆತ್ತಗಾಗಿ] ಹಾಂಗಲ್ಲ ರಾಘೂ, ಈಗ ಕಾಗದಾ ಹರದು ಕೆಳಗ ಯಾಕ ಒಗೀಬೇಕು ? ನಾನ ನೋಡು, ಅಕ್ಕೀ ಆರ ಸ್ತೇನಿ. ಅದರಾಗಿನ ಹರಳು, ಭತ್ತಾ ಕೆಳಗ ಒಗಿಯೊದಿಲ್ಲ. ಇಕಾ ಈ ಬಟ್ಟಲದಾಗ ಹಾಕತೇನಿ. ಯಾರರೇ ಬಂದರ ಬಿಟ್ಟರ ಮನೀ ಹ್ಯಾಂಗ ಕಾಣಸಬೇಕು ? ನಿಮ್ಮಪ್ಪ ಇರೋ ತನಕಾ ಒಂದು ಚೂರು ಹೊಲಸು ಕಸಾ ಅವರಿಗೆ ಸಹನ ಆಗ್ತಿದ್ದಿಲ್ಲ.

ರಾಘು : [ತಲೆಯೆತ್ತಿ] ಅವ್ವಾ, ನಾನೂ ಮಾತಾಡಬಾರದು ಅಂತ ಬಿಟ್ಟಿದ್ದೆ. ಅಲ್ಲಾ ಮಾತು ಮಾತಿಗೆ ಅಪ್ಪ ಹಿಂಗ ಮಾಡ ತಿದ್ರು ಅಂದರ ಏನು ? ಅವರು ಸತ್ತು ಎರಡು ತಿಂಗಳಾಗಿ ಹೋದೂ ಇನ್ನು ಸಾಕಲ್ಲ ?

ವಿಮಲಾ : [ಕನ್ನಡಕ ತೆಗೆದಿಡುತ್ತಾಳೆ] [ರಾಘೂ ಪರಾತ ಬದಿಯ ಕುರ್ಚಿಯ ಮೇಲಿಟ್ಟು ನಿಲ್ಲುತ್ತಾನೆ] ಅವರು ಇರೋತನಕಾ [ಗಂಟಲು ತುಂಬಿ ಬಂದಿದೆ. ಗಂಟಲು ಕೆರೆದರೂ ಸುಧಾರಿಸುವುದಿಲ್ಲ] ಪ್ರತಿಯೊಂದು ವಸ್ತು ಎಷ್ಟು ಸಿಸ್ತಲೇ ಇಡತಿದ್ದರು. ಒಂದು ಅರಿವಿನ, ಒಂದು ಪುಸ್ತಕಾನ ಪ್ರತಿಯೊಂದು ಅದರ ಜಾಗಕ್ಕ ಇರಬೇಕು. ಸ್ವಚ್ಛ ಇರಬೇಕು....

ರಾಘು : ಇದೆಲ್ಲ ಯಾಕ ?

ಜಯಾ : [ನಡುವೆಯೇ] ಯಾಕಂದರ ? ಬೇಕಾದ ವಸ್ತು ವ್ಯಾಳ್ಯಾಕ್ಕ ಸಿಗಬೇಕಂತ.

ರಾಘು : [ಜಯಾಳನ್ನು ಒಮ್ಮೆ ನೋಡಿ, ತಾಯಿಯತ್ತ ದೃಷ್ಟಿ ಹರಿಸುತ್ತಾನೆ] ಹಾಂಗೆಷ್ಟು ಬೇಕಾಗತದ ? ಮೇಲಾಗಿ ಇದೆಲ್ಲಾ ಯಾರ ದಶಿಂದ ? ವರ್ಷದಾಗ ಯಾವಾಗೋ ಒಮ್ಮೆ ಬೇಕಾಗೋ ವಸ್ತು ದಿನಾ ಸ್ವಚ್ಛ ಒರಸಿ ತಿಕ್ಕಿ ಇಡಬೇಕನ್ನೂದು ಎಲ್ಲೀ ನ್ಯಾಯಾ ?

ಜಯಾ : [ತಡೆಯಲಾರದೆ] ವರ್ಷದಾಗ ಒಮ್ಮೆ ಯಾಕೋ ?

ವಿಮಲಾ : [ಆಕೆಯನ್ನು ತಡೆದು] ಯಾ ನೀ ಮಾತಾಡಬ್ಯಾಡ. ಅಂವಾ ಒಣ ಇತ್ತಂಡವಾದ ಹಾಕ್ತಾನ. ಹಿರ್ಯಾರು ಅನ್ನೋ ಬುದ್ಧಿ ಅವರಿಗೆ ಮಾನಾ ಮರ್ಯಾದೀ ಕೊಡಬೇಕನ್ನೋ ಶಾಣ್ಯಾ ತನ ಅಂವಗೆಲ್ಲಿ ಅದ ?

ರಾಘು : [ಮೆತ್ತಗಾಗಿ] ಹಾಂಗಲ್ಲ ಅವ್ವಾ [ನಕ್ಕು] ನಾ ಅಂತೇನಿ, ನಮ್ಮ ದಶಿಂದ ಶಿಸ್ತೋ ಏನೋ ಶಿಸ್ತಿನ ದಶಿಂದ ನಾವೊ ?

ಜಯಾ : [ಹಟದಿಂದ ] ಶಿಸ್ತಿನ ದಶಿಂದ ನಾವು

ರಾಘು : ಏ ಹಲ್ಲುಬೀರಿ, ನೀ ನಡುವ ಮಾತಾಡಬ್ಯಾಡ.

ವಿಮಲಾ : ಇದೇ ಇದೇ ನಂದೂ ನಿಂದೂ ಜಗಳ ಬರ್ತದನೋಡು. [ಉಸಿರು ಹಾಕುವಳು] ಇವರು ಹೋದಮ್ಯಾಲ ಶಾಣ್ಯಾನಾಂಗ ಮನೀ ಕೆಲಸಾ ಮಾಡಲಿಕ್ಕೆ ಹತ್ತಿದಿ. ನನಗ ಅನಿಸ್ತು. ಹುಡುಗ್ಗ ಜವಾಬ್ದಾರಿ ತಿಳೀಲಿಕ್ಕೆ ಹತ್ತಿತು ಅಂತ.

ರಾಘು : ನೀ ಹೇಳಿದ ಕೆಲಸಾ ನಾ ಇಲ್ಲಂತೇನೇನು ? ಆದರ ನಡು ನಡುವ ಇಕೀ ಯಾಕ ಬಾಯಿ ಹಾಕಬೇಕು ? ನಾ ನಿನಗ ಕೇಳೋದು ಇಷ್ಟು. ಈ ಶಿಸ್ತು ಯಾರ ದಶಿಂದ ? ಹೊರಗಿ ನಿಂದ ಬಂದಕೂಡ್ಲೆ ಬಗ್ಗಿ ಚಪ್ಪಲು ಎತ್ತಿ ಇಡಬೇಕು,

ಶರ್ಟು ತಗದು ಮಳೀಗೆ ಹಾಕಬೇಕು. ಒಳಗ ಹೋಗಿ ಕೈಕಾಲು ತೊಳಕೊಂಡು ಬರಬೇಕು. ತೊಗೊಂಡ ಟಾವೆಲ ಜಾಗಕ್ಕಿಡಬೇಕು. ವಾಟಗಕ್ಕ ಬಾಯಿ ಹಚ್ಚದೆ ನೀರು ಕುಡೀಬೇಕು—

ವಿಮಲಾ : [ನಕ್ಕು] ಇದರಾಗ ಏನು ತಪ್ಪಿತು ಹೇಳು.

ರಾಘು : ಅವ್ವಾ ಇವೆಲ್ಲಾ ಮಾಡೋದರಿಂದ ನನಗ ಸಿಟ್ಟು ಇಲ್ಲ. ಆದರ ಇದೊಂದು ಸ್ವಭಾವ ಆಗಲಿಕ್ಕೆ ಹತ್ತೇದ. ದಿನಾ ದಿನಾ ಅದೇ, ಅದೇ, ಉಪ್ಪು ಕಾರ ಇಲ್ಲದ ಊಟದಾಂಗ ಮನಶಾ ಅಂದವ್ಯಾಲ ಬ್ಯಾಸರ ಅದ. ಉತ್ಸಾಹ ಅದ. ಕೂಸಿಗೆ ನೀ ನಡಬ್ಯಾಡ. ನೀ ಅಳಬ್ಯಾಡ ಅಂತ ಶಿಕ್ಷಾ ಮಾಡಿದಾಂಗ ಆದ ನಿಮ್ಮ ಶಿಸ್ತು [ಅಪ್ಪನ ದನಿ ಅನುಕರಿಸಿ] ರಾಘೂ ಒಂಬತ್ತು ಹೊಡೀತು ಮಲಕೋ ಇನ್ನ. ಏಳೋ ಐದೂವರಿ ಅಲಾರ್ಮು ಕೇಳಿಸಲಿಲ್ಲೇನು ? ಎದ್ದು ಹಲ್ಲು ತಿಕ್ಕೊಂಡು ಮಾರಿ ತೊಳಕೊಂಡು ಅಭ್ಯಾಸಕ್ಕ ಕೂಡ [ಜಯಾ ಮೋರೆ ಓರೆಮಾಡಿಕೊಂಡು ನಗುವಳು] ಅವ್ವಾ, ಮಲಕೊಂಡು ಓದೋದರಾಗ ಏನು ಮಜಾ ಅದ ಗೊತ್ತದ ಏನು ? ಆದರ ಅಪ್ಪಾ ಇರೋತನಕಾ. ಕುರ್ಚಿಮ್ಯಾಲ ಸೆಟೆದು ಕೂಡಬೇಕು. ಪುಸ್ತಕ ಹಿಂಗ ಹಿಡೀಬೇಕು ಪ್ರತಿಯೊಂದಕ್ಕೂ ನಿಯಮ. ಒಮ್ಮೆ ಕೈಕಾಲಿಗೆ ಹೆಚ್ಚು ಹೋದರೂ—

ಜಯಾ : [ಆತಂಕದಿಂದ ತಾಯಿಯತ್ತ ನೋಡುತ್ತ] ರಾಘೂ.

ರಾಘು : ಅವ್ವಾ ನಾ ಅಂತೇನಿ ಮನಶಾ ಅಂದರ ಯಂತ್ರ ಏನು ? ಆದರ ಅಪ್ಪಾ ಅವರಿಗೆ ಅದು ಎಂದೂ ತಿಳೀಲೇ ಇಲ್ಲ. ಒಂದು ಪ್ಯಾಂಟು, ಒಂದು ಪಾಯಜಾಮ ನನಗ ಹೊಲಿಸಿದರೇನು ? ಬರೇ ಖಾಕಿ ಹಾಫ ಪ್ಯಾಂಟ ನನ್ನ ಹರಕು

ಚಪ್ಪಲಿ ಮನ್ಸ್ಯಾಗ ತಾವು ದುರಸ್ತ ಮಾಡಬೇಕು. ಯಾಕ ಈ ಸಾದಾತನದ ಹಟಾ ?

ವಿಮಲಾ : [ಬೇಸರದಿಂದ ವಿಷಯಾಂತರಿಸುವುದಕ್ಕಾಗಿ] ಜಯಾ ನೀ ಅಲ್ಲಿ ಬಾಗಿಲದಾಗ ಏನು ಮಾಡತೀ ?

ಜಯಾ : [ಅಸ್ವಸ್ಥಳಾಗಿ, ಒಳಗೆ ಬರಲೋ ಬೇಡವೇ ಎನ್ನುವಂತೆ] ಅಣ್ಣಾ ಯಾವಾಗ ಬರ್ತ್ಯಾನಂತ ಹಾದೀ ನೋಡ್ತೇನಿ.

ರಾಘು : [ಅಣಕ] ಅಣ್ಣನೋ ಅಥವಾ ?

ಜಯಾ : [ಅಲಕ್ಷಿಸಿ] ಈಗ ಬರೋ ಹೊತ್ತಾತು ?

ರಾಘು : [ಮೊದಲಿನಂತೆಯೆ] ಯಾರು ?

ವಿಮಲಾ : [ದನಿ ಎತ್ತರಿಸಿ] ರಾಘೂ [ಜಯಾಗ] ಬಾಗಿಲತನಕಾ ಬಂದವರು ಒಳಗ ಬರದ ಇರ್ತಾರೇನು ? ನೀ ಒಳಗ ಬಾ, ಕೂಡ್ರು. ಅಥವಾ ನೀವಿಬ್ಬರೂ ಊಟಾ ಮುಗಿಸಿಬಿಡ್ತೀರೇನು ? ಕೇಶವ ಬಂದಾಗ ಬರವಲ್ಲನ್ಯಾಕ. ಅಡಿಗಿ ಆರತದ.

ಜಯಾ : ನಾ ನಿನ್ನ ಸಂಗತೀನ ಕೂಡ್ತೇನಿ. ಅಲ್ಲ ಅವ್ವಾ, ಅವರಿಗೆ ಕಡೀಕ ಶಿಕ್ಷಾ ಆದೀತೋ ಇಲ್ಲೋ ?

ವಿಮಲಾ : [ಉಸಿರು ಹಾಕಿ] ಆದೀತಲ್ಲಾ. [ತಡೆದು] ಯಾರನ್ನ ಗಲ್ಲಿಗೆ ಹಾಕಿ ಹೋದ ಜೀವ ಬರ್ತದೇನು ?

ರಾಘು : ಅವ್ವಾ ಬಾಬೂ, ಸದಾಶಿವ, ಗೋಪಾಳ ಇವರಿಗೆಲ್ಲಾ ಗಲ್ಲು ಆಗ್ತದ ?

ವಿಮಲಾ : [ಅಸಹನೆಯಿಂದ] ಸುಮ್ಮ ಕೂಡೋ, ಸಣಾಂವ ಇದ್ದೀ ನಿನಗೇನು ತಿಳಿತದ ?

ಜಯಾ : ಫಾಶೀ ಇಲ್ಲದಿದ್ದರೂ ಜೀವಾವಧಿ ಶಿಕ್ಷಾ ಆಗಲಿಕ್ಕೇ ಬೇಕು.

ರಾಘು : ಅಂದರ ಸಾಯೂತನಕಾ ?

ಜಯಾ : ಮತ್ತ ? ನಿನಗೇನನಸ್ತದ ? ಒಬ್ಬರ ಜೀವಾ ತೊಗೊಂಡರ ಕೋರ್ಟಿನ್ಯಾಗ ಕೇಳ್ಯಾರೇನು ? ಈಗ ಅಪ್ಪಾ ಅವರದು ಏನು ತಪ್ಪು ಹೇಳು. ಕಾಲೇಜು ಹುಡುಗೋರು ಯೂನಿವರ್ಸಿಟಿ ಪರೀಕ್ಷಾದ ಮ್ಯಾಲ ಬಹಿಷ್ಕಾರ ಹಾಕೋದರ ದಶಿಂದಂತ ಹರತಾಳ ಹೂಡಿದರು. ಕಾಲೇಜ ಮ್ಯಾಲ ಕಲ್ಲು ಒಗದರು. ಅವರಿಗೆ ತಿಳಿಸಿ ಹೇಳಬೇಕಂತ ಅಪ್ಪಾ ಹೋದರ [ಬಿಕ್ಕುವಳು]

ರಾಘು : [ಹಲ್ಲು ಕಡಿದು] ಅವರಿಗೆ ಚೂರಿ ಹಾಕಿದರು ನಾಲಾಯಕರು.

ವಿಮಲಾ : ರಾಘು, ಕಾಲೇಜು ಹುಡುಗೋರು ಚೂರಿ ಚಾಕು ತೊಗೊಂಡು ತಿರಿಗ್ಯಾಡ್ತಾರೇನು ?

ರಾಘು : ಚೂರಿ ಅಂವಾ ಸದಾಶಿವ ಅಂತಿದ್ದಂತ, ಇವೆಲ್ಲಾ ಹಳೇವು ಅದೂ. ಈ ಹುಡುಗೋರು ಪಿಸ್ತೂಲು, ಗ್ರೆನೇಡು ಇಡಬೇಕಂತ.

ವಿಮಲಾ : ಅಂವಾ ಯಾವ ಕಾಲೇಜಕ ಹೋಗ್ತಾನ ?

ಜಯಾ : ಐ ಅವಗೆಲ್ಲೀ ಕಾಲೇಜ ? ಅಂವಾ ಎಸ್.ಎಸ.ಎಲ.ಸಿ ಅರೇ ಮುಟ್ಟಿದ್ನೇನು ? ಅಂವಾ ಒಬ್ಬ ಹುಂಬ.

ರಾಘು : ಶ್ರೀಮಂತ ಹುಂಬ.

ವಿಮಲಾ : ಅಂದರ ಅಂವಂದೇನು ಸಂಬಂಧ ಪರೀಕ್ಷಾ ಮುಂದ ಹಾಕೂದರದು ?

ಜಯಾ : ಮೊನ್ನೇ ಕೋರ್ಟಿನ್ಯಾಗ ಅವನ ವಕೀಲರೂ ಅದನ್ನ ವಾದಿಸಿದರಂತ. ಅಂದು ಅಂವಾ ಕಾಲೇಜಿಗೆ ಹೋಗಿರೋ ಕಾರಣವೇ ಇಲ್ಲ ಅಂದರಂತ.

ರಾಘು : ಖರೆ ಅವನ್ನ ಅಲ್ಲಿ ನೋಡಿದವರ್‍ಯಾರಾದರೂ ಇರಬೇಕಲ್ಲ?

ಜಯಾ : ಆ ಗದ್ದಲ. ನುಗಸ್ಯಾಟದಾಗ ಅಂವಾ ಇದ್ದಂತ ಅಂದರೂ ಅವನೇ ಕೊಂದ ಅನ್ನಲಿಕ್ಕ ಸಾಕ್ಷಿ ಬೇಕಲ್ಲ ?

ವಿಮಲಾ : ಹಂಗ ಹ್ಯಾಂಗ ? ಇವರು ಗದ್ದಲದಾಗ ಮುಂದೆ ಹೋದರ ಹುಡುಗೋರು ಇವರ ಕಡೆ ನೋಡ್ತಿದ್ರೋ ಇಲ್ಲೋ ? ಖೂನ ಆದದ್ದು ಯಾರಾದರೂ ನೋಡಿರಲಿಕ್ಕೆ ಬೇಕು.

ರಾಘು : ಹಾಂಗ ಸಾಕ್ಷಿ ಹೇಳಲಿಕ್ಕೆ ಮುಂದ ಬರಬೇಕಲ್ಲ ?

[ಹೊರಗೆ ಸೈಕಲ್ ಗಂಟೆ ಕೇಳುತ್ತದೆ]

ಜಯಾ : ಅವ್ವಯ್ಯ ಸುಭಾಷ ಬಂದ ಹಾಂಗ ಕಾಣಿಸ್ತದ (ಅವಸರದಿಂದ ಎದ್ದು ನಿಲ್ಲುವಳು. ವಿಮಲಾ ಅಕ್ಕಿ ಪರಾತ ತೆಗೆದಿಡುವಳು. ಆಕೆ ಕನ್ನಡಕ ತೆಗೆಯುತ್ತಿದ್ದಂತೆ ಸುಭಾಷ ಪ್ರವೇಶಿಸುತ್ತಾನೆ. ನಿರುದ್ಯೋಗಿ ಪದವೀಧರ. ವಯಸ್ಸು 23. ಧೋತರ ಅಂಗಿ.]

ಸುಭಾಷ : [ಜಯಾಳತ್ತ ನೋಡಿ ಮುಗಳ್ನಕ್ಕು] ಅವ್ವಾ ಏನು ನಡದದರಿ ?

ವಿಮಲಾ : ಬಾ ಸುಭಾಷ ಕೂಡು [ಅವನ ಲಕ್ಷ್ಯ ಜಯಾಳತ್ತೇ ಇದೆ ಹಿಂದೆ ನೋಡದೆಯೇ ಸರಿದು ತಡವರಿಸಿ ಕೂಡ್ರುತ್ತಾನೆ. ರಾಘು ಮೆಲ್ಲನೆ ಚಿವುಟುತ್ತಾನೆ]

ಸುಭಾಸ : ಮತ್ತೇನು ರಾಘು. ಏನು ನಡದದ ?

ರಾಘು : [ಅರ್ಥವಿಲ್ಲದೆ ನಗುವನು] ಏನಿಲ್ಲ ಬಾಗಲದಾಗ ನಿಂತು [ಜಯಾಳತ್ತ ಬೇಕೆಂದೇ ನೋಡಿ] ಅಣ್ಣನ ಹಾದಿ ನೋಡ್ತಿದ್ರು ನೀ ಬಂದಾಂಗಾತು.

ಸುಭಾಷ : ಯಾಕ, ಕೇಶವ ಎಲ್ಲಿ ಹೋಗ್ಯಾನ ?

ವಿಮಲಾ : ಕೋರ್ಟಿಗೆ ಹೋಗ್ಯಾನ ಅಂವಾ. ಇನ್ನಾ ಬಂದಿಲ್ಲ ನೋಡಪಾ ಅಡಿಗಿ ಆರಿ ಅಂಗಾರಾತು.

ಸುಭಾಷ : ಈವತ್ತು ನಿರ್ಣಯ ಆದ ಅಲ್ಲ ?

ಜಯಾ : ನಿನಗೇನನಸ್ತದ ಸುಭಾಷ ಅವರಿಗೆ ಶಿಕ್ಷಾ ಆದೀತು ?

ಸುಭಾಷ : [ಅವಳತ್ತ ನೋಡಿ ನಗುವನು] ನಾಯೇನು ಹೇಳಲಿ ?

ರಾಘು : ಜಯತ ಅಂತಾಳ, ಅಪ್ಪಾ ಅವರನ್ನ ಖೂನಿ ಮಾಡಿದ್ದು

ನೋಡಿದವರು ಕೋರ್ಟಿನ್ಯಾಗ ಸಾಕ್ಷೀ ಹೇಳಲಿಕ್ಕಿ ಒಬ್ಬರೂ ಬರಲಿಲ್ಲಂತ.

ಸುಭಾಷ : [ತಿರಸ್ಕಾರದ ನಗೆ ನಕ್ಕು] ಅದಕ್ಕೂ ಎದಿ ಬೇಕಾಗ್ತದ. ಹಾಂಗ ಸಾಕ್ಷಿ ಹೇಳಾವರು ಜೀವದ ಮ್ಯಾಲ ಉದಾರ ಆಗಿನೇ ಬರ ಬೇಕು.

ವಿಮಲಾ : ಜೀಂವದ ಮ್ಯಾಲ ಉದಾರ ?

ಸುಭಾಷ : [ಕೆರಳಿ] ನೋಡ್ರಿ ಅವ್ವಾ. ಈಗ ಸದಾಶಿವಗ ಗಲ್ಲು. ಆತು ಅಂತ ಅನ್ನರಿ. ಅವನ ಸಾಥೀದಾರರು ಹೀಂಗ ಸಾಕ್ಷೀ ಹೇಳಿದಾವರನ್ನ ಬಿಟ್ಟಾರೇನು ?

ರಾಘು : ಮತ್ತ ಖೂನ ಮತ್ತು ಪಾಶೀ ಮತ್ತು ಖೂನು ಹಿಂಗ ಚಕ್ರನೇ ಸೂರು ಆಗ್ತದ.

ವಿಮಲಾ : ಯಾರನ್ನ ಗಲ್ಲಿಗೇರಿಸಿದರ ಹೋದ ಜೀವ ಬರ್ತದೇನು ಯಾಕಪಾ ಸುಭಾಷ ?

ರಾಘು : ಅಂತ ಅವರನ್ನ ಹಾಂಗ ಬಿಡೂದೇನು ?

ಸುಭಾಷ : ಅವ್ವಾ ನೋಡ್ರೀ ಗಲ್ಲಿಗೇರಿಸಿದರ ಏನು ಅಥವಾ ಖೂನು ಮಾಡಿದವರ ಏನ ಸಮಾಜದಾಗ ಏನೊಂದು ವಿಚಾರ ಇರ್ತದಲ್ಲಾ ಅದು ಸಾಯೂದಿಲ್ಲ. ನಾವು ನೀವು ನಮ್ಮ ವಾದದಾಗ ಅಡ್ಡ ಬಂದಾವರನ್ನ ಕೊಯ್ಯುಕೋತ ಹೋಗ್ತೀವಿ ಅಷ್ಟೇ.

ರಾಘು : ಹೆಣ್ಣ್ಯಾಗೋಳು, ಧೈರ್ಯ ಇದ್ದರ, ವಾದದಾಗ ಗೆಲ್ಲ ಬೇಕು. ಇಲ್ಲಾಂದರ ಆಲಕ್ಷ್ಯ ಮಾಡಬೇಕು. ನಿಮ್ಮದು ಬರೋಬರಿ ಅನಿಸಿದರ ಜನರು ನಿಮ್ಮದು ಕೇಳೇ ಕೇಳ್ತಾರೆ.

ವಿಮಲಾ : [ಅಕ್ಕಿ ಪರಾತ ಎತ್ತಿಕೊಂಡು ಕನ್ನಡಕ ಏರಿಸಿ] ನಾ ಅಂತೇನಿ. ಈ ಕಾಲೇಜು ಹುಡುಗೋರಿಗೆ ಹರತಾಳ ಮಾಡಿ ಪರೀಕ್ಷಾ ಬಂದ ಮಾಡೋವಷ್ಟು ಬುದ್ಧಿ ಯಾಕ ಕೆಡಬೇಕು ?

ಸುಭಾಷ : ಯಾಕ ?

[ಯೋಚಿಸುತ್ತಿದ್ದಂತೆ ನಿಧಾನವಾಗಿ ಹೇಳುವನು]

ಯಾಕ ಕೆಡಬಾರದು ? ಪರೀಕ್ಷಾ ಅಂದರ ಒಂದು ಸೋಂಗು ನಾಟಕ. ಆ ವಿಷಯದಾಗಿನ ಜ್ಞಾನದ ಶೇಕಡಾ ಅರವತ್ತರಕ್ಕಿಂತ ಹೆಚ್ಚು ಗೊತ್ತಿಲ್ಲದಾಂವಾ ಗ್ರ್ಯಾಜ್ಯುಯೇಟ, ಮಾಸ್ಟರ ಅನಿಸಿಕೋತಾನ. ಪಾಸಾದರೆ ಸಾಕಲ್ಲ ? ವರ್ಷೆಲ್ಲ ಹಾಳು ಮಾಡಿ ಕಡೀಕೆ ಗೈಡೋ ಟೂಶ್ಯನ್ನೋ ಅಂತ ಊರುಗೋಲು ಹಿಡಿದು ಅಂತೂ ಒಮ್ಮೆ ದಾಟತಾರ. ಪರೀಕ್ಷಾದ ಹೆಸರಲೇ ಏನು ನಡಿಯೋ ಹಾಂಗಿಲ್ಲ ? ಹಳ್ಳಿ ಊರಾಗಿನ ಕಾಲೇಜಿನವರು ದುಡ್ಡು ತುಂಬಿ ಕೇಂದ್ರ ತೊಗೋತಾರ ನೂರಕ್ಕ ನೂರು 'ರಿಜಲ್ಟ, ಇಂಜಿನಿಯರಿಂಗ ಮೆಡಿಕಲಗೆ ಹೆಚ್ಚೆಚ್ಚು ಪ್ರವೇಶ ಕೊಡಸೋದರ ದಶಿಂದ ಯೂನಿವರ್ಸಿಟಿ, ಯೂನಿವರ್ಸಿಟಿಯೊಳಗೆ ತುರುಸು ನಡೀತದ. ಫಸ್ಟಕ್ಲಾಸ ಡಿಸ್ಟಿಂಕ್ಷನ ಸುರಿಮಳಿ.

ವಿಮಲಾ : ನೀವೊಂದು ಅಭ್ಯಾಸ ಮಾಡಿ ಪಾಸಾದರ ಆಯಿತು. ಜಗತ್ತಿನ ಉಸಾಬರ ನಿಮಗ್ಯಾಕ ?

ಸುಭಾಷ : ಪಾಸಾದವಿ—ಮುಂದೇನು ? ಕೆಲಸಾ ಯಾರು ಕೊಡಾವರು ಹಾಂಗ ಕೆಲಸ ಸಿಕ್ಕರು ನಮ್ಮ ಶಿಕ್ಷಣದ್ದೂ ಆ ಕೆಲಸದ್ದೂ ಎಳಷ್ಟು ಸಂಬಂಧ ಇರೂದಿಲ್ಲ. ಹೆಚ್ಚಾಗಿ ನಾಲ್ಕು ನಾಲ್ಕು ವರ್ಷ ತಡವಾದರೂ ಕೆಲಸ ಸಿಗೂಹಾಂಗಿಲ್ಲ. ಆಗ ಈ ಡಿಗ್ರಿ ಕಿಮ್ಮತ್ತೇನು.

ರಾಘು : ಹೈಸ್ಕೂಲ ಕಾಲೇಜನ್ಯಾಗ ಕೆಲಸ ಸಿಕ್ಕರ ನಿಮ್ಮ ಶಿಕ್ಷಣದ ಉಪಯೋಗ ಆಗ್ತದಲ್ಲ.

ಸುಭಾಷ : ರಾಘು, ಈ ಸಾಲಿ—ಕಾಲೇಜು ಅಂದರ ಏನಂತೀ ? ಮಾರ್ಕೆಟ ಕಮಿಟಿ, ಬ್ಯಾಂಕುಗೋಳ ಸಂಗತಿ ಇರಲಿ ಅಂತ,

ತಮ್ಮ ಮಹತ್ವ ಬೆಳಸೂದಶಿಂದ ರಾಜಕಾರಣೆ ಸಂಧ್ಧಿ ಸಂಸ್ಥಾ ಸ್ಥಾಪಸತಾರ—ವಶೀಲಿಲಿ ಗ್ರಾಂಟು ದೊರಕಸ್ತಾರ. ಪಗಾರ ಕೊಟ್ಟರ ಪ್ರಿನ್ಸಿಪಾಲರು ಪ್ರೊಫೆಸರು ಸಿಗ್ತಾರ. ಇದರಾಗ ಅವರಿಗೆ ದೊಡ್ಡಿಸ್ತನ ರೊಕ್ಕ ಎಲ್ಲಾ ಸಿಗ್ತದ. ಬರೇ ಕಾಲೇಜು ಅಷ್ಟೇ ಅಲ್ಲ. ಯೂನಿವರ್ಸಿಟಿ ತನಕ ಅವರ ಕೈ ಮುಟ್ಟತಾವ. ಅಲ್ಲಿ ಗುಂಪುಗೂಳಿತನ, ರಾಜ ಕಾರಣ ಸುರು ಮಾಡ್ತಾರ. ಇದನ್ನೆಲ್ಲ ನೋಡಿವರೂ ನೋಡುದಾಂಗ ಪ್ರಿನ್ಸಿಪಾಲರು ಕೊಟ್ಟ ಪಗಾರ ಮ್ಯಾಲ ದುಡೀಬೇಕು.

ರಾಘು : ಇಲ್ಲಾಂದ್ರ ಅಂಥಾವರು ಕೆಲಸಾ ಬಿಟ್ಟು ಹೋಗಬೇಕು.

ಸುಭಾಷ : ನಾನೂ ಅದ ಅಂತೇನಿ ನಮಗ ಗುರುಗೋಳು ಅನಿಸಿ ಕೊಳ್ಳಾವರು ಇಷ್ಟು ಅನ್ಯಾಯ. ಅದೂ ಇಂಥಾ ಅಯೋಗ್ಯ ಜನರ ಕೈಯಿಂದ ಯಾಕ ಸಹನ ಮಾಡಬೇಕು ಇವರಿಗೆ ಬೆನ್ನಿನ ಎಲವು ಆದನೋ ಇಲ್ಲೋ ?

ವಿಮಲಾ : [ಮೆತ್ತಗೆ] ಒಂದು ಹೊಟ್ಟೀದಶಿಂದ ಬೆನ್ನಿನ ಎಲವು ಸೈತ ಬಾಗತದ. ಆದರ ಇವರ ಮಾತ್ರ ಕಡೀತನಕಾ ಯಾರಿಗೆ ಬಾಗಲಿಲ್ಲ ಅವರಿಗೇನು ಸಂಸ್ಥಾದಾಗ ಅಪಮಾನ ಕಡಮಿ ಆತ ? ಇವರು ಹಾಂಜೀ ಹಾಂಜೀ ಮಾಡಿದ್ದರ ಎಂದೋ ಪ್ರಿನ್ಸಿಪಾಲ ಆಗ್ತಿದ್ರು, ಆದರ ಅದು ಇವರ ರಕ್ತದಾಗೇ ಇದ್ದಿದ್ದಿಲ್ಲ.

ಸುಭಾಷ : ಅಂತೇ ಸರ ಹುಂಬ ಹುಡುಗೂರಿಗೆ ಹೇಳಲಿಕ್ಕಂತ ಮುಂದ. ಹೋದರು. ಯೂನಿವರ್ಸಿಟಿ ಪರೀಕ್ಷಾ ಯಾವಾಗ ಆದರ ಏನು ? ಅಥವಾ ಆದರೆಷ್ಟು ಬಿಟ್ಟರೆಷ್ಟು, ತಮ್ಮ ಪಗಾರ ಕಡಿಮಿ ಆಗೂದಿಲ್ಲ ಹೌದಲ್ಲೊ ಅಂತ ಅವರು ವಿಚಾರ ಮಾಡ್ಲಿಲ್ಲ.

ಜಯಾ : ಅದೇ ಅವರದು ತಪ್ಪಿತು.

ಸುಭಾಷ : [ವಿಷಾದದಿಂದ ನಕ್ಕು] ಅಂದರ ನಿನಗೂ ಹಾಂಗೆ ಅನಸ್ತದ ?

ಜಯಾ : [ನಾಲಗೆ ಕಚ್ಚಿ] ಹಾಂಗಲ್ಲ, ನಾ ಅನ್ನೋದು ಕಾರಣ ಇಲ್ಲದೆ ಸಾವಿಗೆ ಔತಣ ಕೊಟ್ಟ ಹಾಂಗ ಆತಿಲ್ಲೋ ?

ವಿಮಲಾ : ಅವರಿಗೆ ಗೈರಶಿಸ್ತು ಅನ್ನೋದು ಸಹನ ಆಗಲಿಕ್ಕಿಲ್ಲ.

ರಾಘು : ಇವರು ಹೇಳಿಧಾಂಗ ಕೇಳಲಿಕ್ಕ ಅವರೇನು ಮನ್ಯಾಗಿನ ಹೇಣ್ತಿ ಮಕ್ಕಳೇನು [ವಿಮಲಾ ಮಾತಿಲ್ಲದೆ ಅವನತ್ತ ದಿಟ್ಟಿಸು ತ್ತಾಳೆ. ಅದನ್ನು ಆಲಕ್ಷಿಸಿ] ಈ ಶಿಸ್ತು ನಮಗೆ ಹೇಳಬ್ಯಾಡ್ರಿ. ಇಂದ ರಾಜಕಾರಣದ ಹೆಸರಲ್ಲೇ ರೊಜ್ಜು ಆಡೋ ನಮ್ಮ ಮುಖಂಡರಿಗೆ ಹೇಳಿರಿ. ಅಂತ ಅವರ ಅಂತಾರ.

[ಹೊರಗೆ ಒಮ್ಮಿಂದೊಮ್ಮೆ ಗದ್ದಲ ಹೆಚ್ಚಾಗುತ್ತದೆ ವಿದ್ಯಾರ್ಥಿ ಪರಿಷದ ಜಿಂದಾಬಾದ ಎಂಬ ಕೂಗಿ ನೊಡನೆ ಮುರ್ದಾಬಾದ ಮುರ್ದಬಾದ ಘೋಷಣೆ ಗಳೂ ಕೂಡಿ ಹೋಗುತ್ತವೆ]

ಇದೇನು ಗದ್ದಲ ಹೊರಗ.

[ಬಾಗಿಲ ಬಳಿ ನಿಲ್ಲುತ್ತಾನೆ]

ಸುಭಾಷ : ಇಂದು ಯುನಿವರ್ಸಿಟಿ ಪರೀಕ್ಷಾ ಸುರೂ ಆಗ್ಯಾವ. ಅದನ್ನು ಮುಂದು ಹಾಕಿಸಬೇಕಂತ ಚಳವಳಿ ಮಾಡಿದರು. ಯೂನಿವರ್ಸಿಟಿ ಮಣೀಲಿಲ್ಲ. ಇನ್ನ ಬಹಿಸ್ಕಾರದ ಉದ್ಯೋಗ ಮೆರವಣಿಗೆ ಈಗ ಕಾಲೇಜಿಗೆ ಮುಟ್ಟಿರಬೇಕು. ಪೋಲೀಸರ ಸಂಗತಿ ಇದಿರಾಬದಿರಾ ಆಗಿರಬೇಕು.

ರಾಘು : ಇಲ್ಲಿಂದ ಏನೂ ಕಾಣಸೂದಿಲ್ಲ. ಕಾಲೇಜ ತನಕಾ ಹೋಗಿ ನೋಡಿ ಬರಲೇನು ಅವ್ವಾ ?

ಜಯಾ : ಶಾಣ್ಯಾ ಇದ್ದೀ. ಪೋಲೀಸರು ಗುಂಡು ಹಾರಿಸಿದರ ಅಷ್ಟ ರಾಗ ? [ರಾಘು ಅಕ್ಕನತ್ತ, ತಾಯಿಯತ್ತ ನೋಡಿ ತೆಪ್ಪಗೆ ಒಳಗ ಬಂದು ಕೂಡ್ರುತ್ತಾನೆ]

ವಿಮಲಾ : ಹಿಂದ ಗೊಂದಲಾ ಹಾಕಿ ಪರೀಕ್ಷಾ ಬಂದ ಮಾಡಿದರ ಇವರಿಗೇನು ಸೆಗಣಿ ಸಿಕ್ಕ ಹಾಂಗಾತು ?

ಸುಭಾಷ : ಹಾಂಗಲ್ಲರೀ ಅವ್ವಾ, ಇದು ಒಂದೇ ಚಳವಳಿ. [ನಿಧಾನವಾಗಿ] ವರ್ಷ ತುಂಬ ಕಲಿಸಿ ಮೂರು ತಾಸಿನ್ಯಾಗ ನೋಡೋ ಈ ಪರೀಕ್ಷಾ ಬ್ಯಾಡ. ಉದ್ಯೋಗ ಕೊಡದೇ ಇರೋ ನಿಮ್ಮ ಶಿಕ್ಷಣ ಬ್ಯಾಡ. ರಾಜಕಾರಣಿ ಕೈಗೊಂಬಿ ಆಗಿರೋ ಶಿಕ್ಷಣ ಸಂಸ್ಥಾ ಬ್ಯಾಡಂತ ಇದ್ಯೊಂದು ಬಂಡಾಯ.

ಜಯಾ : ಅಪ್ಪಾ ಮಾತ್ರ ಈ ಬಂಡಾಯದಾಗ ಪುಕ್ಕಟ ಜೀವಾ ಕೊಟ್ಟರು.

ರಾಘು : ಪುಕ್ಕಟಿ ಯಾಕ ?

[ಅಷ್ಟರಲ್ಲಿ ಕೇಶವ ಪ್ರವೇಶಿಸುತ್ತಾನೆ. ಶರ್ಟಿನ ಗುಂಡಿ ಬಿಚ್ಚಿ ವಸ್ತ್ರದಿಂದ ಗಾಳಿಹಾಕಿ ಕೊಳ್ಳುತ್ತಾನ]

ಕೇಶವ : ಈ ಮೆರವಣಿಗೀ ಗದ್ದಲದಾಗ ಹಾದೀ ಮಾಡಿಕೊಂಡು ಬರ ಬೇಕಂದರ ಸಾಕು ಸಾಕಾಗಿ ಹೋತು.

ಜಯಾ : ಅಣ್ಣಾ ಕೋರ್ಟಿಗೆ ಹೋದದ್ದು ಏನಾತು ?

ಕೇಶವ : ಏನು ಗದ್ದಲಪಾ ಅದೂ ? ಹುಡುಗೋರು ಕಾಲೇಜು ಗೇಟಿನ್ಯಾಗ ಸೇರ್ತಾವ ಅನ್ನವರು ಅಡ್ಡ ಬಡಗಿ ಹಿಡಿದು ನಿಂತ ಪೋಲಿಸರು ಅವರನ್ನ ಹಿಂದ ನುಗಸಾವರು. ಈ ಗುಂಡುಮರಗಿ ಆಟದಾಗ ಉಸಿರುಕಟ್ಟಿ ಹತ್ತು ಹದಿನೈದು ಸಹಜ ಸಾಯಬೇಕು. ಇಂಥಾ ಗದ್ದಲ.

ರಾಘು : ಕೋರ್ಟಿನ್ಯಾಗ ನಿರ್ಣಯ ಹೇಳಿದರೇನು ?

ಸುಭಾಷ : ಅಂದ ಹಾಂಗ ನೀ ಅದನ್ನ ಹೇಳವಾಲ್ಲ ?

[ಎಲ್ಲರೂ ಅವನತ್ತ ನೋಡುವಂತೆ ಕೇಶವ ಮೋರೆ ಕೆಳಗೆ ಹಾಕುತ್ತಾನೆ]

ಕೇಶವ : [ತಾಯಿಯತ್ತ ನೋಡಿ, ನೋಡಲಾಗದೆ ಬಾಯಿಯಲ್ಲಿ ವಸ್ತ್ರ ತುಂಬಿ ಕೊಂಡು] ಏನು ಆಗಲಿಲ್ಲ.

ಸುಭಾಷ-ವಿಮಲಾ : ಅಂದರ ?

ಕೇಶವ : [ಬೇಸತ್ತವನಂತೆ ಒಂದೇ ಉಸಿರಿನಲ್ಲಿ] ಯಾರಿಗೂ ಶಿಕ್ಷಾ ಆಗಲಿಲ್ಲ. ಎಲ್ಲರನ್ನೂ ನಿರ್ದೋಷಿ ಅಂತ ಬಿಟ್ಟುಕೊಟ್ಟರು.

ವಿಮಲಾ : ನಿರ್ದೋಷಿ ?

ಜಯಾ : [ತಾಯಿಯೊಡನೆಯೇ] ಹಾಂಗ ಹ್ಯಾಂಗ ಅದೂ ?

ಸುಭಾಷ : [ಎಲ್ಲ ತಿಳಿದವನಂತೆ] ಸ್ವಲ್ಪ ಅವಂಗ ವಿಶ್ರಾಂತಿ ತೊಗೊಳಲಿಕ್ಕೆ ಕೊಡರಿ. ಎಲ್ಲಾರೂ ಹಿಂಗ ಅಂವನ್ನ ಕುಕ್ಕಿದರ ಏನು ಮಾಡಬೇಕು ಅಂವಾ ಪಾಪ ?

ಕೇಶವ : [ಇಷ್ಟು ಸಾಕು ಎಂಬಂತೆ] ರಾಘು ಸ್ವಲ್ಪ [ಕುಡಿಯಲು ನೀರು ಎಂಬಂತೆ ಕೈ ಸನ್ನೆ ಮಾಡುವನು, ರಾಘು ನೀರು ತಂದು ಕೊಟ್ಟು ಆ ಗ್ಲಾಸು ಬರಿದು ಮಾಡುತ್ತಿದ್ದಂತೆಯೇ ಎಲ್ಲರು ಅವನನ್ನೇ ನೋಡುತ್ತಿದ್ದಾರೆ] ಅವರು ಮೂರು ಜನ ನಿರ್ದೋಷಿ ಅಂತ ನಿರ್ಣಯಾ ಕೊಟ್ಟರು. ಖೂನು ಆದದ್ದು ಖರೆ ಆದಿರೆ ಇವರ ಮ್ಯಾಲ ಆರೋಪ ಸಿದ್ಧ ಆಗಲಿಲ್ಲಂತೆ.

ಜಯಾ : ಆರೋಪ ಸಿದ್ಧ ಆಗಲಿಲ್ಲ ?

ವಿಮಲಾ : ಮುಂದ ?

ಸುಭಾಷ : ಅಪೀಲು ಮಾಡೋದು, ಬಿಡೋದು ನಮ್ಮ ಕೈಯಾಗಿನ ಮಾತಲ್ಲ.

ವಿಮಲಾ : [ನಿಧಾನವಾಗಿ ಕೂಡ್ರುವಳು] ನಾ ಮುಂಚೇ ಹೇಳಿದ್ದೆ. ಯಾರಿಗೆ ಶಿಕ್ಷಾ ಆದರ ಏನು ಉಪಯೋಗ ಅಂತ.

ರಾಘು : [ಹರಿಹಾಯ್ದು] ಹಂಗ ಹ್ಯಾಂಗ ಅಂತೀ ಅವ್ವಾ ? ಅಪರಾಧ ಮಾಡಿದವರಿಗೆ ಶಿಕ್ಷಾ ಆಗಲಿಕ್ಕೆ ಬ್ಯಾಡ ?

ವಿಮಲಾ : [ಕೌತುಕದಿಂದ] ನನ್ನ ಸೋನ್ಯಾ ಶಿಕ್ಷಾ ಅಂದರ ಏನು ?

[ಮಾತನಾಡುತ್ತಿದ್ದಂತೆ ಆಕೆಯ ಗಂಟಲು ತುಂಬಿ ಬರುತ್ತದೆ. ಕೆಲಹೊತ್ತು ಮೌನ]

ಜಯಾ : [ವಿಷಯ ಬದಲಾಯಿಸುವವನಕ್ಕಾಗಿ] ಹಾಂಗಾದರ ಅಪ್ಪಾ ಅವರ್ನ ಯಾರು ಕೊಂದರು ?

ರಾಘು : ಯಾರಂವರ ? ಯಾರರೇ ಗುಂಪಿನಾಗ ಇದ್ದ. ವಿದ್ಯಾರ್ಥಿ ಗೋಳ [ನಿಧಾನವಾಗಿ ಯೋಚಿಸುತ್ತ ಮಾತನಾಡುತ್ತಾನೆ] ಸರ ಅವರಿಗೆಲ್ಲ ಅಪ್ಪಾ ಅಣ್ಣಾ ಅಂದು ಕಲಿಸಿದರು. ಪುಸ್ತಕಕ್ಕ ಫೀಗೆ ರೊಕ್ಕಾ ಕೊಟ್ಟರು. ಅನವು ಆಪಿತ್ತಿಗೆ ದುಡ್ಡ್ನ ಕೊಟ್ಟರು.

ವಿಮಲಾ : ವಾರಾ ಹಚ್ಚಿ ಕಲತರೋ ಅವರು. ಸ್ವಭಾವ.

ಸುಭಾಷ : [ಲಕ್ಷವಿಲ್ಲದವನಂತೆ] ಸರ ಹೇಳುತ್ತಿದ್ದರು. ಮನಶ್ಯಾಗ ಎಲ್ಲಾ ಸಂಕಟ ಬರಬೇಕು. ಬಡತನ ಅನ್ನೋದು ಬರಬಾರದು. ಇದ್ದಾವರ ಮಾಡೀ ನೋಡಬೇಕು ಬಿಡದೆ ಬಾಗಲದಾಗ ಬಾಲಾ ಆಡಸೋ ನಾಯೀಹಾಂಗ ಬಾಳೇ ಅದೂ ಅಂತ ಅವರು ಅನ್ನಬೇಕು. ಶಕ್ಯ ಇದ್ದಷ್ಟು ಕೊಟ್ಟರು ವಿದ್ಯಾ ಅಂತೂ ಸರೀನ. ಖಾನವಳಿಯವಂಗ ದುಡ್ಡಿಲ್ಲದೆ ಊಟಕ್ಕೆ ಹಾಕಲಿಕ್ಕೆ ಹೇಳಬೇಕು ಹಿಂದಾಗಡೆ ಕೊಡ್ತಾನಪಾ ಅನ್ನಬೇಕು. ಅವರಿಗೆ ಟರ್ಮ ಫೀ ಪರೀಕ್ಷಾ ಫೀ ಕೊಟ್ಟರು. ಗುರು ಋಣ ತೀರಿಸಿದರಪಾ ರಾಘು ಗುರು ಋಣ ತೀರಿಸಿದರು. [ದುಃಖದ ಆವೇಶದಲ್ಲಿ ಮಾತು ಕಟ್ಟುತ್ತದೆ] ನಮಗೆ, ಅದ್ಯಾಕ ನನಗ ಸ್ವತಃಕ್ಕೆ ಅವರು ವಿದ್ಯಾರ್ಥಿ ಅಂತ ಹೇಳಿ ಕೊಳ್ಳೊ ಯೋಗ್ಯತಾ ಇಲ್ಲ ಅಂತ ಅನಸ್ತದ. ನಾಲಾಯಕರು ನಾವು ಹುಚ್ಚಸೂಳೇ ಮಕ್ಕಳು. ನಮ್ಮ ಕೈಯಲ್ಲಿ ಮಾಣಿಕ್ಯ ಕೊಡ್ರು ಬಿಣಚಿಕಲ್ಲು ಅಂತ ಬೀಸಿ ಬಗೆಯೋ ದಡ್ಡಮಿಂಡೇ ಗಂಡರು. [ಮತ್ತೆ ದುಃಖದ ಆವೇಗದಿಂದ

ನಾವು ನಾವು ಅವರನ್ನು ಕೊಂದೆವು [ಮೂಗು ತುಂಬಿಕೊಂಡಿದೆ] ಅದ್ಯಾಕ ನಾವು ಕೊಂದೆ ಅವರನ್ನ ಅವರು ಜೀವಂತ ಇದ್ದಾಗ ಎಂದು ಒಂದು ಸುಖದ ಮಾತು ಸರ ಹ್ಯಾಂಗ ದ್ದೀರಿ ಅಂತ ಒಮ್ಮೆ ಚೌಕಾಶಿ ? ಅವರು ಈ ಹಾದೀಲೆ ಬಂದರ ನಾ ಆ ಹಾದೀಲೆ ಹೋಗುತ್ತಿದ್ದೆ. [ಜಯಾಳತ್ತ ನೋಡಿದಾಗ ಆಕಿ ಕಣ್ಣು ತಪ್ಪಿಸುತ್ತಾಳೆ] ಅದು ಯಾಕ ನನಗ ಗೊತ್ತು ಅವರಿಗೂ ಗೊತ್ತಿರಬೇಕು. [ಇಲ್ಲ ಇಲ್ಲ ಎಂಬಂತೆ ತಲೆ ಕೊಡುಹುತ್ತಾನೆ ಫೋಟೋದ ಎದುರು ಹೋಗಿ ನಿಂತು ಎರಡೂ ಕೈ ಮುಂದೆ ಮಾಡಿ] ಸರ ನಿಮ್ಮನ್ನ ನಾ ಕೊಂದೆ. ಈ ಕೈಲೆ. ಹೊಟಾಗ್ಯ ಚೂರೀ ಹಾಕಿದವರನ್ನ ಖರೇ ಏನು ? [ಅಳುವನು]

ಜಯಾ : [ಆತಂಕದಿಂದ] ಸುಭಾಷ.

ಸುಭಾಷ : ಇಲ್ಲ ಸಾರ, ನಿಮ್ಮನ್ನ ನಾನೇ ಕೊಂದೆ.

ಜಯಾ : [ಅಳು ಧನಿಯಲ್ಲಿ] ಅವ್ವಾ ಹ್ಯಾಂಗಂತಾನ ನೋಡು [ವಿಮಲಾ ಅವರಿಬ್ಬರತ್ತ ನೋಡಲಾರದಾಗ ಆಕೆ ತಾನೇ ಅವನ ಬಳಿ ಹೋಗು ತಾಳೆ] ಸುಬಾಷ [ಭುಜ ತಟ್ಟಿ] ಸುಭಾಷ.

ಸುಭಾಷ : [ಅಳು ನುಂಗಿ] ನೀ ಹೇಳು ಬೇಕಾದರ, ನಾ ಹಾಂಗ ಹತ್ತು ಸರತೆ ಅಂದೆನೋ ಇಲ್ಲೊ ? ಸರ ಇರೂತನಕ [ಜಯಾ ಅವನ ಬಾಯಿ ಮೇಲೆ ಕೈ ಇಡುತ್ತಾಳೆ ಅದನ್ನು ಕಿತ್ತೆಸೆದು] ಎಲ್ಲ ರಿಗೂ ಗೊತ್ತ ಇದ್ದ ಮಾತೇ ಅದ. ಅವರನ್ನ ವಿರಾರಿ ವಣಂದ ಹೆಜ್ಜಿ ಇಡೋ ಧೈರ್ಯ ನನಗೂ ಇದ್ದಿದ್ದಿಲ್ಲ ನಿನಗೂ ಇದ್ದಿದ್ದಿಲ್ಲ.

ಜಯಾ : ಸುಭಾಷ.

[ಮೋರೆ ಮುಚ್ಚಿಕೊಂಡು ಅಳುವಳು. ವಿಮಲಾ ಅವಳ ಬೆನ್ನ ಮೇಲೆ ಕೈಯಾಡಿಸು ತ್ತಾಳೆ]

ವಿಮಲಾ : ಸಾಕು ಸುಮ್ಮಾಗು, ಅವರ ಹಾಂಗ ಇದ್ದರು. ತಮ್ಮ ತಲ್ಯಾಗ ಏನು ಒರ್‍ದ್ದದೆ ಅಡಖರೇ ಬಾಕಿಯುವರ ಕಿಮ್ಮತ್ತೇ ಇಲ್ಲ ಅವರಿಗೆ. ಹುಡುಗೂರಿಗೆ ಏನು ಚೆಂದಾಗಿ ಅರಿವ್ಯ, ಅಂಚಡ್ಯ ಏನು ಬೂಟ ಏನು ಕೇಳಿದರೂ ಒಂದೇ ಮಾತು, ನಾ ಹ್ಯಾಂಗ ಕಲತೆ ನೀವು ನೋಡಬೇಕಾಗಿತ್ತು [ತಡೆದು] ನೀವು ಒಂಟಿ ಅಂಗೀ ಗಿಡ್ಡ ಚಣ್ಣದ ಮ್ಯಾಲ ಕಲತರಿ. ಬರಿಗಾಲಲೇ ಓಡಾಡಿದರಿ ಅದನ್ನ ತೊಗೊಂಡು ಹುಡುಗೂರೇನು ಮಾಡಬೇಕು ? ನಿಮಗೊಂದು ಪ್ರತಿಕೂಲ ಕಾಲ ಇತ್ತು. ನೀವು ಭೋಗಿಸಿದರಿ. ಅದನ್ನ ಕಾರಣ ಇಲ್ಲದ ನಾವು ಭೋಗಸಬೇಕು ಅನ್ನೋದು ಎಲ್ಲಿ ನ್ಯಾಯ ? ಪ್ರಿನ್ಸಿಪಾಲರ ಮನೀ ಅಂದರ ಏನು ಒಂದು ಚೆಂದಾಗಿ ಫರ್ನಿಚರ ಪಡದೇನು ಲೈಬ್ರರಿನ, ಏನು ಕೇಳಿದರೂ ಒಂದೇ ಮಾತು ಅದೆಲ್ಲಾ ಯಾಕ ಬೇಕು ? ಅದಿಲ್ಲದ ನಡಿಯೂದಿಲ್ಲೇನು ? ನಾಲಿಗಿ ಸುಟ್ಟಾಂವಗ ಕಹಿನೂ ಅಷ್ಟ ಸಿಹಿನೂ ಅಷ್ಟ ಅಂತ ಹೇಳಬೇಕು ಅವರು [ತಡೆದು] ನಮ್ಮ ನಾಲಿಗಿ ಸುಟ್ಟಿಲ್ಲಲ್ಲಾ ಖರೆ ? ಅದನ್ಯಾಕ ಸುಡ್ತೀರಿ. ಅಂತ ನಾ ಅತ್ತು ಕರದು ಎಷ್ಟ ಸರತೆ ಹೇಳಿದೆ. [ಕೇಶವನನ್ನು ನೋಡಿ] ನೀ ಹುಟ್ಟೋಕಿಂತ ಮುಂಚೆ ನಾ ಭಾಳ ವಾದಿಸ್ಯಾಡತಿದ್ದೆ ಅವರು ಸಂಗತೀ. ಅವರು ನನ್ನ ಹೋಡಿಲಿಕ್ಕೂ ಹಿಂದ ಮುಂದ ನೋಡ್ಲಿಲ್ಲ [ಅಳುವಳು] ಈಗ ನನ್ನ ಹೌಸು ಅನ್ನೋದು ಸುಟ್ಟು ಕರಕು ಒಡವಿ, ಆಗೇದ. ನೀವು ವಸ್ತ್ರ ಕೊಟ್ಟರೂ ಅಷ್ಟ ಬಿಟ್ಟರೂ ಅಷ್ಟ. ಅವರು ಹೇಳುತ್ತಿದ್ದರು ಹಾಂಗ ಮನಶ್ಯಾಗ ಮೈ ಮುಚ್ಚಿಕೊಳ್ಳಲಿಕ್ಕೆ ಮೂರು ವಾರ ಮಂಜರಪಾಟ ಸಾಕಾಗ್ತದ ಸರಕಾರೀ ಆಸ್ಪತ್ರ್ಯಾಗ ರೋಗಿಗೆ ಹಾಕಿರ್‍ತಾರಲ್ಲ ಉದ್ದ ಅಂಗಿ, ಹೊಟ್ಟಿಗಿ ಉಪ್ಪಾ ಬಕ್ಕರಿ. ಬಾಕೀ ಎಲ್ಲಾ ಯಾಕಬೇಕು?

[ತಡೆದು] ತಾವು ಒಂದು ಹಾಂಗ ಇದ್ರೂ ಸತ್ತರು ನಮ್ಮನ್ನು ಹಾಂಗ [ಅಳುವಳು]

ಕೇಶವ : ಅವರೊಬ್ಬರ ಹಾಂಗ ಇದ್ದರ ನನಗ ಅಷ್ಟು ವಿಶೇಷ ಅನಿಸ್ತಿದ್ದಿಲ್ಲ. ಆದರ ಎಲ್ಲಾರೂ ಹಾಂಗ ಅನಬೇಕು? ನನಗ ನೆನಪು ಅದ ಮಿಡಲ ಸ್ಕೂಲ ಸ್ಕಾಲರಶಿಪ ಪರೀಕ್ಷಾದಾಗ ನನ್ನ ನಂಬರು ಬಂತು. ಸಾಲ್ಯಾಗ ಹೆಡ ಮಾಸ್ತರೇನು ಅನ್ನಬೇಕು ? ಅಂವಾ ಏನ್ರೀ ಪ್ರೊಫೆಸರ ಪುರೋಹಿತರ ಮಗಾ. ಅಂವಗ ಸ್ಕಾಲರಶಿಪ ಸಿಗದ ಯಾರಿಗೆ ಸಿಗಬೇಕು ? ಹೈಸ್ಕೂಲ ಸ್ಕಾಲರಶಿಪಗೂ ಹಾಂಗ ಎಸ.ಎಸ.ಎಲ.ಸಿ.ಗೂ ಹಾಂಗ. ಬಾಕಿ ಹುಡುಗೋರಿಗೆ ಮನ್ಯಾಗ ಸಾಲ್ಯಾಗ ಎಷ್ಟು ಕೌತುಕ ನಮಗ. Taken for granted ಪ್ರೊಫೆಸರ ಪುರೋಹಿತರ ಮಕ್ಕಳು ಅಂದರ ಹುಷಾರ ಇರಲಿಕ್ಕೇಬೇಕು. ಸ್ಕಾಲರಶಿಪ ದೊರಕಿಸಲಿಕ್ಕೆಬೇಕು. ನಾ ಅಂತೇನಿ ನಮ್ಮ ಶಾಣ್ಯತನಕ್ಕ ಅಭ್ಯಾಸಕ್ಕ ಪರಿಶ್ರಮಕ್ಕ ಏನು ಕಿಮ್ಮತ್ತಿಲ್ಲಾ. ಹೊಟ್ಟಿ ನಿದ್ದೀ ಖಬರು ಇಲ್ಲದೇ ನಾ ಅಭ್ಯಾಸ ಮಾಡಿದೆ. ಜಯಾ ರಾಘೂನೂ ಮಾಡಿದರು. ಆದರ ಮಂದಿ ಅನ್ನೂದೇನು ? ಅದರಾಗೇನು ಆಶ್ಚರ್ಯರೀ ? ಅವರದೊಂದು ಹೋಗಲಿ ಅಪ್ಪಾ ಎಂದಾರ ಒಂದು ದಿವಸ ಕೌತುಕ ಮಾಡಿದರೇನು ಮಕ್ಕಳದು ?

ವಿಮಲಾ : ಮಂದಿ ಪೇಥೆ ಬೇಡಿದರ ಅದನ್ನ ಸಹಿತ ಕೊಡಲಿಲ್ಲ ನನ್ನ ಮಕ್ಕಳಿದ್ದಾರ ಅವರು ರ್‍ಯಾಂಕ ಗಳಿಸಿದರ ಪೇಡೆಯಾಕ ಹಂಚಬೇಕು ಅಂತ ಹೇಳತಿದ್ದು ಅಭಿಮಾನದ್ಲೆ.

ಕೇಶವ : ಊರಾಗ ಎಲ್ಲಿ ಹೋದ್ರೂ ಪ್ರೊಫೆಸರರ ಮಗಾ, ಪ್ರಿನ್ಸಿಪಾಲರ ಮಗಾ ಅಂತನ ಮಂದಿ ನನ್ನ ಕಡೆ ಬಟ್ಟು ಮಾಡಿದ್ರು ಕೇಶವ, ಒಂದು ವ್ಯಕ್ತಿ ಅಂತ ಯಾರು ನನ್ನ ಕಡೆ ನೋಡಲಿಲ್ಲ.

ಸುಭಾಷ : ದೊಡ್ಡಗಿಡದ ನೆರಳಿನ್ಯಾಗ ಬೆಳೆದ ಸಣ್ಣ ಗಿಡಕ್ಕೂ ಹಿಂಗ ಅನಸ್ತಿರಬೇಕು.

ಕೇಶವ : ಇಷ್ಟೆ ಅಲ್ಲ ಅಪರಿಚಿತರ ಮುಂದ ಪುರೋಹಿತ ಅಂತ ಅಡ್ಡ ಹೆಸರು ಹೇಳೋ ಪ್ರಸಂಗ ಬಂದರೂ ಪ್ರೊಫೆಸರು ನಿನ ಗೇನಾಗಬೇಕು ಅನ್ನೋ ಪ್ರಶ್ನೆ ಬರಬೇಕು.

ವಿಮಲಾ : ಖರೇ ಅಂದರ ನಿಮಗ ಅದರ ಅಭಿಮಾನ ಅನಿಸಬೇಕು.

ಕೇಶವ : ಸಂಚಿತ ಒಣ ಅಭಿಮಾನ, ಅವ್ವಾ ನಾ ಹೇಳೋದು ನಿನಗ ಇನ್ನೂ ತಿಳೀವಲ್ತು. ಇಪ್ಪತ್ತೆರಡು ವರ್ಷದಾಂವ ಕೇಶವ ಒಬ್ಬ ಸ್ವತಂತ್ರ ಮನುಷ್ಯ. ಅವಂಗೂ ಒಂದು ವ್ಯಕ್ತಿತ್ವ ಅದ ಅಂತ ಮಂದಿ ಯಾಕ ತಿಳೀಬಾರದು? ನಾವು ಮಕ್ಕಳು ಅಂದರ ಅಪ್ಪಾನ ವ್ಯಕ್ತಿತ್ವದ ಒಂದು ಭಾಗ ಏನು ? ಇನ್ನು ನಿನಗ ಹ್ಯಾಂಗ ತಿಳಿಸಿ ಹೇಳಲಿ ?

ವಿಮಲಾ : [ಅಸಹಾಯಕಳಂತೆ] ನಾನೂ ಕಲಿತಿದ್ದರ ಬಹುಶಃ ನನಗೂ ಹೆಚ್ಚು ತಿಳೀಬಹುದಾಗಿತ್ತು. ಆದರ ನೀ ಹೇಳೋ ದುಃಖ ನನಗ ಎಂದೂ ಅನಸಲಿಲ್ಲ. ನಾಕು ಮಂದೀ ಬಾಯಾಗ ಅವರ ಹೆಸರು ಕೇಳಿ ನನಗ ಧನ್ಯ ಅನಸಬೇಕು.

ಕೇಶವ : ಶುದ್ಧ ಗುಲಾಮಗಿರಿ ಮನೋವೃತ್ತಿ.

ವಿಮಲಾ : ಇರಬೇಕು. ಆದರ ನನಗ ಹಾಗೊಂದು ಅನಸಲಿಲ್ಲ. ಅವರ ದೊಡ್ಡಿಸ್ತನದಾಗ ನನಗ ಸಮಾಧಾನ ಅದ ಇಲ್ಲಾದ್ರ ನಾ ಯಾರು ?

ರಾಘು : ಆದರ ನಾವು ಹಾಂಗ ಅಲ್ಲ, ನಮಗ ಸ್ವತಂತ್ರ ಅಸ್ತಿತ್ವ ಆದ ಒಂದು ವ್ಯಕ್ತಿತ್ವ ಆದ.

ಕೇಶವ : ಅಪ್ಪಾ ಸಂಸಾರ ಅಂದರ ಒಂದು ಕಾಂಟ್ರ್ಯಾಕ್ಟ ಇದಾಂಗ. ಪ್ರತಿಯೊಬ್ಬರೂ ಇನ್ನೊಬ್ಬರ ವ್ಯಕ್ತಿತ್ವಕ್ಕೆ ಅಹಂಕಾರಕ್ಕೆ ಕಿಮ್ಮತ್ತು ಕೊಟ್ಟರ ಪರಸ್ಪರ ಆದರ ಪ್ರೇಮ ಅನ್ನೋದು ಉಳೀತದ. ಬೆಳೀತದ. ಅದನ್ನೆಲ್ಲಾ ಬಿಟ್ಟು ಬಾಳೀತ್ವಾಟ ದಾಗ ಘಡಗಳ್ಳಿಗತೆ ನಾನೇ ದೊಡ್ಡಾಂವ ಅಂದರ ತ್ವಾಟಕ್ಕ ತ್ವಾಟಾನೇ ಹಾಳಾಗತದ. ಒಬ್ಬ ಗಳಿಸಾಂವನ ಸುತ್ತ ನನ್ನಂತಹಾ ಅಸಹಾಯಕರು ತಿರಗತಾರ ನಾಕು ದಿನ. ಶಕ್ತಿ ಬಂದಾಗ ಒಬ್ಬೊಬ್ಬರೇ ಸಿಡಿದು ಹೋಗ್ತಾರ, ಈ ಚಕ್ರ ದಾಗಿಂದ. ಆದರ ಅಲ್ಲೀತನಕಾ ನಮ್ಮ ಮನಸ್ಸು ಒಂದು ಬೆಂಕಿ ಕುಂಡ ವೈಶ್ವಾನರ. ಖರೇ ಆ ಕಾವು ಅವನ್ನೇ ಸುಡ್ತದ. ಒಳಗಿಂದ ಹೊರಗಿಂದ ಕೂಡೇ ಒಮ್ಮೊಮ್ಮೆ ಅನಸ್ತದ. [ತಡೆಯುವನು]

ಜಯಾ : ಏನನಸ್ತದ ?

ಕೇಶವ : ಇಂಥಾ ರಿಂಗ ಮಾಸ್ತರರನ್ನ ಗುಂಡು ಹಾಕಿ ಕೊಲ್ಲಬೇಕು. [ಅಳತೊಡಗುವನು]

ಸುಭಾಷ ರಾಘು: [ಆತಂಕದಿಂದ] ಕೇಶವ ಅಣ್ಣ.

ಕೇಶವ : [ಅಳುದನಿ] ಖರೇ ಹೇಳ್ತೀನಿ ಈವತ್ತ. ಅಪ್ಪಾ ಸಾಯಬೇಕು ಅಂತ ನಾ ಎಷ್ಟೋ ಸರತೆ ಅಂದುಕೊಂಡಿದ್ದೆ. ನಂದೊಬ್ಬ ನದೇ ಅಪಮಾನ ಅಲ್ಲ ಅವ್ವಾಂದು ಉಳದಾವರದು ಅಪ ಮಾನ ನೋಡಿ ಇವರ ಕುತಿಗೀ ಹಿಚಕಲ್ಯಾ ಅಂತ ಎಷ್ಟೋ ಸರತೆ ಅವರ ಮಾರಿ ಕುತಿಗೀ ಕಡೆ ನಿಟ್ಟಿಸಿ ನೋಡಿದ್ದೆ. ಒಂದೆರಡು ಸರತೆ ಅಲ್ಲ, ಹತ್ತಿಪ್ಪತ್ತು ಸರತೆ ನೂರು ಸರತೆ: [ತಡೆದು] ಚೂರಿ ನಾ ಹಾಕಲಿಲ್ಲಾದ್ರು ಏನಾತು? [ನಿಧಾನವಾಗಿ] ಅಪ್ಪಾನ್ನ ಕೊಂದರು ಅಂತ ಸುದ್ದಿ ತಿಳಿದಾಗ ನನಗ ದುಃಖ ಆಗಲೇ ಇಲ್ಲ. [ಮತ್ತೆ ಅಳು ದನಿ] ಅವಾ ಆಗ ನನಗ ಎಳ್ಳಷ್ಟೂ

ದುಃಖ ಆಗಲಿಲ್ಲ. [ತಡೆದು] ಈಗ ಆಗ್ತದ. ಅದೇನು ಅಪ್ಪಾ ಮನ್ಯಾಗ ಇಲ್ಲದೇ ಇದ್ದ ರೂಢಿ ಇಲ್ಲಂತೋ ಅಥವಾ ನಮ್ಮದಶಿಂದ ಅವರು ಏನೂ ಇಡಲಿಲ್ಲಂತೋ ಅಥವಾ ಅವರು ಖರೇನ ದೊಡ್ಡಾವರು ಇದ್ದರಂತೋ ನನಗಂತೂ ಯಾವದೂ ತಿಳೀವಾಲ್ತು. [ಮೋರೆ ಮುಚ್ಚಿಕೊಳ್ಳುವನು]

ರಾಘು : [ನೇರ ಬಾಗಿಲಿಗೆ ಹೋಗಿ ಹೊರಗೆ ನೋಡತೊಡಗುವನು. ಹೊರಗೆ ಜೈ ಜೈ ಎಂದು ಸದ್ದು ಅಸ್ಪಷ್ಟವಾಗಿ ಕೇಳಿ ಬರುತ್ತ ದೊಡ್ಡದಾಗುವುದು] ಅಲ್ಲಿಂದ ಏನೂ ಕಾಣಿಸೂದಿಲ್ಲ.

ಸುಭಾಷ : ಲಾಠಿ ಚಾರ್ಜ್, ಅಶ್ರುವಾಯು ಏನಾದರೂ ನಡೀತಿರಬೇಕು.

ವಿಮಲಾ : ಬಾಗಲಾ ಮುಚ್ಚಪಾ ರಾಘು ಒಳಗ ಬಾ. ಏನು ಕೇಳ್ತಿ ? [ರಾಘು ಅಸಡ್ಡೆ ಮಾಡಿದಾಗ] ರಾಘು [ಅಪರಾಧಿಯಂತೆ ಕಳ್ಳನೋಟದಿಂದ ಅತ್ತಿತ್ತ ನೋಡಿ ಬಾಗಿಲು ಮುಚ್ಚಿ ಒಳಗೆ ಬರುವನು]

ಜಯಾ : [ಮೌನ ಮುರಿಯಲೆತ್ನಿಸಿ] ಅದರ ಅಪ್ಪಾ ಅವರನ್ನ ಖರೇನ ಕೊಂದಾವರು ಯಾರು ? [ಆವೇಗದೀದ] ಯಾರು ಕೊಂದರು ಅಪ್ಪಾ ಅವರನ

[ನಾನು ಎಂದು ಪ್ರೇಕ್ಷಾಗಾರದೀದ ಕೇಳಿ ಬರುತ್ತದೆ. ಪಾತ್ರಗಳೆಲ್ಲ ಅತ್ತ ನೋಡತೊಡಗಿದಾಗ ಒಂದು ಸಣಕಲು ವ್ಯಕ್ತಿ ವಯಸ್ಸು 25. ದಾರಿ ಮಾಡಿಕೊಂಡು ನೇರವಾಗಿ ರಂಗಭೂಮಿ ಏರುತ್ತದೆ]

ವ್ಯಕ್ತಿ : ನಾನು [ಎದೆ ಮುಟ್ಟಿ] ನಾನು ಅವರನ್ನ ಕೊಂದೆ.

ವಿಮಲಾ : ನೀವು ಯಾರು ನಿಮ್ಮ ಹೆಸರೇನು ?

ವ್ಯಕ್ತಿ : ನಾನು ನಾನ ? ಆಂ ಆಂ ನಾ ನಾಟಕಕಾರ. ಈ ನಾಟಕಾ ಬರದಾಂವ.

ಕೇಶವ : ನಾಟಕಕಾರ ?

ನಾಟಕಕಾರ : ಹಾಂ ಹಾಂ ನಾಟಕಕಾರ.

ಸುಭಾಷ : [ಸಂಶಯದಿಂದ] ನಾಟಕಕಾರ ? ನೀವ್ಯಾಕ ಕೊಲ್ಲಬೇಕು ಪ್ರೊಫೆಸರು ಪುರೋಹಿತರನ್ನ ? ನೀವೇನು ಕಾಲೇಜು ವಿದ್ಯಾರ್ಥಿಯೇನು ?

ನಾಟಕಕಾರ : ಊಂ ಹೂಂ ನನ್ನ ವಯಸ್ಸಾದರೂ ನೋಡಿರಿ. ನನ್ನ ಅರಿವಿ ನೋಡ್ರೆಲ್ಲ. ನಾ ಕಾಲೇಜು ವಿದ್ಯಾರ್ಥಿಯಂತೆ ಕಾಣಸ್ತೇನಾ ? [ನಗುವನು ಮಿಕ್ಕವರು ನಗುವುದಿಲ್ಲ]

ಜಯಾ : [ಅವಸರದಿಂದ] ಹಾಂಗಾರ ಯಾಕ ಕೊಂದಿರಿ ? ಅಪ್ಪಾ ಏನು ಮಾಡಿದ್ದರು ನಿಮಗ ?

ನಾಟಕಕಾರ : ಹೇಳ್ತೇನಿ ನಿಧಾನ ಕೇಳಿಕೊಳ್ರಿ. ನಾ ಹಾಂಗ ನಾಡಗೌಡರ ಮನಿತನದಾಂವ. ಆಗರ್ಭ ಶ್ರೀಮಂತ ಘರಾಣಿ, ನಾ ಹುಟ್ಟಿದ ನಾಲ್ಕೈದು ವರ್ಷಕ್ಕ ನನ್ನ ತಾಯಿ ತೀರಿಕೊಂಡ ಳಂತ ಆಕೀ ಮಾರಿ ನನಗೆ ನೆನಪಾಗೂದಿಲ್ಲ. [ನಗುವನು]

ರಾಘು : [ಬಿರುಸಾಗಿ] ಅದಕ್ಕ ಇದಕ್ಕ ಏನು ಸಂಬಂಧ ?

ವಿಮಲಾ : ಅವರೇನು ಹೇಳ್ತಾರ ಕೇಳಕೋ ಸ್ವಲ್ಪ.

ನಾಟಕಕಾರ : ನಮ್ಮ ಅಪ್ಪ, ಪ್ರೊಫೆಸರ ಪುರೋಹಿತರಾಂಗ ಆಗದೀ ಥೇಟ [ಫೋಟೋದ ಕಡೆಗೆ ಬೆರಳುಮಾಡಿ] ಕಾಣಸಲಿಕ್ಕೊ ಹಾಂಗೇ, ಅದೇ ಶಿಸ್ತು ಸಂಯಮ ತಮ್ಮ ಹೆಬ್ಬೆಟ್ಟಿನ ಕೆಳಗೆ ಎಲ್ಲಾರು ಇರಬೇಕು ಅನ್ನೋ ಭಾವನಾ.

ಕೇಶವ : ಅವರೂ ಪ್ರೊಫೆಸರ ಇದ್ದರೇನು ?

ನಾಟಕಕಾರ : ಇಲ್ಲ ಮನೀಲೇ ಒಕ್ಕಲುತನ ಇಟ್ಟಿದ್ದರು, ತ್ವಾಟದಾಗ ಇರತಿದ್ರು. ಮೂವತ್ತು ಮೂವತ್ತೆರಡು ಎಕರೆ ತ್ವಾಟ,

ಮಕ್ಕಾಲಭೂಮಿ. ಉತ್ತಲಿಕ್ಕ ಬಿತ್ತಲಿಕ್ಕ ಎಂಟೆತ್ತು ಎರಡು, ಆಳು. ತ್ವಾಟದಾಗನೇ ಒಂದು ಮನೀ.

ರಾಘು : ಹಂಗಾರ ಶ್ರೀಮಂತರಿದ್ದಿರಿ.

ನಾಟಕಕಾರ : ನಂದೂ ಎಸ.ಎಸ.ಎಲ.ಸಿ ಆಯ್ತು ಹಳ್ಳಿಯೊಳಗ ಮುಂದ ಕಾಲೇಜಕಂತ ಪಟ್ಟಣಕ್ಕ ಬಂದೆ.

ಸುಭಾಷ : (ಆಸ್ಥೆಯಿಂದ) ಆರ್ಟ್ಸ್ರೋ ಸಾಯಿನ್ಸೋ ?

ನಾಟಕಕಾರ : ನನಗ ಮುಂಚಿನದೂ ಓದೋ ಹುಚ್ಚು ಕಥಿ, ಕಾದಂಬರಿ ಕವಿತಾ ಹಾಂಗ ನನ್ನ ಸಂಸ್ಕೃತನೂ ಚಲೋ ಡಿಸ್ಟಿಂಕ್ಷನ ಸಿಕ್ಕಿತ್ತು. ಎಸ.ಎಸ.ಎಲ.ಸಿ.ಗೆ ಆರ್ಟ್ಸ ತೊಗೋಬೇಕು ಅಂತ ನನ್ನ ಮನಸ್ಸು.

ರಾಘು : ಮುಂದ ?

ನಾಟಕಕಾರ : ನಮ್ಮಪ್ಪ ಅದನ್ನ ಕೇಳಿಕೊಳ್ಳಲೇ ಇಲ್ಲ ? ನೀ ಇಂಜನಿಯರ ಆಗಬೇಕಪಾ ಮಗನ, ಅಂದರು. ನನಗ ಇಲ್ಲನ್ನಲಿಕ್ಕೆ ಆಗ ಲಿಲ್ಲ.

ಸುಭಾಷ : (ಕುತೂಹಲದಿಂದ) ಇಂಜಿನಿಯರ ಯಾಕ.

ನಾಟಕಕಾರ. : (ಒಣನಗೆ ನಗುವನು) ಯಾಕಂದರ ? ಅವರು ಸಾಲಿ ಕಾಲೇಜು ಕಲಿಯೋ ಹೊತ್ತಿನ್ಯಾಗ ಇಂಜಿನಿಯರಿಂಗ ಮೊಡಿಕಲ ಅಂದರ ಏನೋ ಅದ್ಭುತ ಅನಸ್ತಿತ್ತಂತ ಅವರಿಗೆ ಮನ ಸಿದ್ದರೂ ಇಂಜನಿಯರಿಂಗ ಆಗೋದು ಶಕ್ಯ ಆಗಲಿಲ್ಲ. ಎಳೇ ವಯಸ್ಸಿನ್ಯಾಗ ಮನಿತನದ ಜವಾಬ್ದಾರಿ ಕೊಳ್ಳಾಗಬಿತ್ತು. ಟೆನಸ್ಸಿಕಾಯದೆ ರೈತರ ಕೈಯಾಗ ಹೊಲಾ (ಮತ್ತ ನಗುವನು)

ಜಯಾ : ಅಂದರ ನಿಮ್ಮ ಇಂಜಿನಿಯರಿಂಗ ಆತೇನು ?

ನಾಟಕಕಾರ : ಅಂತೂ ಬಿ.ಇ., ಮುಗಿಸಿದೆ ಹೋದ ವರ್ಷ,

ವಿಮಲಾ : ಹಂಗಾರ ಇವರದೂ ನಿಮ್ಮದೂ ಸಂಬಂಧ ಎಲ್ಲಿ ಬಂತು ?

ನಾಟಕಕಾರ : ಅದನ್ನೇ ಹೇಳಲಿಕ್ಕೆ ಬಂದೇನಿ. ಕೂತುಕೊಳ್ರಿ ಎಲ್ಲಾರೂ (ಎಲ್ಲರೂ ಕುಳಿತಾಗ ತಾನೊಬ್ಬ ನಿಲ್ಲುವನು) ನಾ ಹೈಸ್ಕೂಲಿಗೆ ಇದ್ದಾಗಂತೂ ತ್ವಾಟದ ಮನ್ಯಾಗೇ ಇದ್ದೆ. ಕಾಲೇಜಿಗೆ ಹೋದರೂ ಸೂಟಿಗೆ ಮನೀಗೆ ಹೋಗುತ್ತಿದ್ದೆ.

ವಿಮಲಾ : (ಸಹಜವಾಗಿ) ಮನ್ಯಾಗ ಅಡಿಗೀ ಯಾರು ಮಾಡತಿದ್ರು ?

ನಾಟಕಕಾರ : (ಮೋರೆ ಕಿವುಚಿ) ನೀವು ಅದನ್ನ ಕೇಳಬಾರದು ? ನಾ ಅದನ್ನ ಹೇಳಬಾರದು (ತಡೆದು) ತ್ವಾಟದಾಗ ಕೆಲಸಾ ಮಾಡಲಿಕ್ಕ ಬರಾವರೆಲ್ಲ ಬಡವರು. ಹರಿಜನರು. ಹತ್ತು ವರ್ಷ ದಾಗೊಮ್ಮೆ ಮಳೀಯಾಗೋ ಪ್ರದೇಶ ಅದೂ. ನಮ್ಮಪ್ಪ ಅವರ ಕಡಿಂದ ಹಿಂಗ ಕೆಲಸಾ ಮಾಡಿಸಿಕೋತಿದ್ರು. ಹಿಂಗ ಕೆಲಸ ಮಾಡಿಸಿಕೋತಿದ್ರು. ಅದನ್ನು ಕಣ್ಣಾರೆ ನೋಡಬೇಕು.

ಕೇಶವ : ಭಾಳ ಒದರ್ಯಾಡತಿರಬೇಕು ಬೈತಿರಬೇಕು.

ನಾಟಕಕಾರ : ಬೈಯೋದು ? ಬೆತ್ತದ್ಲೆ ಹೊಡೀತಿದ್ರು ಒಮ್ಮೊಮ್ಮೆ ಆಗ ನನಗ ಅನಸಬೇಕು ಅವು ಜೀವ ಅಲ್ಲೇನು ? ಅವರಿಗೆ ಎಂದೋ ಸಾಲ ಕೊಟ್ಟು ಆ ಸಾಲ ತೀರಸೋದರಿಂದ ಅವರಿಗೆ ಕೊಡೋ ಹಿಂಸಾ ನೋಡಿದಾಗ ನನಗ ಸಂಕಟ ಆಗ ಬೇಕು. ಒಮ್ಮೊಮ್ಮೆ ಅನಸಬೇಕು. (ತಡೆಯುವನು)

ರಾ–ಜ : ಏನು ಅನಸಬೇಕು ?

ನಾಟಕಕಾರ : ಒಮ್ಮೊಮ್ಮೆ ಅನಸಬೇಕು ಇದೇ ಬೆತ್ತದ್ಲೆ ಅಪ್ಪನ್ನ ಬಿಗೀ ಬೇಕು. ರಕ್ತ ಬಂಬಾಳ ಆಗೂ ಹಾಂಗ ಹೊಡೀಬೇಕು. ಜೀವ ಹೋದರೂ ಅಡ್ಡಿಯಿಲ್ಲ ಅನಸಬೇಕು. ಯಾಕಂದರ

ತಾವು ಆಳಗೋಳ್ನ ಹೊಡಿಯೋವಾಗ ಅವರಿಗೆ ದಯಾ ಮಾಯ ಏನೂ ಇಟ್ಟಿರತಿದ್ದಿಲ್ಲ.

ಸುಭಾಷ : ಅಲ್ಲರೀ ಹಿಂದುಸ್ತಾನ ಸ್ವತಂತ್ರ ಆತು ಅಂತೀರಿ. ಈ ಅನ್ಯಾಯ ಸಹನ ಮಾಡಿಕೊಳ್ಳೊ ಮಂದಿ ಇದ್ದಾರೇನು ನಮ್ಮಲ್ಲಿ ಇನ್ನೂ ?

ನಾಟಕಕಾರ : ಹೋಗಿ ನೋಡಿರಿ ಒಮ್ಮೆ. ಸತ್ಯಾಗ್ರಹ ಅಂತ ಆಳುಗೋಳು ಒಮ್ಮೆ ಕೆಲಸಾ ಬಿಟ್ಟು ಕೂತರು. ಅಪ್ಪಾ ಹೇಳಿದರು ಅಂತ ಊರವರು ಬಹಿಷ್ಕಾರ ಹಾಕಿದ್ರು—ಅವರ ಮ್ಯಾಲ, ಬಾವೀ ನೀರ ಬಂದ ಆತು. ಊರಾಗಿನ ಅಂಗಡ್ಯಾವರು ಸಾಮಾನು ಕೊಡಲಿಕ್ಕಿಲ್ಲ. ಕೆಲಸ ಇಲ್ಲದಾತು.

ರಾಘು : ಮುಂದ ?

ನಾಟಕಕಾರ : ಬಾವೀ ಮುಟ್ಟೆ ನಿಂತು ಹೋಗಿತ್ತು. ಅಂತ ಹೊಲಗೇರಿ ಯೊಳಗಿನ ಹೆಂಗಸರಿಬ್ಬರು ನಮ್ಮ ಬಾಂವ್ಯಾಗ ನೀರು ತುಂಬ ಲಿಕ್ಕಂತ ಇಳಿದರು. ಅದೊಂದು ನಿಮಿತ್ತ ಆತು. ಪಂಚರು ಅವರನ್ನ ಕರಿಸಿ ಊರ ಮಂದಿ ಮುಂದ ಬತ್ತಲೇ ಮಾಡಿ, ಕತ್ತೀಮ್ಯಾಲ ಕೂಡಿಸಿ ಮೆರವಣಿಗೀ ತಗದರು. ನಾ ಊರಾಗ ಇದ್ದೆ. ನನಗ ನೋಡಲಿಕ್ಕೆ ಆಗಲಿಲ್ಲ. ಮುಂದ ನಾಲ್ಕು ದಿವಸಕ್ಕ ಅಪ್ಪಾ ಅವರ ಖೂನ ಆತು. ಕೊಂದು ಬಣಿ ವ್ಯಾಗ ಹಾಕಿ ಸುಟ್ಟುಬಿಟ್ಟರ. (ಉಸಿರು ಹಾಕಿ ತಡೆಯುವವು) ಆರೋಪ ಸಿದ್ಧ ಆಗಲೇ ಇಲ್ಲ.

ಸುಭಾಷ : ಕೇಸು ಬಿಟ್ಟುಹೋತು ಹಂಗಾರ ?

ನಾಟಕಕಾರ : ಹಾಂಗ ನಮ್ಮಪ್ಪ ಭಾಳ ದೊಡ್ಡ ಮನಸ್ಸಿನಾವರು. ಬಡ್ಯೋ ಮುಂದ ಬಡೀತಿದ್ರು. ಕೊಡೋಮುಂದ ಕೊಡತಿದ್ರು.

ಅವರು ಖೂನು ಯಾರ ಮಾಡಬೇಕು ? ನನಗ ಅನಿಸ್ತು (ತಡೆಯುವನು)

ಕೇಶವ : ಏನು ಅನಿಸ್ತು ?

ನಾಟಕಕಾರ : ನನ್ನ ಮನ್ಸಿನ್ಯಾಗ ಹತ್ತುಸರತೆ ವಿಚಾರ ಹೊಳೆದು ಹೋಗಿತ್ತು. ಪ್ರತಿಯೊಂದು ಸಂಗತಿ ತನ್ನ ಮನಸಿನ್ಯಾಂಗ ಆಗ ಬೇಕು ಅನ್ನೋ ಅಪ್ಪಾ ಅವರು ಲಗೂ ಸಾಯಬೇಕು ಅವ ರನ್ನ ಯಾರರೇ ಕೊಲ್ಲಬೇಕು (ಕಂಠ ತುಂಬಿ ಬಂದು) ಯಾರು ಕೊಂದರೇನು ಅದ ? ಅದೋದು ನಿಮಿತ್ತ ನನ್ನ ಮನಸ್ಸಿ ನ್ಯಾಗ ವಿಚಾರ ಮಾಡಿದಾಗ ನಾನೇ ಅದನ್ನ ಕೊಂದಾ ಗಾತು. (ಅಳತೊಡಗುವನು ಮಿಕ್ಕವರು, ಅಪ್ರತಿಭರಾಗುವರು ಹೊರಗಿನ ಬಾಗಿಲು ಬಾರಿಸಿದ ಸದ್ದು)

ರಾಘು : ಯಾರು ? ಯಾರದು ? (ಮುಂದಾಗಿ ಬಾಗಿಲು ತೆರೆಯುವನು)

ಸಬ್‌ಇನ್ಸಪೆಕ್ಟರ : (ಪ್ರವೇಶಿಸಿ) ನಾನು ಸಬ್‌ಇನಸ್ಪೆಕ್ಟರ. ಈಗ ಯಾರಾ ದರೂ ಹುಡುಗೋರು ಇಲ್ಲಿ ಬಂದರೇನು ? ಕಾಲೇಜು ಹತ್ತಿರ ಲಾಠಿಚಾರ್ಜು ಆಯಿತು ಪೊಲೀಸರ ಮ್ಯಾಲ ಹುಡು ಗೋರು ಕಲ್ಲು ಒಗೆದರು. ನಾವು ಬೆನ್ನುಹತ್ತಿ ಬಂದರೆ ಅವ ರಿವರ ಮನ್ಯಾಗ ಸೇರಿಕೊಂಡು ಬಿಟ್ಟಾರ.

ನಾಟಕಕಾರ : (ಮುಂದಾಗಿ) ನಾನು ನಾನು ನಿಮ್ಮ ಮ್ಯಾಲ ಕಲ್ಲುಒಗದೆ. ಹ್ಯಾಂಡಗ್ರೇನೇಡು ಒಗೆದೆ ಕಾಲೇಜು ಮ್ಯಾಲ ಕಲ್ಲು ತೂರಿದೆ. ಇನ್ಸಪೆಕ್ಟರ ನನ್ನ ಹಿಡಿರಿ, ನನ್ನ ಶಿಕ್ಷಾ ಮಾಡಿರಿ, ಫಾಶಿಗೇರಿಸಿರಿ (ಅಳುವನು)

ಸುಭಾಷ : (ಆತಂಕದಿಂದ) ನಾಡಗೌಡಾ ?

ನಾಟಕಕಾರ : (ಹುಚ್ಚುನಗೆ ನಕ್ಕು) ಇವರಿಗೆಲ್ಲಾ ನನ್ನದಶಿಂದ ಆಸ್ಥಾ ಭಾಳ, ಅವರೇನು ಹೇಳಿದರೂ ಕೇಳಬ್ಯಾಡಿರಿ.

ಕೇಶವ : (ನಾಟಕಕಾರನ ಕೈಎಳೆದು) ಆದರ ನಾವೂ ಇದ್ದೆವು ಅವರಾಗ,

ನಾಟಕಕಾರ : (ಮತ್ತೆ ನಕ್ಕು) ನೋಡಿದಿರಿಲ್ಲೋ ಆ ಇನ್ಸಪೆಕ್ಟರ ನಡೀರಿ ಹೋಗೋಣು (ಕೇಶವನ ಕೈ ಬಿಡಿಸಿಕೊಂಡು) ನಿಮಗೂ ತಡ ಆಗ್ತದ ಮತ್ತ (ಸಬ್‌ಇನಸ್ಪೆಕ್ಟರ ಮಿಕ್ಕವರತ್ತ ನೋಡಿ ನಾಟಕಕಾರ ನನ್ನು ಒಯ್ಯುತ್ತಿದ್ದಂತೆ—)

(ತೆರೆ ಬೀಳುವುದು)

# ಲೇಖಕರ ಪರಿಚಯ

## ಗಿರೀಶ ಕಾರ್ನಾಡ

ರಂಗಭೂಮಿ ಮತ್ತು ರಂಗ ಸಾಹಿತ್ಯಕ್ಕೆ ಗಿರೀಶ ಕಾರ್ನಾಡರ ಹೆಸರು ಮನೆ ಮಾತಾಗಿದೆ. ಒಳ್ಳೆಯ ನಟರು ಹಾಗೂ ಚಲನ ಚಿತ್ರ ನಿರ್ದೇಶಕರಾದ ಗಿರೀಶ ಕಾರ್ನಾಡರು ಬರೆದ ನಾಟಕಗಳಲ್ಲಿ 'ತುಘಲಕ್' ನಾಟಕ ತುಂಬ ಮಹತ್ವಪೂರ್ಣವಾದಂತಹ ಕೃತಿ. ಹಿಟ್ಟಿನ ಹುಂಜ, ಯಯಾತಿ, ಅಂಜುಮಲ್ಲಿಗೆ, ಹಯವದನ ಹಾಗೂ ಮಾನಿಷಾದ ಇವರು ಬರೆದ ನಾಟಕಗಳಾಗಿವೆ. 'ಸಂಸ್ಕಾರ' ಚಿತ್ರದಲ್ಲಿ ಇವರು ಪ್ರಮುಖ ಪಾತ್ರ ವಹಿಸಿದ್ದರು. ಬಿ.ವಿ. ಕಾರಂತರು ಹಾಗೂ ಗಿರೀಶ ಕಾರ್ನಾಡರು ಸೇರಿ ನಿರ್ದೇಶಿಸಿದ ಎರಡು ಚಿತ್ರಗಳು 'ತಬ್ಬಲಿ ನೀನಾದೆ ಮಗನೆ', ಮತ್ತು 'ವಂಶವೃಕ್ಷ'ಕ್ಕೆ ಪ್ರಶಸ್ತಿಗಳು ಬಂದಿವೆ. ಇವರು ನಿರ್ದೇಶಿಸಿದ 'ಕಾಡು'ಚಿತ್ರಕ್ಕೆ ಪ್ರಶಸ್ತಿ ಬಂದಿದೆ. ಇವರು ಪುಣೆಯಲ್ಲಿರುವ ಭಾರತೀಯ ಚಲನಚಿತ್ರ ಮತ್ತು ದೂರದರ್ಶನ ಸಂಸ್ಥೆಯ ನಿರ್ದೇಶಕರಾಗಿಯೂ ಕೆಲಸ ನಿರ್ವಹಿಸಿದ್ದಾರೆ. ಹಲವಾರು ಕನ್ನಡ ಮತ್ತು ಹಿಂದಿ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಇವರಿಗೆ 'ಪದ್ಮಶ್ರೀ' ಪ್ರಶಸ್ತಿಯೂ ದೊರಕಿದೆ.

ಶ್ರೀ ನ. ರತ್ನ

ಎಲ್ಲಿಗೆ, ಗೋಡೆ ಬೇಕೇ ಗೋಡೆ, ಬೊಂತೆ ಮುಂತಾದ ಅಸಂಗತ ನಾಟಕಗಳನ್ನು ಬರೆದು ನ. ರತ್ನ ಅವರು ಹೆಸರು ಗಳಿಸಿಕೊಂಡಿದ್ದಾರೆ. ಹೊಸ ಬಗೆಯ ನಾಟಕಗಳನ್ನು ಬರೆಯುವದರಲ್ಲಿ ಆಡುವ ಮತ್ತು ಆಡಿಸುವದರಲ್ಲಿ ಇವರಿಗೆ ಹೆಚ್ಚಿನ ಆಸಕ್ತಿ. ಇವರು ಒಳೆಯ ನಟರೂ ಹೌದು.

ಶ್ರೀ ಪಿ. ಲಂಕೇಶ್

ಕನ್ನಡದ ಹೊಸ ನಾಟಕಕಾರರಲ್ಲಿ ಪಿ. ಲಂಕೇಶ್ ಅವರ ಹೆಸರು ತುಂಬ ಮಹತ್ವಪೂರ್ಣವಾಗಿದೆ. ಭಾಷೆ, ತಂತ್ರಶೈಲಿ, ಅಭಿನಯ ಎಲ್ಲ ದೃಷ್ಟಿಯಿಂದಲೂ ಸುಂದರವಾದಂತಹ ಏಕಾಂಕ ನಾಟಕಗಳನ್ನು ಬರೆದ ಪಿ. ಲಂಕೇಶ್ ಅವರು ರಂಗ ಸಾಹಿತ್ಯಕ್ಕೆ ಹೊಸತನ ತಂದು ಕೊಟ್ಟಿದ್ದಾರೆ. ಇವರ ಸಂಕ್ರಾಂತಿ, ಕ್ರಾಂತಿ ಬಂತು ಕ್ರಾಂತಿ, ತೆರೆಗಳು, ಟಿ. ಪ್ರಸನ್ನನ ಗೃಹಸ್ಥಾಶ್ರಮ ಮುಂತಾದ ನಾಟಕಗಳು ಕನ್ನಡ ನಾಟಕ ಸಾಹಿತ್ಯದಲ್ಲಿ ಗಮನಾರ್ಹವಾದಂತಹ ಕೃತಿಗಳಾಗಿವೆ. ಬಿರುಕು ಮತ್ತು ಮುಸ್ಸಂಜೆಯ ಕಥಾ ಪ್ರಸಂಗ ಇವರು ಬರೆದ ಮಹತ್ವಪೂರ್ಣ ಕಾದಂಬರಿಗಳಾಗಿವೆ. ಶ್ರೇಷ್ಠ ಕವಿಗಳು, ಕಾದಂಬರಿಕಾರರು, ನಾಟಕಕಾರರೂ ಆದ ಪಿ. ಲಂಕೇಶ್ ಅವರು ಕನ್ನಡದ ಅತ್ಯಂತ ಪ್ರತಿಭಾವಂತ ಲೇಖಕರಲ್ಲೊಬ್ಬರಾಗಿದ್ದಾರೆ. ಪಲ್ಲವಿ, ಅನುರೂಪ. ಖಂಡವಿದಕೋ ಮಾಂಸವಿದೆಕೋ, ಎಲ್ಲಿಂದಲೋ ಬಂದವರು- ಇವು ಪಿ. ಲಂಕೇಶರು ನಿರ್ದೇಶಿಸಿದ ಕನ್ನಡ ಚಲನ ಚಿತ್ರಗಳು. ಪಲ್ಲವಿ ಚಿತ್ರಕ್ಕೆ, ಶ್ರೇಷ್ಠ ನಿರ್ದೇಶನಕ್ಕಾಗಿ 1976ರಲ್ಲಿ ಕೇಂದ್ರ ಸರಕಾರದ ಪ್ರಶಸ್ತಿ ದೊರಕಿದೆ.

ಸದ್ಯ ಇವರು "ಲಂಕೇಶ್" ಪತ್ರಿಕೆ ಎನ್ನುವ ವಾರಪತ್ರಿಕೆಯನ್ನು ಹೊರತರುತ್ತಿದ್ದಾರೆ.

## ಶ್ರೀ ಗೋ. ರು. ಚನ್ನಬಸಪ್ಪ

ಜಾನಪದ ಕಲೆ ಮತ್ತು ಸಾಹಿತ್ಯದಲ್ಲಿ ಗೋ. ರು. ಚನ್ನಬಸಪ್ಪ ಅವರು ಗಮನಾರ್ಹವಾದಂತಹ ಕೆಲಸ ಮಾಡಿದ್ದಾರೆ. ಅವರು ಒರೆದ 'ಕರ್ನಾಟಕ ಜನಪದ ಕಲೆಗಳು' ಒಂದು ಅಪೂರ್ವ ಗ್ರಂಥ. ಜನಪದ ಕಲೆ, ಸಂಗೀತ ಮತ್ತು ಸಾಹಿತ್ಯದ ಬಗ್ಗೆ ನಿಖರವಾಗಿ ಬರೆಯಬಲ್ಲ ಮತ್ತು ಮಾತಾಡಬಲ್ಲ ವ್ಯಕ್ತಿಗಳಲ್ಲಿ ಗೋ. ರು. ಚನ್ನಬಸಪ್ಪ ಅವರು ಮಹತ್ವಪೂರ್ಣ ವ್ಯಕ್ತಿಯಾಗಿದ್ದಾರೆ. ಸಾಕ್ಷಿಕಲ್ಲು ಅವರು ಬರೆದ ಐದು ಜಾನಪದ ರೂಪಕಗಳು. ಈ ಸಂಗ್ರಹದಿಂದ ಆಯ್ದುಕೊಳ್ಳಲಾಗಿದೆ.

## ಡಾ. ಚಂದ್ರಶೇಖರ ಕಂಬಾರ

ಡಾ. ಚಂದ್ರಶೇಖರ ಕಂಬಾರರು ಸುಪ್ರಸಿದ್ಧ ನಾಟಕಕಾರರು ಹಾಗೂ ಕವಿಗಳು. ರಾಜ್ಯ ಸಾಹಿತ್ಯ ಅಕಾಡೆಮಿ, ವರ್ಧಮಾನ ಪ್ರಶಸ್ತಿ ಗಳಿಸಿಕೊಂಡಿದ್ದಾರೆ. ನಾಟಕ ಸಾಹಿತ್ಯಕ್ಕೆ ಕೊಡ ಲಾಗುವ ದೇಶದ ಅತ್ಯಂತ ಪ್ರತಿಷ್ಠಿತವಾದ ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿಯನ್ನು ಪಡೆದುಕೊಂಡಿದ್ದಾರೆ. ಇವರು ಚಲನ ಚಿತ್ರ ನಿರ್ದೇಶಕರು ಹೌದು. ಋಷ್ಯಶೃಂಗ, ಜೋಕುಮಾರ ಸ್ವಾಮಿ, ಜೈಸಿದನಾಯ್ಕ, ನಾಯೀಕತೆ, ಅವರ ಮಹತ್ವಪೂರ್ಣ ಗ್ರಂಥಗಳಾಗಿವೆ. ಇವರ 'ಸಂಗೀತ' ಚಲನ ಚಿತ್ರಕ್ಕೆ 1980 - 81ರ ರಾಜ್ಯಪ್ರಶಸ್ತಿ ದೊರಕಿದೆ.

ಶ್ರೀ ಟಿ. ಎನ್. ಸೀತಾರಾಮು

ಹೊಸಶೈಲಿ ಮತ್ತು ಹೊಸ ತಂತ್ರಗಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡು ಬರೆಯಬಲ್ಲ ನಾಟಕಕಾರರಲ್ಲಿ ಟಿ. ಎನ್. ಸೀತಾರಾಮು ಅವರ ಹೆಸರು ತುಂಬ ಆದರದಿಂದ ತೆಗೆದುಕೊಳ್ಳಬಹುದಾಗಿದೆ. ಅವರು ಬರೆದ ಪೂರ್ಣಾವಧಿಯ ನಾಟಕ 'ಆಸ್ಫೋಟ' ತುಂಬ ಗಮನಾರ್ಹವಾದಂತಹ ಕೃತಿ. ಇವರು ಒಳ್ಳೆಯ ನಟರೂ ಆಗಿದ್ದಾರೆ.

ಡಾ. ದ. ರಾ. ಬೇಂದ್ರೆ

ದ. ರಾ. ಬೇಂದ್ರೆ ಅವರು ನಮ್ಮ ನಾಡಿನ ಅತ್ಯಂತ, ಪ್ರಸಿದ್ಧರಾದ ಕವಿಗಳಲ್ಲೊಬ್ಬರು ಆಧುನಿಕ ಭಾವಗೀತೆಗಳ ಆದ್ಯ ಪ್ರವರ್ತಕರು. ಸಾಮಾನ್ಯವಾಗಿ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಸಮರ್ಥ ರೀತಿಯಿಂದ ಬರೆದ ಪ್ರತಿಭಾವಂತ ಹಿರಿಯ ಲೇಖಕರಲೊಬ್ಬರಾದ ಬೇಂದ್ರೆಯವರ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ, ಕೇಳ್ಕರ್ ಪ್ರಶಸ್ತಿ, ಹಾಗೂ ದೇಶದ ಅತ್ಯುನ್ನತ ಸಾಹಿತ್ಯ ಪ್ರಶಸ್ತಿಯಾದ ಜ್ಞಾನಪೀಠ ಪ್ರಶಸ್ತಿಯನ್ನು ಪಡೆದುಕೊಂಡಿದ್ದಾರೆ.

## ಶ್ರೀ ಎಂ. ಎಸ್. ಕೆ. ಪ್ರಭು

ಶ್ರೀ ಎಂ. ಎಸ್. ಕೆ. ಪ್ರಭು ಬರೆದ ನಾಟಕಗಳಲ್ಲಿ 'ಕಡೆಗಲ್ಲಿ ಕಡೇಮನೆ', 'ತಪ್ಪಿಸಿಕೊಂಡಿದ್ದಾರೆ', 'ಮುಸ್ಸಂಜೆಯ ಒಂದು ಘಟನೆ' ಮುಖ್ಯವಾಗಿವೆ. 'ಒಕ' ಇವರ ಪೂರ್ಣಾವಧಿಯ ನಾಟಕ. ಶ್ರೀ ಪ್ರಭು ಅವರು ಆಕಾಶವಾಣಿ ಧಾರವಾಡ ಕೇಂದ್ರದಲ್ಲಿ ಕೆಲಸದಲ್ಲಿದ್ದಾರೆ. ವರ್ಧಮಾನ ಪೀಠದ ಉದಯೋನ್ಮುಖ ಸಾಹಿತ್ಯ ಪ್ರಶಸ್ತಿಯೂ 'ಒಕ' ನಾಟಕಕ್ಕೆ ದೊರೆತಿದೆ.

## ಶ್ರೀ ರಂ. ಶಾ.

ರಂ. ಶಾ. ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಹೊಸ ಹೆಸರೇನಲ್ಲ. 'ಸಾವಿತ್ರಿ' 'ತಾಯಿಸಾಹೇಬ', ಕಾದಂಬರಿಗಳಿಂದ ಈಗಾಗಲೇ ರಂ.ಶಾ. ಬೆಳಕಿಗೆ ಬಂದಿದ್ದಾರೆ. ಇವರ ಇನ್ನೊಂದು ಕಾದಂಬರಿ 'ನೂರು ತಲೆ ಹತ್ತು ಕಾಲು', ಪುಣೆಯುವರೆಗೆ ಇವರ ಇನ್ನೊಂದು ಕೃತಿ. 'ಸಾವಿತ್ರಿ' ಕಾದಂಬರಿ ಚಲನಚಿತ್ರವಾಗಿದೆ. ಇವರು ಬರೆದ ನಾಟಕಗಳ ಸಂಖ್ಯೆ ತೀರ ಕಡಿಮೆ. ಈ ಸಂಕಲನ ದಲ್ಲಿ ಸೇರಿಸಿದ ವೈಶ್ವಾನರ ನಾಟಕ 1972ರ 'ಪ್ರಜಾವಾಣಿ' ನಾಟಕ ಸ್ಪರ್ಧೆಯಲ್ಲಿ ಎರಡನೇ ಬಹುಮಾನ ಪಡೆದು ಕೊಂಡಿದೆ.

SRI JAGADGURU VISHWARADHYA
JNANA SIMHASAN JNANAMANDIR
LIBRARY,
Jangamwadi Math, VARANASI.
Acc. No.......

